ಪ್ರತಿಭಾವಂತ ಸಂಸದೀಯ ಪಟುಗಳ ಬದುಕು ಬರಹ ಮಾಲಿಕೆ

# ಡಾ|| ಲಂಕಾ ಸುಂದರಂ



ಲೋಕಸಭಾ ಸಚಿವಾಲಯ ನವದೆಹಲಿ, 1990

ಕನ್ನಡ ಅನುವಾದ :

ವಿಧಾನ ಸಭೆ ಸಚಿವಾಲಯ, ವಿಧಾನ ಸಭೆ ಬೆಂಗಳೂರು

ಪ್ರತಿಭಾವಂತ ಸಂಸದೀಯ ಪಟುಗಳ ಬದುಕು ಬರಹ ಮಾಲಿಕ

# ಡಾ|| ಲಂಕಾ ಸುಂದರಂ

ಲೋಕಸಭಾ ಸಚಿವಾಲಯ ನವದೆಹಲಿ, 1990

ಕನ್ನಡ ಅನುವಾದ:

ವಿಧಾನ ಸಭೆ ಸಚಿವಾಲಯ, ವಿಧಾನ ಸಭೆ ಬೆಂಗಳೂರು

Dr. Lanka Sudaram : Prathibhavantha samsadiya Patugala Baduku Baraha Malike (Eminent Parliamentarian Series) Translated & published by Karnataka Legislative Assembly Secretariat, Vidhana Soudha, Bangalore-01.

Pages - 131

Rupees - 15



First Edition, May 2004.

Number of Copies : 1000

Printed and Designed by :
Government Printing Press,
Bangalore-01.

ಡಾ: ಲಂಕಾ ಸುಂದರಂ: ಪ್ರತಿಭಾವಂತ ಸಂಸದೀಯ ಪಟುಗಳ ಬದುಕು ಬರಹಮಾಲಿಕೆ ಕನ್ನಡ ಭಾಷಾಂತರ ಮತ್ತು ಮುದ್ರಣ ಕರ್ನಾಟಕ ವಿಧಾನಸಭೆ ಸಚಿವಾಲಯ, ವಿಧಾನ ಸೌಧ, ಬೆಂಗಳೂರು - 1 ಇವರಿಗೆ ಸೇರಿರುತ್ತದೆ.

ಬೆಲೆ ರೂ : 15

ಪುಟ ಸಂಖ್ಯೆ : 131



ಮೊದಲನೆ ಮುದ್ರಣ : ಮೇ 2004
ಪ್ರತಿಗಳು : 1,000
ಮುಖ ಪುಟ ವಿನ್ಯಾಸ ಮತ್ತು ಮುದ್ರಣ:ಸರ್ಕಾರಿ ಮುದ್ರಣಾಲಯ, ಬೆಂಗಳೂರು -560 001

# ಮುನ್ನುಡಿ

ನಮ್ಮ ಖ್ಯಾತ ಸಂಸದೀಯ ಪಟುಗಳು ಈ ರಾಷ್ಟ್ರದ ಮತ್ತು ಸಂಸದೀಯ ಸಂಸ್ಥೆಗೆ ನೀಡಿರುವ ಕಾಣಿಕೆಗಳನ್ನು ನೆನಪಿಸಿ, ಅವುಗಳನ್ನು ದಾಖಲಿಸುವ ಮೂಲಕ ನಮ್ಮ ನಮನಗಳನ್ನು ಸಲ್ಲಿಸುವ ಉದ್ದೇಶದಿಂದ ಭಾರತೀಯ ಸಂಸದೀಯ ತಂಡವು ತೆಗದುಕೊಂಡ ನಿರ್ಣಯದ ಅನುಸಾರ "ಪ್ರತಿಭಾವಂತ ಸಂಸದೀಯ ಪಟುಗಳ ಬದುಕು ಬರಹಗಳ ಮಾಲಿಕೆ" ಎಂಬ ಹೊಸ ಮಾಲಿಕೆಯನ್ನು ಮಾರ್ಚ್ 1990 ರಲ್ಲಿ ಪ್ರಾರಂಭಿಸಲಾಯಿತು. ಈ ಮಾಲಿಕೆಗಳಲ್ಲಿ ಎರಡನೆಯದಾದ ಪ್ರಸ್ತುತ ಮಾಲಿಕೆಯು ನುರಿತ ಸಂಸದೀಯ ಪಟುವಾಗಿದ್ದ ಡಾ. ಸುಂದರಂರವರು ನಮ್ಮ ಸಮಾಜಕ್ಕೆ ಸಲ್ಲಿಸಿದ ಅಮೂಲ್ಯ ಸೇವೆಯನ್ನು ದಾಖಲಿಸುವ ಒಂದು ಪ್ರಯತ್ನವಾಗಿದೆ. ಹಿಂದಿ ಮತ್ತು ಆಂಗ್ಲಭಾಷೆಗಳೆರಡರಲ್ಲೂ ಪ್ರಕಟವಾಗಿರುವ ಪ್ರಸ್ತುತ "ಬದುಕು - ಬರಹ" ಪುಸ್ತಿಕೆಯು 1990 ರ ಜುಲೈ 6 ರಂದು ಆಚರಿಸಲಿರುವ ಈ ಮಹಾನ್ ಸಂಸದೀಯ ಪಟುವಿನ ಜನ್ಮ ದಿನೋತ್ಸವ ಸಮಾರಂಭದಲ್ಲಿ ಬಿಡುಗಡೆಯಾಗುತ್ತಿದೆ.

ಪ್ರಸಕ್ತ ಪುಸ್ತಿಕೆಯಲ್ಲಿ ಎರಡು ಭಾಗಗಳಿವೆ. ಪ್ರಥಮ ಭಾಗದಲ್ಲಿ ಡಾ. ಸುಂದರಂರವರ ಬಾಲ್ಯ, ಅವರ ಶೈಕ್ಷಣಿಕ ಸಾಧನೆಗಳು, ಆ ಕಾಲದ ಸಾಮಾಜಿಕ ಮತ್ತು ಆರ್ಥಿಕ ಸಮಸ್ಯೆಗಳನ್ನು ನಿವಾರಿಸಲು ಅವರು ನೀಡಿದ ಕಾಣಿಕೆಗಳು, ಪತ್ರಿಕೋದ್ಯಮದಲ್ಲಿ ಅವರಿಗಿದ್ದ ನಿರರ್ಗಳ ಮಾತುಗಾರಿಕೆಯ ಕಲೆ, ಇವೆಲ್ಲವುಗಳಿಗೂ ಮಿಗಿಲಾದ ವೈಶಿಷ್ಟ್ಯ ಪೂರ್ಣವಾದ ಸಂಸದೀಯ ಬದುಕಿನ ಕೆಲವು ಇಣುಕುನೋಟಗಳ ಸಂಕ್ಷಿಪ್ತ ಚಿತ್ರಣವಿದೆ. ಡಾ. ಸುಂದರಂರವರ ವ್ಯಕ್ತಿಚಿತ್ರಣ ಸಂಕ್ಷಿಪ್ತವಾಗಿದ್ದರೂ ಅವರ ಸಂಸದೀಯ ಜೀವನ ಮೇರುಮಟ್ಟದ್ದಾಗಿದ್ದು, ಅವರು ಸದನದಲ್ಲಿ ನಿರ್ವಹಿಸಿದ ಕಾರ್ಯದಿಂದಾಗಿ ಅಚ್ಚಳಿಯದ ಮುದ್ರೆಯನ್ನು ಒತ್ತಿದ್ದಾರೆ.

ಅವರ ಜನ್ಮ ದಿನೋತ್ಸವ ಸಂದರ್ಭದಲ್ಲಿ ಡಾ. ಸುಂದರಂರವರ ನೆನಪಿಗೆ ನಮ್ಮ ಗೌರವಪೂರ್ವಕ ನಮನಗಳನ್ನು ಅರ್ಪಿಸುತ್ತಾ ಈ ಪುಸ್ತಿಕೆ ಒಂದು ಆಸಕ್ತದಾಯಕ, ಉಪಯುಕ್ತ ಗ್ರಂಥವಾಗಲೆಂದು ಆಶಿಸುತ್ತೇವೆ.

ಸುಭಾಶ್ ಕಶ್ಯಪ್<br>
ಮಹಾ ಕಾರ್ಯದರ್ಶಿ, ಲೋಕಸಭೆ<br>
ಹಾಗೂ ಮಹಾ ಕಾರ್ಯದರ್ಶಿ,<br>
ಭಾರತೀಯ ಸಂಸದೀಯ ತಂಡ

ನವದೆಹಲಿ,<br>
ಜೂನ್, 1990.

ಪೀಠಿಕೆ

ನಮ್ಮ ದೇಶ ಸ್ವಾತಂತ್ರ್ಯದ ಸುವರ್ಣ ಮಹೋತ್ಸವವನ್ನು ಆಚರಿಸುತ್ತಿರುವ ಈ ಸುಸಂದರ್ಭದಲ್ಲಿ ದೇಶಕ್ಕಾಗಿ ದುಡಿದು ಮಡಿದ ಹಾಗೂ ನವ ಭಾರತ ನಿರ್ಮಾಣಕ್ಕಾಗಿ ಶ್ರಮಿಸಿದ ಪ್ರತಿಭಾನ್ವಿತ ಸ್ವಾತಂತ್ರ್ಯ ಹೋರಾಟಗಾರರು ಮತ್ತು ಸಂಸದೀಯ ಪಟುಗಳನ್ನು ನೆನಸಬೇಕಾದುದು ನಮ್ಮೆಲ್ಲರ ಆದ್ಯ ಕರ್ತವ್ಯವಾಗಿರುತ್ತದೆ. ಈಗಾಗಲೇ ಲೋಕಸಭಾ ಕಾರ್ಯಾಲಯದವರು ಇಂತಹ ಗಣ್ಯರ ಬಗ್ಗೆ ಅನೇಕ ಕಿರಿಹೊತ್ತಿಗೆಗಳನ್ನು ಹಿಂದಿ ಮತ್ತು ಆಂಗ್ಲಭಾಷೆಗಳಲ್ಲಿ ಹೊರತಂದಿರುತ್ತಾರೆ. ಆದರೆ ನಮ್ಮ ಕರ್ನಾಟಕ ರಾಜ್ಯದ ಜನಪ್ರತಿನಿಧಿಗಳಿಗೆ ಹಾಗೂ ಜನತೆಗೆ ಈ ಪ್ರತಿಭಾವಂತರುಗಳ ಬದುಕು ಬರಹ ಮತ್ತು ಸಾಧನೆಗಳನ್ನು ಪರಿಚಯಿಸುವ ದೃಷ್ಟಿಯಿಂದ ಈ ಕಿರು ಹೊತ್ತಿಗೆಗಳನ್ನು ಕನ್ನಡ ಭಾಷೆಗೆ ಅನುವಾದಿಸಿ ಪ್ರಕಟಿಸುವ ಒಂದು ಕಾರ್ಯಕ್ರಮವನ್ನು ಹಮ್ಮಿಕೊಳ್ಳಬೇಕೆಂದು ವಿಧಾನ ಪರಿಷತ್ತಿನ ಅಂದಿನ ಸಭಾಪತಿಯವರಾಗಿದ್ದ ದಿವಂಗತ ಡಿ.ಬಿ. ಕಲ್ಮಣ್‌ಕರ್ ಹಾಗೂ ವಿಧಾನ ಸಭೆಯ ಅಂದಿನ ಅಧ್ಯಕ್ಷರಾಗಿದ್ದ ಶ್ರೀ ರಮೇಶ್ ಕುಮಾರ್ ಅವರುಗಳು ಅಪೇಕ್ಷಿಸಿದಂತೆ ಈ ಕಾರ್ಯವನ್ನು ವಿಧಾನಸಭೆಯ ಸದಸ್ಯರಾದ ಶ್ರೀ ಬಿ.ಬಿ. ಶಿವಪ್ಪನವರ ಅಧ್ಯಕ್ಷತೆಯಲ್ಲಿ ರಚಿತವಾದ ವಿಧಾನಮಂಡಲದ ಗ್ರಂಥಾಲಯ ಉಪ ಸಮಿತಿಗೆ ವಹಿಸಲಾಗಿತ್ತು. ಈ ಉಪಸಮಿತಿಯು ಕಾರ್ಯ ಪ್ರವೃತ್ತವಾಗಿ ಭಾಷಾಂತರ ಕಾರ್ಯವನ್ನು ಕರ್ನಾಟಕ ರಾಜ್ಯದ ಭಾಷಾಂತರ ನಿರ್ದೇಶನಾಲಯದ ಸಹಯೋಗದೊಂದಿಗೆ ಹಾಗೂ ನುರಿತ ಭಾಷಾಂತರಕಾರರುಗಳ ಮೂಲಕ ತಯಾರಿಸಿರುವ ಡಾ: ಲಂಕಾಸುಂದರಂ ಅವರ ಕೃತಿಯನ್ನು ತಮ್ಮ ಮುಂದಿಡುತ್ತಿದ್ದೇನೆ.

ಇದು ಲೋಕಸೇವಾ ಸಭಾ ಸಚಿವಾಲಯದವರು "Eminent Parliamentarians Monograph Series" ಎಂಬ ಆಂಗ್ಲಭಾಷೆಯ ಕನ್ನಡಾನುವಾದವಾಗಿದ್ದು, ಸದರಿ ಗ್ರಂಥದ ಪ್ರಕಾಶಕರಾದ ಲೋಕಸಭಾ ಸಚಿವಾಲಯಕ್ಕೆ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಈ ಅನುವಾದವನ್ನು ನಿರ್ವಹಿಸಿಕೊಟ್ಟ ಶ್ರೀ ಬಿ. ಜವರಯ್ಯ ನಿರ್ದೇಶಕರು ಭಾಷಾಂತರ ನಿರ್ದೇಶನಾಲಯ ಅಂದವಾಗಿ ಮುದ್ರಿಸಿಕೊಟ್ಟ ಸರ್ಕಾರಿ ಮುದ್ರಣಾಲಯದ ನಿರ್ದೇಶಕರಿಗೂ ಹಾಗೂ ಉಪ ಸಮಿತಿಯ ಸದಸ್ಯರುಗಳಿಗೆ ಧನ್ಯವಾದಗಳನ್ನು ಅರ್ಪಿಸುತ್ತೇನೆ.

ಪ್ರತಿಭಾವಂತ ಸಂಸದೀಯ ಪಟುಗಳ ಬಗೆಗಿನ ಈ ಕಿರುಹೊತ್ತಿಗೆಗಳು ಮಾನ್ಯ ಸದಸ್ಯರುಗಳಿಗೆ ಸಂಸದೀಯ ವಿಷಯಗಳಲ್ಲಿ ಅನುಕೂಲ ಹಾಗೂ ಅನುಭವ ನೀಡುತ್ತದೆಂದು ಭಾವಿಸುತ್ತೇನೆ.

ಟಿ. ರಾಜಣ್ಣ
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ

ಬೆಂಗಳೂರು
ಮೇ, 2004

# ಪರಿವಿಡಿ

## ಭಾಗ - ಒಂದು

## ವೃತ್ತಾಂತ ಬದುಕು



## ಭಾಗ - ಎರಡು

## ವಿಚಾರಧಾರೆಗಳು

ಲೋಕಸಭೆಯಲ್ಲಿ ಡಾ. ಸುಂದರಂರವರು ಮಾಡಿದ ಕೆಲವು ಆಯ್ದ ಭಾಷಣಗಳ ಉದ್ಧೃತ ಭಾಗಗಳು

## ಡಾ. ಲಂಕಾ ಸುಂದರಂ - ಒಂದು ವ್ಯಕ್ತಿ ಚಿತ್ರ

ಪ್ರಖ್ಯಾತ ಸಂಸದೀಯ ಪಟುವೂ, ಉತ್ಸಾಹಿ ಹಾಗೂ ಪರಿಣಾಮಕಾರಿ ವಾಗ್ಮಿಯೂ, ಅತ್ಯುತ್ತಮ ಬರಹಗಾರರೂ, ಪ್ರಕಾಂಡ ಪಂಡಿತರೂ, ಹೆಸರಾಂತ ಪತ್ರ ಕರ್ತರೂ ಮತ್ತು ಸುಪ್ರಸಿದ್ಧ ಅರ್ಥ ಶಾಸ್ತ್ರಜ್ಞರೂ ಆದ ಡಾ. ಲಂಕಾಸುಂದರಂ ಅವರು 1905ನೇ ಇಸವಿ ಜುಲೈ ಒಂದರಂದು ಜನ್ಮ ತಾಳಿದರು. ಶ್ರೀ ಲಂಕಾ ಸೀತಾರಮಯ್ಯನವರು ಅವರ ತಂದೆ. ಇಸವಿ 1611 ರಲ್ಲಿ ಬ್ರಿಟಿಷರು ತಮ್ಮ ಎರಡನೇ ವಸಾಹತುವನ್ನು ಸ್ಥಾಪಿಸಿದ ಸ್ಥಳವೆಂದು ಚರಿತ್ರೆಯಲ್ಲಿ ಹೆಸರು ಪಡೆದಂಥ ಅಂದಿನ ಅವಿಭಾಜ್ಯ ಮದ್ರಾಸು ಪ್ರೆಸಿಡೆನ್ಸಿಯ ಈಶಾನ್ಯ ದಿಕ್ಕಿನಲ್ಲಿರುವ ಬಂದರು ಪಟ್ಟಣವಾದ ಮಚಲೀಪಟ್ಟಣ ಇವರ ಜನ್ಮ ಸ್ಥಳ. ತನ್ನ ಬಾಲ್ಯದಿಂದಲೇ ಉನ್ನತ ಲಕ್ಷಣಗಳನ್ನು ಪ್ರತಿಬಿಂಬಿಸುತ್ತಿದ್ದ ಎಳೆಯ ಬಾಲಕ ಸುಂದರಂ ರವರ ಮನಸ್ಸಿನ ಮೇಲೆ ತನ್ನ ಹುಟ್ಟೂರಿನ ಸುಂದರ ಪ್ರಕೃತಿ ತಾಣ, ಸದಾ ತುಂಬಿ ಹರಿಯುತ್ತಿದ್ದ ಕೃಷ್ಣಾ ನದಿ, ಹಾಗೆಯೇ ಆ ಪ್ರದೇಶದಲ್ಲಿನ ಬಡತನ ಮತ್ತು ಸಂಪನ್ಮೂಲಗಳ ಕೊರತೆಗಳು ಗಾಢ ಪರಿಣಾಮ ಬೀರಿದ್ದವು.

ಚಿಕ್ಕಂದಿನಿಂದಲೂ ಚುರುಕಾಗಿದ್ದ ಡಾ. ಸುಂದರಂ ಅವರು ತಮ್ಮ ಪ್ರಾರಂಭಿಕ ಶಿಕ್ಷಣವನ್ನು ಖಾಸಗೀ ವಿದ್ಯಾ ಸಂಸ್ಥೆಯಿಂದ ಪಡೆದರು. 10ನೇ ತರಗತಿಯವರೆಗೆ "ದಿ ಹಿಂದೂ ಪ್ರೌಢ ಶಾಲೆ" ಯಲ್ಲಿ ವ್ಯಾಸಂಗ ಮಾಡಿದರು. ನಂತರದ ಶಿಕ್ಷಣವನ್ನು ಡಾ. ಕೆ. ರಾಬರ್ಟ್ ನೊಬಲ್ ಅವರಿಂದ ಸ್ಥಾಪನೆಗೊಂಡ ಮಚಲೀಪಟ್ಟಣದ ಪ್ರಖ್ಯಾತ ಶಿಕ್ಷಣ ಸಂಸ್ಥೆ" ನೊಬಲ್ ಕಾಲೇಜ್" ನಿಂದ ಪಡೆದರು. ಅವರಲ್ಲಿದ್ದ ತೀಕ್ಷ್ಣ ಬುದ್ಧಿಶಕ್ತಿ ಮತ್ತು ವೈಜ್ಞಾನಿಕ ದೃಷ್ಟಿಕೋನಗಳು ಅವರ ಪ್ರಾರಂಭಿಕ ವಿದ್ಯಾರ್ಥಿ ದಿನಗಳಿಂದಲೇ ಅವರನ್ನೊಬ್ಬ ಗಂಭೀರ ಮತ್ತು ಭರವಸೆ ಮೂಡಿಸುವಂಥ ವಿದ್ಯಾರ್ಥಿಯನ್ನಾಗಿ ರೂಪಿಸಿದವು. 1922 ರಲ್ಲಿ ಶ್ರೀ ಸುಂದರಂ ಅವರು ತಮ್ಮ 17ನೇ ಎಳೆಯ ವಯಸ್ಸಿನಲ್ಲಿಯೇ ಶ್ರೀಮತಿ ಕಮಲಾದೇವಿಯರೊಡನೆ ವಿವಾಹವಾದರು. ಆದರೆ ಅವರ ಜ್ಞಾನದಾಹ ಯಾವುದೇ ತೊಡಕಿಲ್ಲದೆ ಮುಂದುವರೆಯಿತು.

ಡಾ. ಸುಂದರಂರವರು ಇನ್ನೂ 20 ವರ್ಷದವರಿದ್ದಾಗಲೇ ಬರೋಡಾದ ಶ್ರೀಮಾನ್ ಮಹಾರಾಜ ಶ್ರೀ ಸಯ್ಯಾಜಿರಾವ್ ಗಾಯಕವಾಡ್‌ರನ್ನು ಭೇಟಿ ಮಾಡುವ ಸದವಕಾಶ ಅವರಿಗೆ ದೊರೆಯಿತು. ಯುವಕನ ಅಸಾಧಾರಣ ಬುದ್ಧಿಶಕ್ತಿಯ ಹೊಳಪನ್ನು ಗ್ರಹಿಸಿದ ಮಹಾರಾಜರು, ತಮ್ಮ ಸಂಸ್ಥಾನದ ಪರವಾಗಿ ಅವರಿಗೆ ಶಿಷ್ಯವೇತನ ನೀಡಿ ಉನ್ನತ ವ್ಯಾಸಂಗವನ್ನು ಮುಂದುವರಿಸುವಂತೆ ಪ್ರೋತ್ಸಾಹಿಸಿದರು. ಲಂಕಾ ಸುಂದರಂ ಅವರು ಹೆಚ್ಚು ಕಮ್ಮಿ ತಮ್ಮ ತಾರುಣ್ಯದಲ್ಲಿಯೇ ಕಾನೂನು ಅಂತರ ಮತ್ತು ರಾಜಕೀಯ ವಿಷಯಗಳನ್ನು ಅಭ್ಯಾಸ ಮಾಡಲು ಪ್ರಾರಂಭಿಸಿದರು. ಕಾನೂನು ರಾಜಕೀಯ ಮತ್ತು ಅಂತರ ರಾಷ್ಟ್ರೀಯ ವ್ಯವಹಾರಗಳ ವಿಷಯಗಳಲ್ಲಿ ತಮ್ಮ ಹೆಚ್ಚಿನ ವ್ಯಾಸಂಗವನ್ನು ಲಂಡನ್, ಜಿನಿವಾ, ಮತ್ತು ಹೇಗ್ ನಗರಗಳಲ್ಲಿ ಮುಂದುವರೆಸಿದರು. ತಮ್ಮ ಪಿ.ಎಚ್‌ಡಿ ಪದವಿಯನ್ನು ಲಂಡನ್ನಿನಲ್ಲಿ ಪಡೆದರು. ಗೌರವಾನ್ವಿತ ಅಂತರ ರಾಷ್ಟ್ರೀಯ ಸಂಸ್ಥೆಯೆಂದು ಹೆಸರುವಾಸಿಯಾದ

"ಗ್ರೋಟಿಯಸ್ ಸಂಘ" ಲಂಡನ್, ಇಲ್ಲಿ 1931ರ ಮಾರ್ಚ್‌ನಲ್ಲಿ "ಭಾರತದ ಅಂತರ ರಾಷ್ಟ್ರೀಯ ಸ್ಥಾನಮಾನ" ಎಂಬ ವಿಷಯದ ಮೇಲೆ ಪ್ರಬಂಧವನ್ನು ಮಂಡಿಸುವುದರ ಮೂಲಕ ಆ ಸಂಘವನ್ನು ಉದ್ದೇಶಿಸಿ ಭಾಷಣ ಮಾಡಿದ ಪ್ರಪ್ರಥಮ ಭಾರತೀಯ ಎಂಬ ಹೆಗ್ಗಳಿಕೆಗೆ ಪಾತ್ರರಾದರು. ಸರಿಸುಮಾರು ಒಂದು ವರ್ಷದ ನಂತರ ಲಂಡನ್ನಿನ" ರಾಯಲ್ ಅಂತರ ರಾಷ್ಟ್ರೀಯ ವ್ಯವಹಾರಗಳ ಸಂಸ್ಥೆಯು" ಇವರ ಪ್ರಬಂಧವನ್ನು ಮಾನ್ಯ ಮಾಡಿದ್ದರಿಂದ, ಆ ಸಂಸ್ಥೆಯಿಂದ ಮಾನ್ಯತೆ ಪಡೆದ ಪ್ರಪ್ರಥಮ ಹೊರ ಭಾರತೀಯ ಎಂಬ ಹೆಗ್ಗಳಿಕೆ ಪುನಃ ಇವರಿಗೆ ಪ್ರಾಪ್ತವಾಯಿತು.

ಆದರೂ, 1931 ರಲ್ಲಿ ಜರುಗಿದ ದುಂಡು ಮೇಜಿನ ಪರಿಷತ್ತಿನ ಮಾತುಕತೆಗಳ ವಿಫಲತೆಯಿಂದಾಗಿ ಉಂಟಾದ ರಾಜಕೀಯ ಬಿರುಗಾಳಿಯಿಂದ ಲಂಕಾಸುಂದರಂರವರಿಗೆ ಇಂಗ್ಲೆಂಡಿನಲ್ಲಿದ್ದ ತಮ್ಮ ಸಮಕಾಲೀನ ಇತರೆ ವಿದ್ಯಾರ್ಥಿಗಳಂತೆ ಕಾನೂನು ವ್ಯಾಸಂಗವನ್ನು ಹೊರದೇಶದಲ್ಲಿ ಮುಂದುವರಿಸಲು ಸಾಧ್ಯವಾಗಲಿಲ್ಲ. ಸ್ವಾತಂತ್ರ್ಯ ಹೋರಾಟಕ್ಕೆ ಜನತೆಯ ಅಪೂರ್ವ ಬೆಂಬಲ ದೊರೆತ ಆ ಅವಧಿ, ರಾಷ್ಟ್ರದ ಇತಿಹಾಸದಲ್ಲಿ ನಿಜವಾಗಿಯೂ ಸ್ಮರಣೀಯವಾದುದು. ತದನಂತರದ ವರ್ಷಗಳಲ್ಲಿ ಅವರು ನಿಷ್ಠಾವಂತ ಸಮಾಜ ಕಾರ್ಯಕರ್ತರಾಗಿ, ಪರಿಣಾಮಕಾರಿ ಭಾಷಣಕಾರರಾಗಿ, ಅನ್ವೇಷಕ ಪತ್ರಕರ್ತರಾಗಿ ಮತ್ತು ಇವೆಲ್ಲಕ್ಕೂ ಮಿಗಿಲಾಗಿ ಕ್ರಿಯಾಶೀಲ ಸಂಸದೀಯಪಟುವಾಗಿ ಪರ್ಯಟನ ಜೀವನ ನಡೆಸಲು ಪ್ರಾರಂಭಿಸಿದರು.

ಇವುಗಳ ಜೊತೆಗೆ, ಆಂಧ್ರ ವಿಶ್ವವಿದ್ಯಾಲಯದ ರಾಜ್ಯಶಾಸ್ತ್ರ, ಅರ್ಥಶಾಸ್ತ್ರ ಮತ್ತು ಇತಿಹಾಸ ವಿಭಾಗಗಳ ಮುಖ್ಯಸ್ಥರಾಗಿ, ರಾಜಕೀಯ ಮತ್ತು ಸಾಮಾಜಿಕ ವಿಜ್ಞಾನಗಳ ಅಮೇರಿಕನ್ ಅಕಾಡಮಿಯ ಸದಸ್ಯರಾಗಿ ಮತ್ತು ಅಂತರ ರಾಷ್ಟ್ರೀಯ ವ್ಯವಹಾರಗಳ ಸಂಸ್ಥೆಯ ನಿರ್ದೇಶಕರೆಂದು ಆ ಸಂಸ್ಥೆಯ ಮುಖ್ಯಸ್ಥರಾಗಿ ಸೇವೆ ಸಲ್ಲಿಸುವ ಸುಯೋಗ ಡಾ. ಸುಂದರಂರವರಿಗೆ ಪ್ರಾಪ್ತವಾಗಿತ್ತು.

## ಕ್ರಿಯಾಶೀಲ ಸಂಸದೀಯ ಪಟು

ಡಾ. ಲಂಕಾ ಸುಂದರಂರವರು 1952 ರಲ್ಲಿ ಮೊದಲನೇ ಲೋಕಸಭೆಗೆ ಸ್ವತಂತ್ರ ಅಭ್ಯರ್ಥಿಯಾಗಿ ಚುನಾಯಿತರಾದರು. ಅವಧಿಯ ದೃಷ್ಟಿಯಿಂದ ತೀರಾ ಕಡಿಮೆ ಎನಿಸಿದರೂ, ಮೊದಲನೇ ಲೋಕಸಭೆಯ 5 ವರ್ಷದ ಅವಧಿ ಮುಗಿಯುವಷ್ಟರಲ್ಲಿ ಡಾ. ಲಂಕಾ ಸುಂದರಂರವರ ಸಂಸದೀಯ ಜೀವನ ಕ್ರಿಯಾಶೀಲತೆಯಿಂದ ಕೂಡಿತ್ತು. ಸದನದಲ್ಲಿ ದೊರೆಯುವ ಯಾವೊಂದು ಅವಕಾಶವನ್ನೂ ಅವರು ಕಳೆದುಕೊಳ್ಳದೆ ತಮ್ಮ ಅಮೂಲ್ಯ ವಿಚಾರ ಧಾರೆಗಳನ್ನು ಸದನದಲ್ಲಿ ಮಂಡಿಸುವುದರ ಮೂಲಕ, ಸದನದಲ್ಲಿ ತಮ್ಮ ಉಪಸ್ಥಿತಿಯ ಅಗತ್ಯತೆಯ ಅರಿವನ್ನು ಸದನಕ್ಕೆ ಮೂಡಿಸಿದ್ದರು. ಶ್ರೀಯುತರು, ಅತಿ ಉತ್ಸಾಹ ಮತ್ತು ನಿಷ್ಠೆಯಿಂದ ಸದನದಲ್ಲಿ ಭಾಗವಹಿಸಿದ 450 ಕ್ಕಿಂತಲೂ ಹೆಚ್ಚು ಸಂದರ್ಭಗಳಿಂದ ಇದು ಸ್ಪಷ್ಟವಾಗುತ್ತದೆ.

ಒಬ್ಬ ಸಮರ್ಥ ಸಂಸದೀಯ ಪಟುವಾದ ಡಾ. ಸುಂದರಂರವರು ಹಲವಾರು ವಿಷಯಗಳಲ್ಲಿ ತಮ್ಮ ಆಸಕ್ತಿಯನ್ನು ತೋರಿಸುತ್ತಿದ್ದರು. ಪಾಕಿಸ್ತಾನಕ್ಕೆ ಅಮೇರಿಕದ ಮಿಲಿಟರಿ ನೆರವು ಅಥವಾ ರಾಷ್ಟ್ರಾಧ್ಯಕ್ಷರ ಭಾಷಣ, ಪಂಚಶೀಲ ಅಥವಾ ಸಾರ್ವಜನಿಕ ನಿಗಮಗಳು, ಸೂಯಜ್ ಕೆನಾಲ್ ಅಥವಾ ಕ್ರಿಮಿನಲ್ ಕಾನೂನು, ಹೀಗೆ ಸದನದಲ್ಲಿ ಚರ್ಚೆಯಾಗುತ್ತಿದ್ದ ಯಾವುದೇ ವಿಷಯವಿರಲಿ ತಮ್ಮ ತೀಕ್ಷ್ಣ ಪ್ರಶ್ನೆಗಳ ಮೂಲಕ ಸರ್ಕಾರದ ಮೇಲೆ ವಾಕ್ ಪ್ರಹಾರ ಮಾಡುತ್ತಿದ್ದರಲ್ಲದೆ, ಅದೇ ಸಮಯದಲ್ಲಿ ಸರ್ಕಾರಕ್ಕೆ ವಿವೇಚನಾಯುಕ್ತ ಸಲಹೆಗಳನ್ನು ನೀಡುತ್ತಿದ್ದರು. ನಿರುದ್ಯೋಗ ಸಮಸ್ಯೆ, ಭಾಷಾವಾರು ಪ್ರಾಂತ್ಯಗಳು, ಪರಿಶಿಷ್ಟ ಜಾತಿ ಮತ್ತು ವರ್ಗಗಳಿಗೆ ಸಂಬಂಧಿಸಿದ ವಿಷಯಗಳು, ರೈಲ್ವೆಗಳು, ಪ್ರತಿಬಂಧಕ ಬಂಧನ ಕಾಯಿದೆ, ಮತಕ್ಷೇತ್ರಗಳ ಸೀಮಾ ನಿರ್ಣಯ ಮುಂತಾದ ವಿಷಯಗಳ ಮೇಲೆ ಅಧಿಕಾರಯುಕ್ತವಾಗಿ ಮತ್ತು ಅಷ್ಟೇ ಪರಿಣಾಮಕಾರಿಯಾಗಿ ಅವರು ವಾದವನ್ನು ಮಂಡಿಸುತ್ತಿದ್ದರು ಅವರ ವಿಚಾರಪೂರ್ಣ ಅನಿಸಿಕೆಗಳನ್ನು ಮತ್ತು ಉಪಯುಕ್ತ ಸಲಹೆಗಳನ್ನು ಸದನದಲ್ಲಿ ಅತಿ ಗೌರವದಿಂದ ಕೇಳಲಾಗುತ್ತಿತ್ತು. ಮಂತ್ರಿಯೇ ಆಗಿರಲಿ ಅಥವಾ ಸದಸ್ಯನೇ ಆಗಲಿ ಸದನದಲ್ಲಿ ಮಂಡಿಸುತ್ತಿದ್ದ ವಿಚಾರಗಳು ಅವಾಸ್ತವಿಕ ಎಂದು ಡಾ. ಸುಂದರಂ ರವರಿಗೆ ಕಂಡುಬಂದಲ್ಲಿ ಅವುಗಳನ್ನು ಖಡಾಖಂಡಿತವಾಗಿ ವಿರೋಧಿಸುತ್ತಿದ್ದ ಎದೆಗಾರಿಕೆ ಅವರಿಗಿತ್ತು.

1956 ರಲ್ಲಿ ರಾಷ್ಟ್ರಾಧ್ಯಕ್ಷರ ಭಾಷಣಕ್ಕೆ ವಂದನೆಯನ್ನು ಸಲ್ಲಿಸುವ ನಿರ್ಣಯದ ಮೇಲೆ ಅವರು ಮಾತನಾಡುತ್ತಾ, ರಾಷ್ಟ್ರಾಧ್ಯಕ್ಷರ ಭಾಷಣದಲ್ಲಿ ವಿದೇಶಿ ವ್ಯವಹಾರಗಳ ವಿಷಯದ ಬಗ್ಗೆ ಅಗತ್ಯಕ್ಕಿಂತಲೂ ಹೆಚ್ಚು ಒತ್ತನ್ನು ನೀಡಿರುವುದನ್ನು ಸದನದ ಗಮನಕ್ಕೆ ತರುತ್ತಾ ಅವರು ಹೇಳಿದರು:

" ರಾಷ್ಟ್ರಪತಿಗಳ ಭಾಷಣದಲ್ಲಿ, ನಾನು ಹಿಂದಿನ ದಿನ ಲೆಕ್ಕ ಮಾಡಿದಂತೆ, ಭಾಷಣದ ಅವಧಿಯ ಶೇ. 50 ರಷ್ಟನ್ನು ....... ವಿದೇಶಿ ವ್ಯವಹಾರಗಳಿಗಾಗಿ ವಿನಿಯೋಗಿಸಲಾಗಿದೆ. ನನ್ನ ಭಾಷಣದ ಪ್ರಾರಂಭದಲ್ಲಿ ನಾನು ಹೇಳಿದ ಹಾಗೆ ಹಳೇ ಬ್ರಿಟಿಷ್ ಸಂಪ್ರದಾಯ ಇನ್ನೂ ನಮ್ಮಲ್ಲಿ ಮನೆ ಮಾಡಿದೆ.

ಸಾರ್ವಜನಿಕ ಲೆಕ್ಕಪತ್ರಗಳ ಸಮಿತಿಯ ಬಗ್ಗೆ ಪ್ರಧಾನ ಮಂತ್ರಿಗಳು ಮಾಡಿದ ಕೆಲವು ಅಭಿಪ್ರಾಯಗಳಿಗೆ ತೀವ್ರ ವಿರೋಧವನ್ನು ಡಾ. ಸುಂದರಂರವರು ವ್ಯಕ್ತಪಡಿಸಿದ್ದರು "ಸಾರ್ವಜನಿಕ ಲೆಕ್ಕಪತ್ರಗಳ ಸಮಿತಿಯಲ್ಲಿ ರಾಜ್ಯಸಭಾ ಸದಸ್ಯರು ಪಾಲ್ಗೊಳ್ಳುವ ಸಂಬಂಧದ ಮಸೂದೆಯನ್ನು ಮಂಡಿಸುತ್ತಾ ಪ್ರಧಾನ ಮಂತ್ರಿಗಳು ಇನ್ನಿತರ ವಿಷಯಗಳ ಜೊತೆ ........ ಹೇಳಿದ್ದೇನೆಂದರೆ .......... ಸಾರ್ವಜನಿಕ ಲೆಕ್ಕಪತ್ರಗಳ ಸಮಿತಿಯ ಸದಸ್ಯರು ಸಂಪೂರ್ಣವಾಗಿ ತಪ್ಪನ್ನು ಎಸಗಿರುತ್ತಾರೆ"

ಮರುದಿನ, ಈ ವಿಷಯದ ಮೇಲೆ ಚರ್ಚೆ ಆಗುತ್ತಿರುವಾಗ ಡಾ. ಸುಂದರಂರವರು ಪ್ರಧಾನ ಮಂತ್ರಿಗಳಿಗೆ ಸವಾಲು ಎಸೆದು ಹೇಳಿದರು:

"ನಿನ್ನೆ ಪ್ರಧಾನ ಮಂತ್ರಿಗಳು ಹೇಳಿದರು, ಅವರು ಹೇಳಿದ್ದನ್ನು ನಾನು ಇಲ್ಲಿ ಸರಿಯಾಗಿ ಉದಾಹರಿಸುತ್ತಿದ್ದೇನೆಂಬ ನಂಬಿಕೆ ನನಗಿದೆ. ಅದೇನೆಂದರೆ, ಸಾರ್ವಜನಿಕ ಲೆಕ್ಕಪತ್ರಗಳ ಸಮಿತಿಯ ತೀರ್ಮಾನ ದೋಷಯುಕ್ತವಾಗಿದೆ ಎಂದು ಹೇಳಿದರು. ಈ ಸದನದ ನಾಯಕರಿಂದ ಈ ರೀತಿಯ ಹೇಳಿಕೆ ಬರುತ್ತಿರುವುದು ಒಂದು ರೀತಿಯಲ್ಲಿ ನಮ್ಮ ದೌರ್ಭಾಗ್ಯವೆಂದು ನನಗೆ ಅನ್ನಿಸುತ್ತದೆ. ನಾನು ಜವಾಬ್ದಾರಿಯನ್ನು ಅರಿತೇ ಇದನ್ನು ಹೇಳುತ್ತಿದ್ದೇನೆ. ಏಕೆಂದರೆ, ಸಾರ್ವಜನಿಕ ಲೆಕ್ಕಪತ್ರಗಳ ಸಮಿತಿಯು ಈ ಸದನದ ಅತೀ ಮುಖ್ಯ ಅಂಗಗಳಲ್ಲಿ ಒಂದು ಹಾಗೂ ಈ ಮಸೂದೆ ವಿಷಯದಲ್ಲಿ, ಅದು ಒಂದು ಸರ್ವಾನುಮತದ ನಿರ್ಣಯಕ್ಕೆ ಬಂದಿರುತ್ತದೆ. ಇಲ್ಲಿ ಉಪಸ್ಥಿತರಿರುವ ಸಾರ್ವಜನಿಕ ಲೆಕ್ಕಪತ್ರಗಳ ಸಮಿತಿಯ ಸದಸ್ಯರು ತಾವು ತೆಗೆದುಕೊಂಡ ಈ ನಿರ್ಣಯವನ್ನು ಎದ್ದುನಿಂತು ಸಮರ್ಥಿಸಿಕೊಳ್ಳುತ್ತಾರೆಂದು ನಾನು ದೃಢವಾಗಿ ನಂಬುತ್ತೇನೆ."

ನಂತರ ಪ್ರಧಾನ ಮಂತ್ರಿಗಳು ತಮ್ಮ ಅಭಿಪ್ರಾಯಗಳನ್ನು ಸ್ಪಷ್ಟೀಕರಣ ರೂಪದಲ್ಲಿ ವಿವರಿಸುತ್ತಾ ಹೇಳಿದರು:

"ಸಾರ್ವಜನಿಕ ಲೆಕ್ಕಪತ್ರಗಳ ಸಮಿತಿಯ ಸದಸ್ಯರುಗಳ ಮೇಲೆ ನಾನು ಆಕ್ಷೇಪಣೆ ಮಾಡುತ್ತಿಲ್ಲ. ನಾನು ಆ ರೀತಿ ಹೇಳಿದ್ದರಿಂದ ವಾಸ್ತವವಾಗಿ ನನಗೆ ಬೇಸರವಾಗಿದೆ........ ಸಾರ್ವಜನಿಕ ಲೆಕ್ಕಪತ್ರಗಳ ಸಮಿತಿಯು ಕೆಲವು ಅತೀ ಪ್ರಾಮುಖ್ಯವಾದ ವಿಷಯಗಳ ಬಗ್ಗೆ ಮಾತ್ರ ವ್ಯವಹರಿಸುತ್ತದೆ. ಆದರೆ, ಸಂವಿಧಾನಾತ್ಮಕ ಪದ್ಧತಿಯಲ್ಲಿ ಸಾರ್ವಜನಿಕ ಲೆಕ್ಕಪತ್ರಗಳ ಸಮಿತಿಗಷ್ಟೇ ಪರಮಾಧಿಕಾರ ಇರುವುದಿಲ್ಲ ಎಂಬುದನ್ನು ನಿವೇದಿಸಲು ಇಚ್ಛಿಸುತ್ತೇನೆ. ಈ ವಿಷಯಕ್ಕೆ ಸಂಬಂಧಪಟ್ಟಂತೆ ಸಮಿತಿಯು ತಪ್ಪು ಮಾಡಿದೆ ಎಂಬುದು ನನ್ನ ಅನಿಸಿಕೆ."

ಚತುರ ಮಾತುಗಾರರಾದ ಡಾ. ಸುಂದರಂರವರು, ವಿಷಯದ ಮೇಲೆ ಆಳವಾದ ತಿಳುವಳಿಕೆ ಇದ್ದುದರಿಂದ ಅತೀ ಪ್ರಮುಖ ವಿಷಯಗಳಾದಂಥ, ಸಾರ್ವಜನಿಕ ಲೆಕ್ಕಪತ್ರಗಳ ಸಮಿತಿಯಲ್ಲಿ ರಾಜ್ಯಸಭಾ ಸದಸ್ಯರು ಪಾಲ್ಗೊಳ್ಳುವ ಬಗ್ಗೆ ಈ ಕೆಳಕಂಡ ಮಾತುಗಳಲ್ಲಿ ಟೀಕೆ ಮಾಡಿದ್ದರು:

"......... ಏಕೆಂದರೆ, ನೀವು, ನಿಯಮಗಳ ಸಮಿತಿಯ ಅಧ್ಯಕ್ಷರಾಗಿದ್ದುದರಿಂದ, ವಿಶೇಷವಾಗಿ ಈ ಪ್ರಶ್ನೆಯ ಸ್ವರೂಪದ ಬಗ್ಗೆ ಪರಿಶೀಲಿಸಲು ಪ್ರಶ್ನೆಯ ಆಳಕ್ಕೆ ಹೋಗಿ, ಈಗಾಗಲೇ ಒಂದು ನಿರ್ಣಯಕ್ಕೆ ಬಂದಿರುತ್ತೀರಿ. ಆ ಸದನದ 7 ಸದಸ್ಯರು, ಈ ಸದನದ 15 ಸದಸ್ಯರೊಂದಿಗೆ ಪಾಲ್ಗೊಳ್ಳಬೇಕಾಗಿರುತ್ತದೆ. ಏನಾಗುತ್ತದೆ? ಅವರನ್ನು ನಿಯಂತ್ರಿಸುವವರು ಯಾರು? ಸಾರ್ವಜನಿಕ ಲೆಕ್ಕಪತ್ರಗಳ ಸಮಿತಿಯು ಇನ್ನು ಮುಂದೆ ಸಲ್ಲಿಸುವ ವರದಿಯನ್ನು ಈ ಒಂದು ನಿರ್ದಿಷ್ಟ

ಮಸೂದೆಯಲ್ಲಿನ ಉಪಬಂಧಗಳ ಮೇರೆಗೆ ಒಂದು ವೇಳೆ ಅಂಗೀಕರಿಸಿದಲ್ಲಿ ಅದನ್ನು ಈ ಸದನದ ಮುಂದಷ್ಟೇ ಮಂಡಿಸಲಾಗುವುದೆಂದು ಸದನದ ಗೌರವಾನ್ವಿತ ನಾಯಕರು ನಿನ್ನೆಯಷ್ಟೇ ಹೇಳಿದರು. ಆ ಸದನದ ಪರಿಸ್ಥಿತಿ ಏನು? ಸ್ವಾಭಾವಿಕವಾಗಿ, ಅದನ್ನು ಆ ಸದನದಲ್ಲಿ ಮಂಡಿಸುವುದಿಲ್ಲ. ಎರಡನೆಯದಾಗಿ, ಹೊರಗಿನ ಯಾವುದೇ ವ್ಯಕ್ತಿಯು, ಅಂದರೆ ಈ ಸದನದ ಚುನಾಯಿತ ಪ್ರತಿನಿಧಿಯನ್ನು ಹೊರತುಪಡಿಸಿ, ಹೊರಗಿನ ವ್ಯಕ್ತಿಯು ಈ ಸಮಿತಿಯ ಜೊತೆಗೆ ಶಿಫಾರಸುಗಳನ್ನು ಮಾಡಲು ಏಕೆ ಪಾಲ್ಗೊಳ್ಳಬೇಕು? ಇವೆಲ್ಲವೂ ನೋಡಲೇಬೇಕಾದಂಥ ಅಂಶಗಳು".

1956 ರ ಫೆಬ್ರವರಿ 17 ರಂದು ಕೈಗಾರಿಕಾ ಸೇವೆಗಳ ಆಯೋಗ ನಿರ್ಣಯದ ಮೇಲೆ ಮಾತನಾಡುತ್ತಾ ಡಾ. ಸುಂದರಂರವರು ಇತರ ವಿಷಯಗಳ ಜೊತೆಗೆ ಈ ರೀತಿ ಹೇಳಿದ್ದಾರೆ:

"ಸಾರ್ವಜನಿಕ ವಲಯದ ಸರ್ಕಾರದ ವಿವಿಧ ಉದ್ಯಮಗಳ ಉನ್ನತ ಮಟ್ಟದ ವ್ಯವಸ್ಥಾಪಕ ಸಿಬ್ಬಂದಿಯನ್ನು ಹೇಗೆ ನೇಮಿಸಿಕೊಳ್ಳಬೇಕೆಂಬುದನ್ನು ನಿರೂಪಿಸುವುದು ಈ ಸದನದ ಪವಿತ್ರ ಕರ್ತವ್ಯ. ಸಾರ್ವಜನಿಕ ವಲಯದ ಸಂಸ್ಥೆಯಲ್ಲಿ ನೇಮಕ ಮಾಡಿಕೊಳ್ಳುವ ಅಭ್ಯರ್ಥಿ ಆ ಸ್ಥಾನವನ್ನು ಹೊಂದಲು ಯಾವುದೇ ಪರಿಸ್ಥಿತಿಯಲ್ಲಿ ಪೂರ್ಣ ಪ್ರಮಾಣದಲ್ಲಿ ತರಬೇತು ನೀಡದೇ ಹಾಗೂ ಅವಶ್ಯವಿದ್ದಲ್ಲಿ ನೀವು ಹೇಳುವ ಹಾಗೆ ವಿದೇಶಕ್ಕೆ ಕಳುಹಿಸಿಕೊಡದೇ ಸಾರ್ವಜನಿಕ ವಲಯದ ಯಾವುದೇ ಸಂಸ್ಥೆಗೆ ನೇಮಿಸಕೂಡದು."

ಡಾ. ಸುಂದರಂರವರು ಅನೇಕ ಸಂದರ್ಭಗಳಲ್ಲಿ, ಸದನದಲ್ಲಿ ವ್ಯಕ್ತಪಡಿಸಿರುವ ತಮ್ಮ ವಿದ್ವತ್‌ಪೂರ್ಣ, ಅಧಿಕೃತ, ವಿಚಾರ ಪ್ರಚೋದಕ ಹಾಗೂ ವಿಮರ್ಶಾತ್ಮಕ ಅಭಿಪ್ರಾಯಗಳಿಂದಾಗಿ ನೆನಪಿನಲ್ಲಿ ಉಳಿಯುತ್ತಾರೆ. ಸದನದಲ್ಲಿ ಚರ್ಚೆಯಾಗುತ್ತಿದ್ದ ವಿಷಯಗಳ ಬಗ್ಗೆ ಅವರು ಅನುಸರಿಸುತ್ತಿದ್ದ ಪತ್ರಿಕಾ ದೃಷ್ಟಿಕೋನ, ಭಾಗವಹಿಸುವ ಚರ್ಚೆಯ ವಿಷಯದಲ್ಲಿ ಅವರು ಶ್ರಮವಹಿಸಿ ಮಾಡಿಕೊಳ್ಳುತ್ತಿದ್ದ ಸಿದ್ಧತೆ, ಅವರ ಆಳವಾದ ಮೌಲಿಕ ಚಿಂತನೆಗಳು ಹಾಗೂ ಅವರ ನೇರ ನಡೆನುಡಿ ಇವೆಲ್ಲವೂ ಅವರನ್ನು ಒಬ್ಬ ಗೌರವಾನ್ವಿತ ಸಂಸದೀಯ ಪಟುವನ್ನಾಗಿ ರೂಪಿಸಿದ್ದವು.

### ಅರ್ಥಶಾಸ್ತ್ರಜ್ಞ

ತಮ್ಮ ಕಾಲದ ಒಬ್ಬ ಹೆಸರಾಂತ ಅರ್ಥ ಶಾಸ್ತ್ರಜ್ಞರಾದ ಡಾ. ಸುಂದರಂರವರು ನಮ್ಮ ಸಮಾಜದ ಆರ್ಥಿಕ ದುರ್ಬಲ ವರ್ಗದವರ ದುಃಖ ದುಮ್ಮಾನಗಳನ್ನು ಚೆನ್ನಾಗಿ ಅರಿತವರಾಗಿದ್ದರು. ಆಹಾರ ಉತ್ಪಾದನೆಯಲ್ಲಿ ಸ್ವಾವಲಂಬನೆ ಸಾಧಿಸಿ, ತ್ವರಿತಗತಿಯ ಕೈಗಾರೀಕರಣದ ಮೂಲಕ ರಾಷ್ಟ್ರದ ಆರ್ಥಿಕ ನೆಲೆಯನ್ನು ಸುಭದ್ರಗೊಳಿಸುವುದರಿಂದ ಮಾತ್ರ ರಾಷ್ಟ್ರೀಯ ಅಭಿವೃದ್ಧಿಯ ಚೌಕಟ್ಟನ್ನು ಬಲಪಡಿಸಬಹುದೆಂದು ಡಾ. ಸುಂದರಂರವರು

ನಂಬಿದ್ದರು. ಮನುಷ್ಯನ ಬದುಕಿಗೆ ಆಹಾರವು ಮೂಲಭೂತ ಅವಶ್ಯಕತೆಗಳಲ್ಲಿ ಒಂದು ಎಂದು ಗುರುತಿಸಿ ಭಾರತದಲ್ಲಿ ಆಹಾರ ಸಮಸ್ಯೆ, ಅನಿರ್ದಿಷ್ಟ ಅವಧಿಯವರೆಗೆ ಕಾಡುವ ಸಮಸ್ಯೆ ಎಂಬುದನ್ನು ಅವರು ಗಮನಿಸಿದ್ದರು:

> "ಭೂಮಿಯಿಂದ ದೊರಕುವ ನಮ್ಮ ಪೋಷಕಾಂಶ ಹವಾಮಾನದ ವೈಪರೀತ್ಯಗಳನ್ನು ಅವಲಂಬಿಸಿದ್ದು ಈ ವೈಪರೀತ್ಯಗಳು ರಾಷ್ಟ್ರದ ವಿವಿಧ ಭಾಗಗಳಲ್ಲಿ ವಿವಿಧ ರೀತಿಯಲ್ಲಿ ಕಾರ್ಯನಿರ್ವಹಿಸುತ್ತಿವೆ. ಆಹಾರ ಸಂಪನ್ಮೂಲಗಳನ್ನು ಇಡೀ ರಾಷ್ಟ್ರದಲ್ಲಿ ಸಮನಾಗಿ ಹಂಚದೇ ಹೋದಲ್ಲಿ ರಾಷ್ಟ್ರದ ಆರ್ಥಿಕ ಮತ್ತು ರಾಜಕೀಯ ಸಮತೋಲನಕ್ಕೆ ಧಕ್ಕೆ ಉಂಟಾಗುತ್ತದೆ".*

ಮುಂದುವರೆದು ಅವರು ಹೇಳಿದ್ದಾರೆ:**

> "ಸಹಸ್ರಾರು ವರ್ಷಗಳಿಂದ ಈ ರಾಷ್ಟ್ರದ ದರಿದ್ರ ನಾರಾಯಣನನ್ನು ಕಾಡುತ್ತಿರುವ ಹೃದಯ ವಿದ್ರಾವಕ ಪರಿಸ್ಥಿತಿ, ಈ ನೆಲ ಸಮೃದ್ಧಿಯ ಹೊಳೆಯನ್ನು ಹರಿಸುತ್ತಿದ್ದರೂ ಹಾಗೆಯೇ ಇದೆ. ಸರ್ಕಾರ ಮತ್ತು ನಾಗರೀಕರ ಜಂಟಿ ಪ್ರಯತ್ನಗಳಿಂದ, ದೇಶದ ನಾಗರೀಕನಿಗೆ, ಸರ್ಕಾರ ದಿನಕ್ಕೆ ಎರಡು ಹೊತ್ತಿನ ಊಟವನ್ನು ಒದಗಿಸಬಲ್ಲದು ಎಂಬುದನ್ನು ಮತ್ತೊಮ್ಮೆ ತೋರಿಸುವುದು ಜನತೆ ಮತ್ತು ಸರ್ಕಾರಕ್ಕೆ ಬಿಟ್ಟಿದ್ದು. ಪ್ರಾಯಶಃ, ನಮ್ಮ ಪ್ರಸಕ್ತ ರಾಷ್ಟ್ರೀಯ ಕಾರ್ಯಕ್ರಮದಲ್ಲಿ ನಿರ್ಲಕ್ಷಿಸಲ್ಪಟ್ಟಿರುವ ಅಂಶವೆಂದರೆ ಆಹಾರ ಬಳಕೆಯಲ್ಲಿನ ಪೋಲು ವಿಸ್ತೃತಗೊಳಿಸಿರುವ ಪಡಿತರ ವ್ಯವಸ್ಥೆ ಹಾಗೂ ಹೆಚ್ಚು ಆಹಾರ ಉತ್ಪಾದನೆಯ ಜೊತೆ ಜೊತೆಯಲ್ಲಿಯೇ ಈ ಪೋಲನ್ನೂ ತೊಡೆದು ಹಾಕಬೇಕು. ಜನತೆಯ ಅತೀ ಮುಖ್ಯವಾದ ಕಾರ್ಯ ಇನ್ನೂ ಹೆಚ್ಚು ಕೃಷಿ ಉತ್ಪಾದನೆ ಮಾಡುವುದಾಗಿದೆ. ಏಕೆಂದರೆ ಭಾರತ ಸರ್ಕಾರದ " ಆರ್ಥಿಕ ಆಹಾರ ಉತ್ಪಾದನೆ" ಚಳುವಳಿಯು ಇತ್ತೀಚಿನ ಯುದ್ಧ ವರ್ಷಗಳಲ್ಲಿ ತನ್ನ ಉದ್ದೇಶ ಈಡೇರದೆ ಶೋಚನೀಯವಾಗಿ ವಿಫಲವಾಗಿದೆ".

ಕೈಗಾರಿಕೆಗಳಿಗೆ ಸಾಕಷ್ಟು ಆರ್ಥಿಕ ಸಂಪನ್ಮೂಲ ಮತ್ತು ಅವುಗಳಿಗೆ ದೊರೆಯಬೇಕಾದ ಪ್ರಾಮುಖ್ಯತೆಯನ್ನು ಕೇಂದ್ರ ಸರ್ಕಾರ ಕೊಡದ ಹೊರತು ರಾಷ್ಟ್ರದ ಪ್ರಗತಿ ಸಾಧ್ಯವಿಲ್ಲ ಎಂದು ಡಾ. ಸುಂದರಂರವರು ನಂಬಿದ್ದರು.

ಭಾರತದ ಕೈಗಾರಿಕೀಕರಣ ಕೇಂದ್ರ ಸರ್ಕಾರದ ನಿಯಂತ್ರಣಕ್ಕೊಳಪಟ್ಟಿರಬೇಕು ಎಂಬುದು ಅವರ ನಿಲುವಾಗಿತ್ತು. ಅವರು ಅಭಿಪ್ರಾಯ ಪಡುತ್ತಾರೆ:

---

* ಡಾ|| ಲಂಕಾ ಸುಂದರಂ: ಭಾರತದ ಭವಿಷ್ಯತ್ತಿನ ಸಂವಿಧಾನ, ವಾಣಿಜ್ಯ ಮತ್ತು ಕೈಗಾರಿಕೆ, ನವದೆಹಲಿ 11ನೇ ಡಿಸೆಂಬರ್ 1946.

** ಡಾ|| ಲಂಕಾಸುಂದರಂ: ಕೃಷಿ ಸ್ವಾವಲಂಬನೆ ಸಾಧಿಸಲು ರಸಗೊಬ್ಬರ, ಕೈಗಾರಿಕೆ ಸ್ಥಾಪನೆ ವಾಣಿಜ್ಯ ಮತ್ತು ಕೈಗಾರಿಕೆ, ನವದೆಹಲಿ, 8ನೇ ಮೇ 1946 ಪು.3

" ಪ್ರಾದೇಶೀಕರಣ ಮತ್ತು ಸ್ಥಳೀಕರಣಗಳು ಚರ್ಚೆ ಮಾಡುವಂಥ ವಿಷಯಗಳು, ರಕ್ಷಣಾ ವ್ಯವಸ್ಥೆ ಕೇಂದ್ರ ಸರ್ಕಾರದ ಹೊಣೆಯಾಗಿದ್ದಲ್ಲಿ ಕೈಗಾರಿಕೆಗಳೂ ಅದರ ಪರಿಧಿಗೆ ಬರಬೇಕಿತ್ತು. ಏಕೆಂದರೆ ಅವುಗಳ ನಡುವೆ ಯಾವಾಗಲೂ ಪರಸ್ಪರ ಸಂಬಂಧ ಇರುತ್ತದೆ.

ಕೈಗಾರಿಕೆಗಳು ಕೇಂದ್ರದ ವ್ಯಾಪ್ತಿಗೆ ಬರಬೇಕು ಎನ್ನುವುದಕ್ಕೆ ಇರುವ ಇನ್ನೂ ಒಂದು ಕಾರಣವೆಂದರೆ ಭಾರತ ದೇಶ, ಬಾಹ್ಯ ಉದ್ದೇಶಗಳಿಗಾಗಿ ಒಂದೇ ಘಟಕ. ಒಂದೇ ಘಟಕವಾಗಿ ಇತರ ದೇಶಗಳೊಂದಿಗೆ ವ್ಯವಹಾರ ನಡೆಸಬೇಕಾಗುತ್ತದೆ. ಆದ್ದರಿಂದ ಭಾರತದ ಆರ್ಥಿಕ ಆಸಕ್ತಿಯನ್ನು ಕಾಪಾಡುವ ಹೊಣೆ ಕೇಂದ್ರಕ್ಕಿರುವುದು ಅಗತ್ಯ."

ಭಾರತವು ವಿದೇಶೀ ನೆರವನ್ನು ಪಡೆಯುವುದಕ್ಕೆ ಡಾ. ಸುಂದರಂರವರು ಎಂದೂ ವಿರೋಧಿಯಾಗಿರಲಿಲ್ಲ. ಆದರೂ, ಅದರಲ್ಲಿರುವ ಅವ್ಯಕ್ತ ಅಪಾಯಗಳ ಬಗ್ಗೆ ಎಚ್ಚರಿಸಿದ್ದರು. ಅವರು ಹೇಳಿದ್ದಾರೆ:

"ಈ ರಾಷ್ಟ್ರದ್ದಲ್ಲದ ವಿದೇಶಿ ಬಂಡವಾಳದ ಪ್ರಭಾವ ಕುರಿತು ನಾವು ಯಾವುದೇ ಮುಲಾಜಿಲ್ಲದೆ ವಿರೋಧಿಸುತ್ತಾ ಬಂದಿದ್ದೇವೆ. ಭಾರತ ಅಥವಾ ಇನ್ನಿತರ ದೇಶಗಳು ಅಮೇರಿಕಾ ಪ್ರಭುತ್ವದ ತೆಕ್ಕೆಯತ್ತ ವಾಲುತ್ತಿರುವ ಅಪಾಯವನ್ನು ನಾವು ನಿರ್ಭಯವಾಗಿ ಎತ್ತಿತೋರಿಸಿದ್ದೇವೆ. ಈ ಖಂಡನೆಯ ಅರ್ಥ, ಆರ್ಥಿಕ ಕ್ಷೇತ್ರದಲ್ಲಿ ಬ್ರಿಟನ್ ಅಥವಾ ಅಮೇರಿಕಾದ ಸಹಾಯವನ್ನು ಪಡೆಯಬಾರದು ಎಂದಲ್ಲ. ವಾಸ್ತವವಾಗಿ ಅವರ ಸಹಾಯವನ್ನು ನಾವು ಬೆಂಬಲಿಸುತ್ತೇವೆ. ಆದರೆ ಆ ನೆರವನ್ನು ರಾಷ್ಟ್ರದ ಸಾರ್ವಭೌಮತ್ವಕ್ಕೆ ಮತ್ತು ನಿಜವಾದ ಆರ್ಥಿಕ ಆಸಕ್ತಿಗಳಿಗೆ ಅಪಾಯವನ್ನು ತಂದೊಡ್ಡದ ರೀತಿಯಲ್ಲಿ ತೊಡಗಿಸಿಕೊಳ್ಳಬೇಕೆಂಬುದನ್ನು ನಾವು ನೆನಪಿನಲ್ಲಿಟ್ಟುಕೊಳ್ಳಬೇಕು. ನಾವು, ಇನ್ನೂ ನೆನಪಿನಲ್ಲಿಟ್ಟುಕೊಳ್ಳಬೇಕಾದ ಅಂಶವೆಂದರೆ ಈ ಸಹಾಯ ಕೇವಲ ಈ ರಾಷ್ಟ್ರಕ್ಕೆ ಮಾತ್ರ ಉಪಯೋಗವಾದರೆ ಸಾಲದು, ಅದು ಯಾವ ರಾಷ್ಟ್ರಗಳಿಂದ ಹರಿದು ಬಂದಿರುತ್ತದೆಯೋ ಅವುಗಳಿಗೂ ಅದರ ಪ್ರಯೋಜನ ದೊರಕಬೇಕು. ಆದ್ದರಿಂದ, ವಿದೇಶಿ ಬಂಡವಾಳಕ್ಕೆ ನಮ್ಮ ವಿರೋಧ, ಭಾರತೀಯ ಕೈಗಾರಿಕೆಗಳಲ್ಲಿ ಸಹಭಾಗಿತ್ವದ ಪ್ರಸ್ತಾವನೆಗಳನ್ನು ಕಡೆಗಣಿಸಬೇಕೆಂಬ ಬಗ್ಗೆ ಅಲ್ಲ, ಅಂಥ ಸಹಭಾಗಿತ್ವಕ್ಕೆ ಪ್ರಮುಖ ಷರತ್ತು ಇರಬೇಕು. ಅದು ನಮ್ಮ ಆರ್ಥಿಕ ದಾಸ್ಯದ ಸಂಕೋಲೆಯನ್ನು ಮತ್ತಷ್ಟು ಬಿಗಿ ಮಾಡುವಂತಿರ ಕೂಡದು".

---

ಡಾ|| ಲಂಕಾಸುಂದರಂ - ಇಂಡೋ ಅಮೆರಿಕಾ ಆರ್ಥಿಕ ಸಂಬಂಧಗಳ ಭವಿಷ್ಯ, ವಾಣಿಜ್ಯ ಮತ್ತು ಕೈಗಾರಿಕೆ, ನವದೆಹಲಿ, 20ನೇ ಸೆಪ್ಟೆಂಬರ್ 1946 ಪು.3.

ಒಬ್ಬ ನಿಪುಣ ಪರೀಕ್ಷಕರಾಗಿ ಡಾ. ಲಂಕಾ ಸುಂದರಂರವರು ಭಾರತ ಒಕ್ಕೂಟ ರಾಜ್ಯಗಳ ಮತ್ತು ಪ್ರಾಂತ್ಯಗಳ ಭೌತಿಕ ಮತ್ತು ಆರ್ಥಿಕ ಸಂಯೋಜನೆಗಳು ಹೇಗಿರಬೇಕೆಂಬುದನ್ನು ಕುರಿತು ಅನ್ವೇಷಣೆ ನಡೆಸಿದ್ದರು.

**ಅಂಕಿ ಅಂಶಗಳ ಮೋಡಿಗಾರ**

ಅಂಕಿ ಅಂಶಗಳ ಬಗ್ಗೆ ಡಾ. ಸುಂದರಂರವರಿಗೆ ವಿಶೇಷ ಒಲವಿತ್ತು. ಬಹುತೇಕ ಅವರ ಎಲ್ಲಾ ಬರಹಗಳು ಮತ್ತು ಭಾಷಣಗಳಲ್ಲಿ ಅಂಕಿ ಅಂಶ ಹಾಗೂ ದತ್ತಾಂಶಗಳು ವಿಶೇಷ ಸ್ಥಾನ ಪಡೆದಿರುವುದನ್ನು ಕಾಣಬಹುದು. ಅವುಗಳನ್ನು ಅವರು ಕಲಾತ್ಮಕವಾಗಿ ಬಳಸಿಕೊಂಡಿದ್ದಾರೆ.

ತಮ್ಮ ವಾದವನ್ನು ಪುಷ್ಟೀಕರಿಸಲು ತಾವೇ ಸಂಗ್ರಹಿಸಿದ ಅಥವಾ ಅಧಿಕೃತ ವರದಿಗಳಿಂದ ಪಡೆದ ಅಂಕಿ ಅಂಶಗಳನ್ನು ಪದೇ ಪದೇ ಸದನದಲ್ಲಿ ಉದಾಹರಿಸುತ್ತಿದ್ದುದು ಅವರ ವಾಕ್ಚಾತುರ್ಯಕ್ಕೆ ಸಾಕ್ಷಿ. ಒಂದು ಉದಾಹರಣೆಯನ್ನು ನೀಡುವುದಾದರೆ, 1954ರ ಸಾಮಾನ್ಯ ಆಯವ್ಯಯದ ಚರ್ಚೆಯ ಮೇಲೆ ಮಾತನಾಡುತ್ತಾ ಅವರು ವಾದ ಮಾಡುತ್ತಾರೆ:

"ಈ ಚರ್ಚೆಯಲ್ಲಿ ಇನ್ನೂ ಹೆಚ್ಚಿನ ಅಂಕಿ ಅಂಶಗಳನ್ನು ಸದನದ ಗಮನಕ್ಕೆ ತರಬೇಕಾಗಿರುವುದರಿಂದ ಸದನ ಸಹನೆಯಿಂದ ಆಲಿಸಬೇಕೆಂದು ಕೇಳಿಕೊಳ್ಳುತ್ತೇನೆ. ಯೋಜನಾ ಅವಧಿಯಿಂದ ಈ ಕ್ಷಣದವರೆಗೆ ರಾಜ್ಯಗಳಿಗೆ ನೀಡಲಾದ ಒಟ್ಟು ಮುಂಗಡ ಇತ್ಯಾದಿಗಳ ಮೊತ್ತವನ್ನು ನೀವು ನೋಡಬಹುದು.

ನನ್ನ ಸನ್ಮಾನ್ಯ ಸ್ನೇಹಿತರು ಸರಿಪಡಿಸಿಕೊಳ್ಳಬಹುದೆಂಬ ಷರತ್ತಿಗೆ ಒಳಪಟ್ಟು, ಪ್ರಾಯಶಃ ಶೇ. 5 ರಷ್ಟು ತಪ್ಪುಗಳ ಎಲ್ಲೆ ಮೀರದ ಹಾಗೆ ನಾನು ಇದನ್ನು ಲೆಕ್ಕಹಾಕಿದ್ದೇನೆ. 667 ಕೋಟಿ ರೂ.ಗಳ ಮೊತ್ತವನ್ನು ರಾಜ್ಯಗಳಿಗೆ ಒದಗಿಸಲಾಗಿದೆ. ಇದನ್ನು ಹೇಗೆ ಲೆಕ್ಕಹಾಕಲಾಗಿದೆ? 1951-52 ರಿಂದ 1954-55 ರವರೆಗೆ (ಎರಡೂ ವರ್ಷದ್ದು ಸೇರಿ) ಅನುದಾನದ ರೂಪದಲ್ಲಿ 98.93 ಕೋಟಿ ರೂಪಾಯಿಗಳನ್ನು ನೀಡಲಾಗಿದೆ. 449.78 ಕೋಟಿ ರೂಪಾಯಿಗಳನ್ನು ರಾಜ್ಯಗಳಿಗೆ ಮುಂಗಡಗಳ ರೂಪದಲ್ಲಿ ಕೊಡಲಾಗಿದೆ. ಇದೇ ಅವದಿಯಲ್ಲಿ ವಿಶೇಷ ಅಭಿವೃದ್ಧಿ ಮತ್ತು ಇತರ ನಿಧಿಗಳಿಂದ 119.67 ಕೋಟಿ ರೂಪಾಯಿಗಳನ್ನು ಕೊಡಲಾಗಿದೆ. ಈ ಸದನದ ಶಾಸನಬದ್ಧ ಸಮಿತಿಗಳ ಪೈಕಿ ಒಂದರಲ್ಲಿ ನಿಮ್ಮ ಜೊತೆ ಕಾರ್ಯನಿರ್ವಹಿಸುವ ಸದಾವಕಾಶ ನನಗೆ ಒದಗಿತ್ತು. ಅಂದಾಜುಗಳ ಸಮಿತಿಯು ಹೊರತಂದಿರುವ ವರದಿಯಲ್ಲಿಯೂ ಸಹ ಮುಂಗಡಗಳನ್ನು ಮರಳಿ ಪಡೆಯುವುದು ಸುಲಭವಾಗಿ ಸಾಧ್ಯವಿಲ್ಲ ಎಂಬ ಅಭಿಪ್ರಾಯಕ್ಕೆ ಬಂದಿರುವ ಬಗ್ಗೆ ನೀವು ಜ್ಞಾಪಿಸಿಕೊಳ್ಳಬೇಕು. ಒಂದು ರೀತಿಯಲ್ಲಿ ನಾವು ಗೋಜಲಿನಲ್ಲಿ ಸಿಲುಕಿದ್ದೇವೆ. ಆ ಗೋಜಲಿನಿಂದ ಹೊರಬರಲಾಗದ ಹಾಗೆ ನಾವು ಒಂದು ತರ್ಕಬದ್ಧ ತೀರ್ಮಾನಕ್ಕೆ ಬರುವುದೇ ಕಷ್ಟವಾಗಿದೆ. ಪರಿಣಾಮವಾಗಿ ನನ್ನ ಸನ್ಮಾನ್ಯ ಸದಸ್ಯರಾದ ಶ್ರೀ ತುಳಸೀದಾಸ್ - ಕ್ಷಮಿಸಿ ಅವರು ಸಧ್ಯ ಇಲ್ಲಿ ಇಲ್ಲ - ಅವರ ಹೇಳಿಕೆಯನ್ನು

ನಾನು ಸಂಪೂರ್ಣವಾಗಿ ಒಪ್ಪುತ್ತೇನೆ. ಈ 667 ಕೋಟಿ ರೂಪಾಯಿಗಳು ಮತ್ತು ಮುಂದಿನ ಎರಡು ವರ್ಷಗಳಲ್ಲಿ ಯೋಜನೆಯ ಅಡಿಯಲ್ಲಿ ನೀಡಲಿರುವ ಅಪರಿಮಿತ ಹೆಚ್ಚಿನ ಹಣದ ಬಗ್ಗೆ ರಾಜ್ಯಗಳು ಲೆಕ್ಕ ಇಡುವಂತೆ ನೋಡಿಕೊಳ್ಳಲು ಕೂಡಲೇ ಈ ಸದನ ಕ್ರಮ. ತೆಗೆದುಕೊಳ್ಳಬೇಕು"

"ಜಗತ್ತಿನ ರಾಜಕಾರಣದಲ್ಲಿ ಭಾರತ" ಎಂಬ ಅವರ ಪುಸ್ತಕವನ್ನು ವಿಮರ್ಶೆ ಮಾಡುತ್ತಾ "ದಿ ಹಿಂದೂಸ್ಥಾನ್ ಸ್ಟ್ಯಾಂಡರ್ಡ್" ಪತ್ರಿಕೆಯು "ಲೇಖಕರ ಅಂಕಿ ಅಂಶಗಳ ನಿರ್ವಹಣಾ ರೀತಿಯು - ಅಂಕಿ ಅಂಶಗಳ ಮೋಡಿಗಾರರಾಗಿದ್ದ ದಿವಂಗತ ದೀನಷಾ ಎಡುಲ್ಜಿ ವಾಚಾ" ಅವರನ್ನು ನೆನಪಿಗೆ ತರುತ್ತದೆ ಎಂದು ಅಭಿಪ್ರಾಯಪಟ್ಟಿದೆ.

## ಅತ್ಯುತ್ತಮ ಬರಹಗಾರರು

ಒಬ್ಬ ಚತುರ ಭಾಷಣಕಾರರು ಎನ್ನಿಸಿಕೊಳ್ಳುವುದರ ಜೊತೆಗೆ ಡಾ. ಲಂಕಾ ಸುಂದರಂರವರು ಒಬ್ಬ ಶ್ರೇಷ್ಠಮಟ್ಟದ ಬರಹಗಾರರೂ ಕೂಡ ಎಂಬ ಹೆಗ್ಗಳಿಕೆಗೆ ಪಾತ್ರರಾಗಿದ್ದರು. ಅನೇಕ ವಿಷಯಗಳ ಮೇಲಿನ ಅವರ ಪಾಂಡಿತ್ಯಪೂರ್ಣ ಬರಹಗಳು ಹೊಗಳಿಕೆಗೆ ಪಾತ್ರವಾಗಿದ್ದವಲ್ಲದೆ ಆಸಕ್ತಿಯಿಂದ ಅಧ್ಯಯನ ಮಾಡುವಂತಹವುಗಳಾಗಿದ್ದವು. ಅವರ ಬರಹಗಳಲ್ಲಿ ಸತ್ವ ಇರುತ್ತಿತ್ತು, ಪ್ರಾಮಾಣಿಕತೆ ಇರುತ್ತಿತ್ತು, ವಿವೇಚನೆ ಇರುತ್ತಿತ್ತು. ಅವರ ಶೈಲಿ ನಿರರ್ಗಳವಾಗಿತ್ತು, ವಿಷಯಗಳ ಅಭಿವ್ಯಕ್ತಿಯಲ್ಲಿ ಜೀವಂತಿಕೆ ಇರುತ್ತಿತ್ತು.

1944 ರಲ್ಲಿ ಅವರ ಮೂರು ಪ್ರಮುಖ ಕೃತಿಗಳು ಪ್ರಕಟಗೊಂಡವು ಆ ಮೂರೂ ಕೃತಿಗಳು ಪಾಂಡಿತ್ಯ ಪೂರ್ಣ ಕೃತಿಗಳಾಗಿ ಇಂದಿಗೂ ಪ್ರಸ್ತುತವಾಗಿವೆ.

1944 ರಲ್ಲಿ ಪ್ರಕಟಗೊಂಡ ಅವರ ಕೃತಿ "ಜಾಗತಿಕ ರಾಜಕಾರಣದಲ್ಲಿ ಭಾರತ"ದಲ್ಲಿ ಡಾ. ಸುಂದರಂರವರು ಭಾರತ ಮತ್ತು ಬ್ರಿಟಿಷ್ ಸಂಬಂಧಗಳನ್ನು ಬಹು ಸೂಕ್ಷ್ಮವಾಗಿ ವಿಶ್ಲೇಷಿಸಿದ್ದು, ಭಾರತದ ಸ್ವಾತಂತ್ರ್ಯಕ್ಕಾಗಿ ಕಳಕಳಿಯ ಮನವಿ ಮಾಡಿದ್ದರು. ಪರಿಪೂರ್ಣ ದಾಖಲೆ ಎನಿಸಿಕೊಂಡ ಈ ಉಪಯುಕ್ತ ಪುಸ್ತಕವನ್ನು ದೀರ್ಘ ಅನ್ವೇಷಣೆ ಹಾಗೂ ಪರಿಶ್ರಮದಿಂದ ಬರೆದಿದ್ದು ಅವರ ಕಾಲದ ಒಂದು ಅತ್ಯುತ್ತಮ ಬರಹವೆಂದು ಪರಿಗಣಿತವಾಗಿದೆ. ಅವರ ಮತ್ತೊಂದು ಕೃತಿ "ರಾಷ್ಟ್ರೀಯತೆ ಮತ್ತು ಸ್ವಾವಲಂಬನೆ" ಯೂ ಸಹ 1944 ರಲ್ಲಿ ಪ್ರಕಾಶನಗೊಂಡಿತು. ಡಾ. ಸುಂದರಂರವರು ಇದರಲ್ಲಿ ರಾಷ್ಟ್ರೀಯ ಆರ್ಥಿಕ ಸ್ವಾವಲಂಬನೆಯನ್ನು ಬಲವಾಗಿ ಪ್ರತಿಪಾದಿಸಿರುವುದು ಕಂಡುಬರುತ್ತದೆ. ಸಮಕಾಲೀನ ಆರ್ಥಿಕ ಮತ್ತು ರಾಜಕೀಯ ಚಿಂತನೆಗೆ ಬಹು ಉಪಯುಕ್ತ ಕೊಡುಗೆಗಳಲ್ಲಿ ಇದೂ ಒಂದು ಎಂಬ ಹೆಗ್ಗಳಿಕೆಗೆ ಈ ಕೃತಿ ಪಾತ್ರವಾಗಿದ್ದು, ಇದಕ್ಕೆ ರಾಷ್ಟ್ರವ್ಯಾಪಿ ಮನ್ನಣೆ ದೊರೆತಿದೆ. "ಭಾರತ ಒಂದು ಜಾತ್ಯಾತೀತ ರಾಷ್ಟ್ರ" ಎಂಬ ಇನ್ನೊಂದು ವಿಚಾರ ಪ್ರಚೋದಕ ಕೃತಿಯನ್ನು ಅದೇ ವರ್ಷ ಡಾ. ಲಂಕಾ ಸುಂದರಂರವರು ಹೊರತಂದರು. ರಾಜಕಾರಣದಲ್ಲಿ ಧರ್ಮ ನುಸುಳುತ್ತಿರುವುದನ್ನು ಗುರುತಿಸುತ್ತಾ ರಾಷ್ಟ್ರ ರಾಜಕಾರಣದಲ್ಲಿ ಧರ್ಮ ಪ್ರವೇಶಿಸುವುದನ್ನು ಡಾ. ಸುಂದರಂರವರು ಪ್ರಬಲವಾಗಿ ವಿರೋಧಿಸಿದ್ದರು.

1946 ರಲ್ಲಿ ಪ್ರಕಟಗೊಂಡ ಅವರ ಕೃತಿ "ಭಾರತೀಯ ಸೇನಾ ಪಡೆಗಳು ಮತ್ತು ಅವುಗಳ ವೆಚ್ಚಗಳು" ಇದರಲ್ಲಿ ಡಾ. ಸುಂದರಂರವರು ಭಾರತೀಯ ಸೇನಾ ಸಂಸ್ಥೆ ಮತ್ತು ರಕ್ಷಣಾ ವೆಚ್ಚಗಳ ಸಮಸ್ಯೆಗಳನ್ನು ಕುರಿತು ಆಳವಾಗಿ ಚರ್ಚಿಸಿದ್ದಾರೆ. ಅಂಥ ವಿಷಯದಲ್ಲಿ ಯಾವುದೇ ರೀತಿಯ ಸಾಹಿತ್ಯ ಲಭ್ಯವಾಗುವುದು ಅತೀ ದುರ್ಲಭ.

1933 ರಲ್ಲಿ ಪ್ರಕಟಗೊಂಡ ಅವರ ಮುಂಚಿನ ಕೃತಿಗಳಲ್ಲಿ ಒಂದಾದ "ವಿದೇಶೀ ಭಾರತೀಯರು" ಕೃತಿಯಲ್ಲಿ ಹೊರರಾಷ್ಟಗಳಲ್ಲಿರುವ ಭಾರತೀಯರನ್ನು ಕುರಿತು ವ್ಯವಸ್ಥಿತ ಅವಲೋಕನ ಮಾಡಿದ್ದಾರೆ.

"ಭಾರತದಲ್ಲಿ ಗೋ ಸಂರಕ್ಷಣೆ (1927)," "ಮೊಘಲರ ಭೂಕಂದಾಯ ವ್ಯವಸ್ಥೆ (1930)" ಮತ್ತು "ಕೇಂದ್ರ ಹಣಕಾಸು (1943)" ಇವುಗಳು ಡಾ. ಲಂಕಾ ಸುಂದರಂರವರ ಇತರ ಗಮನಾರ್ಹ ಕೃತಿಗಳು.

ಡಾ. ಸುಂದರಂರವರು, 'ವಾಣಿಜ್ಯ ಮತ್ತು ಕೈಗಾರಿಕೆ' ಎಂಬ ವಾರಪತ್ರಿಕೆಯ ಮಾಲೀಕರಾಗಿದ್ದರಲ್ಲದೆ ಅದರ ಸಂಪಾದಕರೂ ಸಹ ಆಗಿದ್ದರು. ಈ ವಾರಪತ್ರಿಕೆ ನವದೆಹಲಿಯಿಂದ ಪ್ರಕಟವಾಗುತ್ತಿತ್ತು. ಭಾರತದ ರಾಜ್ಯಗಳು ಮತ್ತು ಪ್ರಾಂತ್ಯಗಳ ವ್ಯಾಪಾರ, ಕೈಗಾರಿಕೆ ಮತ್ತು ಆರ್ಥಿಕ ವಿಷಯಗಳ ಮೇಲೆ ಲೇಖನಗಳು ಇದ್ದು ಒಂದು ಜನಪ್ರಿಯ ಪತ್ರಿಕೆಯಾಗಿತ್ತು.

ಹೀಗೆ, ಅವರ ಕಾಲದ, ಯಾವುದೇ ರಾಷ್ಟ್ರೀಯ ಮತ್ತು ಅಂತರ ರಾಷ್ಟ್ರೀಯ ಪ್ರಾಮುಖ್ಯದ ವಿಷಯಗಳು ಡಾ. ಸುಂದರಂರವರ ಲೇಖನಿಯ ಓರೆಗಲ್ಲಿಗೆ ಒಳಪಡದೇ ಇರುತ್ತಿರಲಿಲ್ಲ.

## ಕಾರ್ಮಿಕ ಸಂಘಟನೆಯ ನೇತಾರ

ಕಾರ್ಮಿಕರ ಆತ್ಮೀಯ ಸ್ನೇಹಿತರೂ ಮತ್ತು ಹಿತೈಷಿಗಳೂ ಆಗಿದ್ದ ಡಾ. ಸುಂದರಂರವರು ಅನೇಕ ಕಾರ್ಮಿಕ ಸಂಘಗಳ ಅಧ್ಯಕ್ಷರಾಗಿದ್ದರು. ಅವುಗಳಲ್ಲಿ ಮುಖ್ಯವಾದವುಗಳು ಹರಿಜನ ಕಾರ್ಮಿಕರ ಸಂಘ, ಅಂಚೆ ಮತ್ತು ತಂತಿ ಇಲಾಖೆ ಕಾರ್ಮಿಕರ ಸಂಘ, ವಿಜಯವಾಡ ಪ್ರಾಂತೀಯ ಶಾಖೆ; ಸಿಂಧ್ಯ ಷಿಪ್‌ಯಾರ್ಡ್ ಕಾರ್ಮಿಕರ ಸಂಘ ವಿಶಾಖಪಟ್ಟಣಂ ಜಿಲ್ಲಾ; ಗಾಂಧಿ ಸರ್ವೋದಯ ಮತ್ತು ಅಖಿಲ ಭಾರತ ರೈಲ್ವೆ ಲಿಪಿಕ ಸಿಬ್ಬಂದಿ ಸಂಘ.

ಉದ್ಯೋಗ ನೀತಿಗಳು, ಕಾರ್ಮಿಕರ ಹಕ್ಕುಗಳು, ಕಾರ್ಮಿಕ ಸಂಘಗಳ ಮಾನ್ಯತೆ, ಆಡಳಿತ ಮಂಡಲಿಯಲ್ಲಿ ಕಾರ್ಮಿಕರ ಸಹಭಾಗಿತ್ವ, ಕಾರ್ಮಿಕ ಸಂಘದ ಕಾರ್ಮಿಕರಿಂದ ಮುಷ್ಕರ, ತುಳಿತಕ್ಕೊಳಪಟ್ಟವರನ್ನು ಮೇಲೆತ್ತುವುದು ಮುಂತಾದ ವಿಷಯಗಳ ಮೇಲೆ ಸದನದಲ್ಲಿ ಪರಿಣಾಮಕಾರಿಯಾಗಿ ಮಾತನಾಡುವ ಅವಕಾಶವನ್ನು ಡಾ. ಸುಂದರಂರವರು ಎಂದೂ ಕಳೆದುಕೊಳ್ಳುತ್ತಿರಲಿಲ್ಲ. ಇಂಥ ಎಲ್ಲಾ ಸಂದರ್ಭಗಳಲ್ಲೂ ಅವರು ಬಹಳ ಪರಿಣಾಮಕಾರಿಯಾಗಿ ಮಾತನಾಡಿದ್ದಾರೆ. ಉದ್ಯೋಗ ಮತ್ತು ಕಾರ್ಮಿಕ ಸಮಸ್ಯೆಗಳು

ಅವರ ವಿಶೇಷ ಗಮನವನ್ನು ಸೆಳೆದಿದ್ದವು. ನೌಕರರ ಹಕ್ಕುಗಳು ಮತ್ತು ಅವರ ಸೇವಾ ನಿಬಂಧನೆ ಮತ್ತು ಷರತ್ತುಗಳು, ಸರ್ಕಾರದ ವಿವಿಧ ಇಲಾಖೆಯ ಅಡಿಯಲ್ಲಿ ಹೇಗೆ ನಿಯಂತ್ರಿಸಲ್ಪಟ್ಟಿದ್ದವು ಹಾಗೂ ಕಾರ್ಮಿಕ ಸಂಘಗಳಿಗೆ ಮಾನ್ಯತೆಯನ್ನು ಹೇಗೆ ಕೊಡಲಾಗುತ್ತಿತ್ತು ಮತ್ತು ತಿರಸ್ಕರಿಸಲಾಗುತ್ತಿತ್ತು ಎಂಬುದನ್ನು ಪುನರ್ ಪರಿಶೀಲಿಸಲು ಸರ್ಕಾರಕ್ಕೆ ಒತ್ತಾಯ ಮಾಡಿದ್ದರು.*

ಆದಿವಾಸಿಗಳಿಂದ ಚುನಾಯಿತರಾಗಿದ್ದ ಅವರು ತುಳಿತಕ್ಕೊಳಗಾದವರನ್ನು ಮೇಲೆತ್ತುವ ಕುರಿತು ಅನೇಕ ಬಾರಿ ಸದನದಲ್ಲಿ ಪ್ರತಿಪಾದಿಸಿದ್ದರು. 1953ನೇ ವರ್ಷದ ಅನುದಾನಗಳ ಬೇಡಿಕೆಯ ಮೇಲಿನ ಚರ್ಚೆಯಲ್ಲಿ ಭಾಗವಹಿಸಿ ಮಾತನಾಡುತ್ತಾ ಅವರು ಗೋದಾವರಿ ಮತ್ತು ವಿಶಾಖಪಟ್ಟಣ ಜಿಲ್ಲೆಗಳ ಪರಿಶಿಷ್ಟ ವರ್ಗದವರಿಗೆ ಸಹಾನುಭೂತಿಯ ಗಮನವನ್ನು ಹರಿಸುವಂತೆ ಸರ್ಕಾರವನ್ನು ಒತ್ತಾಯಿಸಿದ್ದರು. ಈ ರಾಷ್ಟ್ರದ ಉದರ ಭಾಗದಂತಿರುವ ಹಾಗೂ ಯಾರ ಕಣ್ಣಿಗೂ ಬೀಳದ ಭಾರತದ ಅರೆ ಹಿಂದುಳಿದ ಆ ಪ್ರದೇಶದ 6 ಲಕ್ಷ ಜನರನ್ನು ಸಂಪೂರ್ಣವಾಗಿ ಕಡೆಗಣಿಸಲಾಗಿದೆ* ಎಂಬುದನ್ನು ಸದನದ ಗಮನಕ್ಕೆ ತಂದಿದ್ದರು.

## ಖ್ಯಾತ ಅಂತರ ರಾಷ್ಟ್ರೀಯ ವ್ಯಕ್ತಿ

ಡಾ. ಲಂಕಾ ಸುಂದರಂರವರ ಜ್ಞಾನಾರ್ಜನೆಯ ದಾಹ ಮತ್ತು ನೆರೆಹೊರೆಯವರ ಸಮಸ್ಯೆಗಳನ್ನು ಅರಿತುಕೊಳ್ಳಬೇಕೆಂಬ ಅವರ ಉತ್ಕಟಾಕಾಂಕ್ಷೆಗಳು ಅವರಿನ್ನೂ ಚಿಕ್ಕವರಿದ್ದಾಗಲೇ ಪಾಶ್ಚಿಮಾತ್ಯ ಮತ್ತು ಪೌರಸ್ತ್ಯ ರಾಷ್ಟ್ರಗಳಲ್ಲಿ ವ್ಯಾಪಕವಾಗಿ ಪ್ರವಾಸ ಮಾಡಲು ಪ್ರೇರೇಪಿಸಿದವು. ಡಾ. ಸುಂದರಂರವರು ವಿದ್ಯಾರ್ಥಿಯಾಗಿದ್ದಾಗಲೇ ಲಂಡನ್‌ನಿಂದ ಡಾಕ್ಟರಲ್ ಪದವಿಯನ್ನು ಪಡೆದರು. ಅಂತಾರಾಷ್ಟ್ರೀಯ ಹಾಗೂ ಕಾನೂನು ಅಕಾಡಮಿಯ ವಿದ್ವಾಂಸರೆಂದು ಕಾರ್ಯ ನಿರ್ವಹಿಸಿದರು. ಕಾನೂನು ಮತ್ತು ಅಂತಾರಾಷ್ಟ್ರೀಯ ವಿಷಯಗಳಲ್ಲಿ ಆಳವಾಗಿ ಅಧ್ಯಯನ ಮಾಡಿದ್ದ ವಿದ್ವಾಂಸ ಡಾ. ಸುಂದರಂರವರನ್ನು ವಿಶ್ವ ಸಂಸ್ಥೆಯ ಸಾಮಾನ್ಯ ಸಭೆ (1946)ಗೆ ಮತ್ತು ಮಾನವ ಹಕ್ಕುಗಳ ಆಯೋಗ (1947) ಕ್ಕೆ ಭಾರತದ ನಿಯೋಗದ ಸದಸ್ಯರಾಗಿ ಆಯ್ಕೆ ಮಾಡಲಾಗಿತ್ತು. ಲೀಗ್ ರಾಷ್ಟ್ರಗಳ ಸಹವರ್ತಿಯಾಗಿಯೂ ಕೂಡ ಅವರು ಕೆಲಸ ಮಾಡಿದ್ದು, ಅವರಿಗೆ ವಹಿಸಿದ ಯಾವುದೇ ಕಾರ್ಯ ಇರಲಿ, ತಮ್ಮ ಕಾರ್ಯ ದಕ್ಷತೆಯ ಅಚ್ಚಳಿಯದ ಮುದ್ರೆಯನ್ನು ಅವರು ಮೂಡಿಸಿದ್ದಾರೆ.

ಸುಮಾರು ಎರಡು ದಶಕಗಳಿಗೂ ಹೆಚ್ಚು ಕಾಲ ಡಾ. ಸುಂದರಂರವರು ವಿದೇಶೀ ಭಾರತೀಯರ ಅನೇಕ ಸಂಘ ಸಂಸ್ಥೆಗಳಲ್ಲಿ ಗೌರವಾನ್ವಿತ ಭಾರತದ ಸದಸ್ಯರಾಗಿ ಕಾರ್ಯ ನಿರ್ವಹಿಸಿದರು. ವಿದೇಶದಲ್ಲಿರುವ ಭಾರತೀಯರ ಸ್ಥಿತಿಗತಿಗಳನ್ನು ಗಂಭೀರವಾಗಿ ಅಧ್ಯಯನ ಮಾಡಲು ಸಿಲೋನ್, ಮಲಯ, ಬರ್ಮಾ, ಸಿಯಾಂ ಮತ್ತು ಇಂಡೋಚೈನಾ ದೇಶಗಳಿಗೆ

---

* ಲೋಕಸಭಾ ಚರ್ಚೆಗಳು - 31ನೇ ಮಾರ್ಚ್ 1963, ಸಿ. 3370

** ಲೋಕಸಭಾ ಚರ್ಚೆಗಳು - 31ನೇ ಮಾರ್ಚ್ 1963. ಸಿ. 3391

ಭೇಟಿ ನೀಡಿದ್ದರು. 1930 ರಲ್ಲಿ " ಭಾರತೀಯರ ವಲಸೆ ಕುರಿತು ಅಂತಾರಾಷ್ಟ್ರೀಯ ದೃಷ್ಟಿಕೋನಗಳು" ವಿಷಯದ ಬಗ್ಗೆ ಒಂದು ಜ್ಞಾಪನಾ ಪತ್ರವನ್ನು ಡಾ. ಸುಂದರಂರವರು ಲಂಡನ್ನಿನ ಸಾರ್ವಭೌಮ ಸಮ್ಮೇಳನಕ್ಕೆ ಸಲ್ಲಿಸಿದ್ದರು. 1931 ರಲ್ಲಿ ಕೈಗೊಂಡ ಅವರ ಸಿಲೋನ್ ಭೇಟಿಯ ಅವಧಿಯಲ್ಲಿ, ಅಲ್ಲಿಯ ಭಾರತೀಯ ಕಾರ್ಮಿಕರ ಸಮಸ್ಯೆಗಳನ್ನು ಕುರಿತು ವ್ಯವಸಿತ್ಥವಾಗಿ ಪುನರವಲೋಕನ ಮಾಡಿದ್ದರು. ಸಿಲೋನ್ - ಭಾರತೀಯ ನಿಯೋಗದ ಕಾರ್ಯದರ್ಶಿಯಾಗಿ ವಸಾಹತು ಕಚೇರಿಗೆ ಭೇಟಿ ನೀಡಲು ದೊರೆತ ಅವಕಾಶದಿಂದ ಮತ್ತೊಮ್ಮೆ ಭಾರತೀಯ ವಲಸೆಗಾರರ ಸಮಸ್ಯೆಗಳನ್ನು ಅರಿಯಲು ಅವರಿಗೆ ಸಾಧ್ಯವಾಯಿತು.

ನಂತರ, ಅವರ ಪ್ರಖ್ಯಾತ ಕೃತಿ "ವಿದೇಶದ ಭಾರತೀಯ" (1933) ಇದರಲ್ಲಿ ಡಾ. ಸುಂದರಂರವರು ಸಿಲೋನ್, ಮಲಯ, ವೆಸ್ಟ್ ಇಂಡೀಸ್, ಫಿಜಿ, ಮಾರಿಶಯಸ್, ಕೆನಡಾ, ಉತ್ತರ ಆಫ್ರಿಕಾ ಮತ್ತು ದಕ್ಷಿಣ ಆಫ್ರಿಕಾ ಒಕ್ಕೂಟಗಳಲ್ಲಿ ಭಾರತೀಯರು ಎದುರಿಸುತ್ತಿರುವ ಜ್ವಲಂತ ಸಮಸ್ಯೆಗಳ ಬಗ್ಗೆ ವ್ಯವಸ್ಥಿತ ವಿಶ್ಲೇಷಣೆ ಮಾಡುವುದರ ಮೂಲಕ ಗಮನ ಸೆಳೆದಿದ್ದಾರೆ.

ಅವರ ಕಾಲದ ಅಂತಾರಾಷ್ಟ್ರೀಯ ಸಮಸ್ಯೆಗಳ ಬಗ್ಗೆ ಡಾ. ಸುಂದರಂರವರಿಗಿದ್ದ ಆಳವಾದ ಜ್ಞಾನ, ಅಂತಾರಾಷ್ಟ್ರೀಯ ಕಾರ್ಯನೀತಿಗಳ ಮತ್ತು ಅವುಗಳದೇ ಆದಂಥ ವಿಶಿಷ್ಟ ನಿಷ್ಠೆಯಿಂದ ಸೇವೆ ಸಲ್ಲಿಸಿದ ಅನೇಕ ಸಂಘ ಸಂಸ್ಥೆಗಳೊಂದಿಗೆ ಅವರ ನಿಕಟ ಸಂಪರ್ಕ ಮತ್ತು ಶೋಷಿತರ ಹಾಗೂ ತುಳಿತಕ್ಕೊಳಪಟ್ಟವರ ಬಗೆಗಿನ ಅವರ ಕಾಳಜಿ ಹಾಗೂ ಅವರ ಏಳ್ಗೆಗಾಗಿ ಮಾಡಿದ ಅಮೂಲ್ಯ ಸೇವೆ, ಇವೆಲ್ಲವೂ ಅವರನ್ನು ಅಂತಾರಾಷ್ಟ್ರೀಯ ವಲಯದಲ್ಲೂ ಒಬ್ಬ ಪರಿಚಿತ ವ್ಯಕ್ತಿಯನ್ನಾಗಿ ಮಾಡಿದವು.

ಡಾ. ಲಂಕಾ ಸುಂದರಂರವರು ಮೂವತ್ತು ವರ್ಷಗಳ ಅಮೂಲ್ಯ ಸೇವೆಯನ್ನು ಸಮಾಜಕ್ಕೆ ಸಲ್ಲಿಸಿ, 1967ನೇ ಇಸವಿ ಜನವರಿ 8 ರಂದು ತಮ್ಮ 63ನೇ ವಯಸ್ಸಿನಲ್ಲಿ ನವದೆಹಲಿಯಲ್ಲಿ ದೈವಾಧೀನರಾದರು. ಆದರೂ, ಸಾರ್ವಜನಿಕ ಜೀವನದ ವಿವಿಧಕ್ಷೇತ್ರಗಳಲ್ಲಿ ಈ ಬಹುಮುಖ ವ್ಯಕ್ತಿತ್ವದ ವ್ಯಕ್ತಿ ಸಲ್ಲಿಸಿದ ಸೇವೆಯಿಂದಾಗಿ ರಾಷ್ಟ್ರ ಅವರನ್ನು ಇನ್ನೂ ನೆನಪು ಮಾಡಿಕೊಳ್ಳುತ್ತದೆ.

## ಆಕರ ಸಾಹಿತ್ಯ


ಕೃತಿಗಳು

(1) ಸುಂದರಂ ಡಾ. ಲಂಕಾ: ವಿದೇಶದ ಭಾರತೀಯರು, ಜಿ.ಎ. ನಟೇಶನ್ ಮತ್ತು ಕಂ., ಮದ್ರಾಸು - 1933.

(2) ಸುಂದರಂ, ಡಾ. ಲಂಕಾ: ಜಾಗತಿಕ ರಾಜಕಾರಣದಲ್ಲಿ ಭಾರತ, ಸುಲ್ತಾನ್‌ಚಂದ್ ಮತ್ತು ಕಂ., ದೆಹಲಿ 1944.

(3) ಸುಂದರಂ, ಡಾ. ಲಂಕಾ - ಭಾರತದ ಸೇನಾ ಪಡೆಗಳ ಮತ್ತು ಅವುಗಳ ವೆಚ್ಚ, ಆವಂತಿ ಪ್ರಕಾಶನ್, ಮುಂಬಯಿ 1946.

(4) ಸುಂದರಂ, ಡಾ. ಲಂಕಾ - ಕೇಂದ್ರ ಹಣಕಾಸುಗಳು, ದಿ. ನ್ಯಾಷನಲ್ ಇನ್‌ಫಾರ್ಮೇಷನ್ ಮತ್ತು ಪಬ್ಲಿಕೇಷನ್ ಲಿ., ಮುಂಬಯಿ 1947

(5) ಫ್ರಾನ್ಸಿಸ್ ಡಬ್ಲ್ಯು: ಇಂಪೀರಿಯಲ್ ಗೆಜೆಟಿಯರ್ ಆಫ್ ಇಂಡಿಯಾ, ಪ್ರಾವಿನ್ಸಿಯಲ್ ಮಾಲಿಕೆಗಳು, ಮದ್ರಾಸು, ವಾಲ್ಯೂಮ್ - 1 ಉಷಾ ಪಬ್ಲಿಕೇಷನ್ಸ್, ನವದೆಹಲಿ ಪು. 319.

ಲೇಖನಗಳು

(1) ಸುಂದರಂ, ಡಾ. ಲಂಕಾ, ಅಮೇರಿಕಾದ ಕಪಟಯುಕ್ತ ಆರ್ಥಿಕ ಪ್ರಾಬಲ್ಯದ ಚೀನಾ, ಚೈನಾ ಮತ್ತು ಭಾರತದಲ್ಲಿ, ಆಂಗ್ಲೋ ಅಮೇರಿಕನ್‌ಗಳ ಸಮನಾಂತರ ದೋರಣೆಗಳು - ವಾಣಿಜ್ಯ ಮತ್ತು ಕೈಗಾರಿಕೆ, XXV ನವದೆಹಲಿ, ಸಂಪುಟ ನಂ. 1, 2ನೇ ಜನವರಿ 1946.

(2) ಸುಂದರಂ ಡಾ. ಲಂಕಾ: ಬರ್ಮಾದ ಪರವಾಗಿ ಭಾರತ ಸರ್ಕಾರದಿಂದ ಅಧಿಕಾರ ಅಪಹರಣವಾಗಿದೆಯೇ?

ವಾಣಿಜ್ಯ ಮತ್ತು ಕೈಗಾರಿಕೆ - XXV ಸಂಪುಟ, ನವದೆಹಲಿ, ನಂ. 16, 17ನೇ ಏಪ್ರಿಲ್ 1946.

(3) ಸುಂದರಂ, ಡಾ. ಲಂಕಾ: ಕೃಷಿ ಸ್ವಾವಲಂಬನೆ ಸಾಧಿಸುವ ನಿಟ್ಟಿನಲ್ಲಿ ರಸಗೊಬ್ಬರ ಕೈಗಾರಿಕಾ ಸ್ಥಾಪನೆ - ವಾಣಿಜ್ಯ ಮತ್ತು ಕೈಗಾರಿಕೆ, ಸಂಪುಟ XXV ನಂ. 19, 8ನೇ ಮೇ, 1946.

(4) ಸುಂದರಂ, ಡಾ. ಲಂಕಾ - ದೀರ್ಘಾವಧಿ ಒಪ್ಪಂದಕ್ಕೆ ಸಂಬಂಧಪಟ್ಟಂತೆ ಮಧ್ಯಂತರ ಸರ್ಕಾರಕ್ಕಿರುವ ಅವಕಾಶಗಳು, ವಾಣಿಜ್ಯ ಮತ್ತು ಕೈಗಾರಿಕೆ, ಸಂಪುಟ XXV ನಂ. 25, 19ನೇ ಜೂನ್, 1946.

(5) ಸುಂದರಂ, ಡಾ. ಲಂಕಾ: ಭಾರತದ ರಫ್ತು ವ್ಯವಹಾರವನ್ನು ವೃದ್ಧಿಪಡಿಸಲು ವಿಶೇಷ ಸಹಕಾರ ಸ್ಥಾಪನೆಯ ಅವಶ್ಯಕತೆ, ವಾಣಿಜ್ಯ ಮತ್ತು ಕೈಗಾರಿಕೆ, ಸಂಪುಟ, XXVI ನಂ.1, 3ನೇ ಜುಲೈ, 1946.

(6) ಸುಂದರಂ, ಡಾ. ಲಂಕಾ, ವ್ಯಾಪಾರ ಮತ್ತು ಉದ್ಯೋಗಗಳನ್ನು ಕುರಿತಂತೆ ಭಾರತ ಮತ್ತು ಅಂತಾರಾಷ್ಟ್ರೀಯ ಸಮ್ಮೇಳನ, ವಾಣಿಜ್ಯ ಮತ್ತು ಕೈಗಾರಿಕೆ, XXVI ಸಂಪುಟ ನಂ. 13, 25ನೇ ಸೆಪ್ಟೆಂಬರ್, 1946.

(7) ಇಂಡೋ - ಅಮೇರಿಕಾ ಆರ್ಥಿಕ ಸಂಬಂಧಗಳ ಭವಿಷ್ಯ - ವಾಣಿಜ್ಯ ಮತ್ತು ಕೈಗಾರಿಕೆ ಸಂಪುಟ XXVI. ನಂ. 21, 20ನೇ ನವೆಂಬರ್ 1946.

(8) ಸುಂದರಂ, ಡಾ. ಲಂಕಾ, ಭಾರತದ ಭವಿಷ್ಯತ್ತಿನ ಸಂವಿಧಾನ ಕುರಿತ ಚಿಂತನೆಗಳು - ಕೇಂದ್ರ ಒಕ್ಕೂಟಕ್ಕೆ ಹೆಚ್ಚಿನ ಅಧಿಕಾರಗಳ ಅವಶ್ಯಕತೆ, ವಾಣಿಜ್ಯ ಮತ್ತು ಕೈಗಾರಿಕೆ ಸಂಪುಟ XXVI, ನಂ. 24, 11ನೇ ಡಿಸೆಂಬರ್ 1946.

ಲೋಕಸಭಾ ಚರ್ಚೆಗಳು

1. 31ನೇ ಮಾರ್ಚ್ 1953. ಸಿ.ಸಿ. 3390, 3991-92.
2. 1ನೇ ಮೇ 1953. ಸಿ.ಸಿ. 6402-6407.
3. 13ನೇ ಮೇ 1953. ಸಿ.ಸಿ. 6556-57, 6565.
4. 22ನೇ ಮಾರ್ಚ್ 1954. ಸಿ.ಸಿ. 2670-2671.
5. 14ನೇ ಮಾರ್ಚ್ 1954. ಸಿ.ಸಿ. 7461-64, 7469
6. 22ನೇ ಫೆಬ್ರವರಿ 1950. ಸಿ. 655.

## 2. ಯೋಜಿತ ಆರ್ಥಿಕ ಬೆಳವಣಿಗೆ: ಪಂಚವಾರ್ಷಿಕ ಯೋಜನೆ*

ಸನ್ಮಾನ್ಯ ಸದನದ ನಾಯಕರು ಈ ಸದನದ ಚರ್ಚೆಗಾಗಿ ವರದಿಯನ್ನು ಮಂಡಿಸುತ್ತಾ, ಹೇಳಿದ ಮಾತುಗಳನ್ನು ಕೇಳಿದಾಗ, ಅವರ ಒಂದೆರಡು ಗಮನಾರ್ಹ ಹೇಳಿಕೆಗಳು ನನಗೆ ದಿಗ್ಭ್ರಮೆಯನ್ನುಂಟು ಮಾಡಿದವು. ಈ ವರದಿಯು ಪರಿಪೂರ್ಣವಾಗಿದೆ ಎಂದು ನಂಬಿಸುವಂಥ ಪ್ರಯತ್ನ ಮಾಡಿಲ್ಲವೆಂದು ನಾಯಕರು ಹೇಳಿದರು. ಈ ವರದಿಯಲ್ಲಿನ ಅನೇಕ ಅಂಶಗಳ ಬಗ್ಗೆ ಟೀಕೆ ಮಾಡುವುದು ಸುಲಭವೆಂದೂ ಸಹ ಅವರು ಹೇಳಿದರು. ನಮ್ಮ ರಾಷ್ಟ್ರೀಯ ಅರ್ಥ ವ್ಯವಸ್ಥೆಯಲ್ಲಿ ಎಲ್ಲ ಕ್ಷೇತ್ರಗಳನ್ನು ಅಭಿವೃದ್ಧಿಪಡಿಸಲು ಮತ್ತು ಪುನರ್ ಸ್ಥಾಪಿಸಲು ಹಾಗೂ ನಮ್ಮ ಸಮಾಜದಲ್ಲಿ ಉನ್ನತ ನೈತಿಕ ಹಾಗೂ ಭೌತಿಕ ಮೌಲ್ಯಗಳನ್ನು ನೆಲೆಗೊಳಿಸಲು ಒಂದು ರೀತಿಯ ದೈವೀಶಕ್ತಿಯ ಪ್ರಭಾವ ನಮ್ಮ ರಾಷ್ಟ್ರಕ್ಕೆ ಅವಶ್ಯವೆಂದೂ ಸಹ ಅವರು ಹೇಳಿದರು. ಸದನದ ನಾಯಕರು ಇಂದು ಮಧ್ಯಾಹ್ನ ನೀಡಿದ ಹೇಳಿಕೆಯೂ ಕೂಡ ನನಗೆ ಕಸಿವಿಸಿಯನ್ನುಂಟು ಮಾಡಿತು. ವರದಿಯ ಮೊದಲ ಭಾಗಕ್ಕೆ ಮಾತ್ರವೇ ಈ ಸದನ ಹೆಚ್ಚು ಗಮನ ನೀಡಬೇಕು, ನಂತರದ ಭಾಗಕ್ಕೆ ಬೇಡ ಎಂದು ಅವರು ಬಯಸುತ್ತಾರೆ. ಮಾತುಗಳ ಮಿತಬಳಕೆಯಲ್ಲಿ ನಂಬಿಕೆಯಿಟ್ಟಿರುವ ನಾನು ಹೆಚ್ಚೇನೂ ಹೇಳದೆ, ಈ ಸದನದ ನಾಯಕರ ಹೇಳಿಕೆಯನ್ನು ಸ್ಪಷ್ಟವಾಗಿ ವಿರೋಧಿಸಬೇಕಾಗಿದೆ ಎಂದಷ್ಟೇ ಹೇಳುತ್ತೇನೆ. ಈ ವರದಿಯ ನಿರ್ದಿಷ್ಟ ಅಧ್ಯಾಯಕ್ಕಷ್ಟೇ ಮಹತ್ವ ನೀಡಬೇಕೆಂಬ ಅವರ ಹೇಳಿಕೆ, ನನಗನಿಸುತ್ತದೆ, ಈ ಯೋಜನೆಯು ಹುಟ್ಟಿದಾರಂಭದಲ್ಲಿಯೇ ಸಾಯುವ ಸ್ಥಿತಿಯನ್ನು ಉಂಟು ಮಾಡಿದೆ ಬೃಹದಾಕಾರವಾದ ಮತ್ತು ಜ್ವಲಂತವಾದ ಆಹಾರ ಸಮಸ್ಯೆಯ ಬಗ್ಗೆ ಕೇವಲ $14^1/_2$ ಪುಟಗಳಿಗೆ ಮೀರದಂತೆ ಚರ್ಚಿಸಿರುವುದು ನನಗೆ ಒಂದು ರೀತಿಯ ಆಶ್ಚರ್ಯವನ್ನುಂಟು ಮಾಡಿದೆ. ಒಂದು ಅಧ್ಯಾಯವನ್ನು ಪೂರ್ತಿಗೊಳಿಸಲು ಹಾಗೂ ಆ ಅಧ್ಯಾಯದ ಒಳಾಂಶಗಳಿಗೆ ಪ್ರಾಮುಖ್ಯತೆ ತರಲು ಕೇವಲ ವಿಷಯದ ಗಾತ್ರವಷ್ಟೇ ಮುಖ್ಯವಾಗಲಾರದು. ಆದರೂ, ಆಹಾರ ಸಮಸ್ಯೆಯ ಬಗೆಗಿನ ಈ ರೀತಿಯ ನಡವಳಿಕೆ, ಈ ರಾಷ್ಟ್ರದ ಒಟ್ಟಾರೆ ಅಭಿವೃದ್ಧಿ ಮತ್ತು ಯೋಜನಾ ವ್ಯವಸ್ಥೆಗೆ ಅದರ ಹುಟ್ಟಿನ ಆರಂಭದಲ್ಲಿಯೇ ಸಾಯುವಂಥ ಸ್ಥಿತಿಯನ್ನು ತಂದಿದೆ ಎಂದು ನಾನಿಲ್ಲಿ ಸಲಹಾ ರೂಪದಲ್ಲಿ ಹೇಳಲು ಇಚ್ಚಿಸುತ್ತೇನೆ.

ಕೇವಲ ಐದು ಅಥವಾ ಆರು ವಾರಗಳ ಹಿಂದಷ್ಟೇ ಈ ಯೋಜನಾ ಆಯೋಗವು ನಮ್ಮಲ್ಲಿನ ಕೆಲವರನ್ನು ಅಂದರೆ ಬಹಳಷ್ಟು ಸದಸ್ಯರನ್ನು, ಸಮಾಲೋಚನೆಗೆ ಹಾಗೂ ಅವರ ಅಭಿಪ್ರಾಯಗಳನ್ನು ಪಡೆಯಲು ಆಹ್ವಾನಿಸಿದ್ದಾಗ ಆಹಾರದ ಮೇಲಿನ ಈ ಒಂದು ನಿರ್ದಿಷ್ಟ ಅಧ್ಯಾಯವನ್ನು ನಮಗೆ ಒದಗಿಸಲಿಲ್ಲವೆಂಬ ಅಂಶವನ್ನು ಹೇಳಲು ನನಗೆ ಅನುಮತಿ ನೀಡಬೇಕೆಂದು ಕೋರುತ್ತೇನೆ. ನಾನು ಒಬ್ಬ ಪ್ರತ್ಯೇಕ ಪಕ್ಷದವನೆಂದಾಗಲೀ ಅಥವಾ ಪಕ್ಷದ ಸ್ಫೂರ್ತಿಯಿಂದಾಗಲೀ ಈ ಪ್ರಶ್ನೆಯನ್ನು ಎತ್ತುತ್ತಿಲ್ಲವೆಂದು ನನ್ನ ಜವಾಬ್ದಾರಿಯನ್ನರಿತು ಹೇಳುತ್ತೇನೆ. ನಾನೇಕೆ ಈ ಒಂದು ಅಧ್ಯಾಯವನ್ನು ಉಲ್ಲೇಖಿಸುತ್ತೇನೆಂದರೆ ಈ ವರದಿಯ ಉದ್ದೇಶಗಳಿಗಷ್ಟೇ ನಾವು ಹೆಚ್ಚಿನ ಗಮನ ನೀಡಬೇಕು, ಅದರ ವಿವರಗಳಿಗಲ್ಲ ಎಂದು ಈ

* ............ಪಂಚ ವಾರ್ಷಿಕ ಯೋಜನೆಯ ಮೇಲೆ ಸರ್ಕಾರದ ನಿರ್ಣಯದ ಬಗ್ಗೆ ದಿನಾಂಕ 15ನೇ ಡಿಸೆಂಬರ್, 1952 ರಂದು ಲೋಕಸಭೆಯಲ್ಲಿ ಮಾಡಿದ ಭಾಷಣ, ಸಿಸಿ, 2389 - 96

ಸದನದ ನಾಯಕರ ನಿರೀಕ್ಷೆಯನ್ನು ಒಪ್ಪದಿರಲು ಉಲ್ಲೇಖಿಸುತ್ತಿದ್ದೇನೆ. ಆಹಾರದ ಮೇಲಿನ XI ನೇ ಅಧ್ಯಾಯದಿಂದ ನಾನು ಲೆಕ್ಕ ಮಾಡಿದ ಕೆಲವು ಅಂಕಿಅಂಶಗಳನ್ನು ಈ ಸದನದ ಗಮನಕ್ಕೆ ತರುತ್ತಿದ್ದೇನೆ. 1946 ರಿಂದ 1952ರವರೆಗೆ ಪ್ರತಿವರ್ಷ 2.25, 2.23, 2.84, 2.71, 3.13, 4.17 ಮತ್ತು 3.90 ಮಿಲಿಯನ್ ಟನ್ನುಗಳಷ್ಟು ಆಹಾರ ಕೊರತೆ ಉಂಟಾಗಿದ್ದು, 7 ವರ್ಷದ ಅವಧಿಯಲ್ಲಿ ಒಟ್ಟಾರೆ 750 ಕೋಟಿ ರೂ.ಗಳಷ್ಟು ವೆಚ್ಚ ಇದಕ್ಕೆ ತಗುಲಿದೆ. ನನ್ನ ಈ ಹೇಳಿಕೆಯಲ್ಲಿ ಎಲ್ಲಾದರೂ ತಪ್ಪುಗಳು ಉಂಟಾಗಿದ್ದಲ್ಲಿ ಅವುಗಳನ್ನು ತಾವು ಸರಿಪಡಿಸಬಹುದು. ಮುಂಬರುವ ವರ್ಷಗಳಿಗಾಗಿ ಆಹಾರ ಆಮದಿನ ಗುರಿ ಏನಾದರೂ ಇದೆಯೇ? ನನಗೆ ತಿಳಿದುಬಂದ ಮಾಹಿತಿಯ ಪ್ರಕಾರ ಮುಂಬರುವ ಮೂರು ವರ್ಷಗಳಿಗೆ ಅಂದರೆ ಮೊದಲನೇ ಪಂಚವಾರ್ಷಿಕ ಯೋಜನೆಯ ಉಳಿದ ವರ್ಷಗಳಿಗೆ ಆಹಾರ ಆಮದಿನ ಗುರಿ, ಪ್ರತಿ ವರ್ಷ, ಸಾಮಾನ್ಯವಾಗಿ ಮೂರು ಮಿಲಿಯನ್ ಟನ್‌ಗಳು.

ಸನ್ಮಾನ್ಯ ಹಣಕಾಸು ಸಚಿವರ ತಿದ್ದುಪಡಿಗಳನ್ನು ನಾನು ಒಪ್ಪಿಕೊಳ್ಳಲು ಸಿದ್ಧನಿದ್ದೇನೆ. ಏಕೆಂದರೆ, ಈ ಅಂಕಿ ಅಂಶಗಳು ಕೇವಲ ಅಂದಾಜು ಅಂಕಿಅಂಶಗಳಾಗಿದ್ದು, ಇವುಗಳನ್ನು ವರದಿಯಲ್ಲಿ ಸ್ಪಷ್ಟವಾಗಿ ನಿರೂಪಿಸಿರುವುದಿಲ್ಲ. ಇವು ಇನ್ನೂ ಕಡಿಮೆಯಾಗಿರಬಹುದು. ಎರಡು ಮಿಲಿಯನ್ ಟನ್‌ಗಳೆಂದು ನಾನು ಭಾವಿಸಬಹುದೆ? ಪ್ರಾಯಶಃ 300 ಕೋಟಿ ರೂ.ಗಳ ವೆಚ್ಚದಲ್ಲಿ 3 ವರ್ಷಗಳಲ್ಲಿ ಆರು ಮಿಲಿಯನ್ ಟನ್ನುಗಳು - ಇದನ್ನು ಅಂದಾಜು ಮಾಡುವಲ್ಲಿ ನಾನು ಬಹಳಷ್ಟು ತಪ್ಪುಗಳನ್ನು ಮಾಡಿಲ್ಲವೆಂದು ಭಾವಿಸುವೆನು.

ವರ್ಷಕ್ಕೆ ಎರಡು ಅಥವಾ ಎರಡೂವರೆ ಟನ್ನುಗಳಂತೆ ಮುಂದಿನ ಮೂರು ವರ್ಷಗಳಿಗೆ ಮಾಡಿಕೊಳ್ಳಲಿರುವ ಅದೆಷ್ಟೇ ಪ್ರಮಾಣದ ಆಮದಿಗೆ, ಸಮನಾದಂಥ ರೂ. 300 ಕೋಟಿ ಅಥವಾ ಅದಕ್ಕಿಂತಲೂ ಹೆಚ್ಚು ಹಣವನ್ನು ಮೊದಲನೇ ಪಂಚವಾರ್ಷಿಕ ಯೋಜನೆಯ ಮೂರು ವರ್ಷಗಳ ಅವಧಿಗೆ ಒದಗಿಸಿಲ್ಲವೆಂಬ ಅಂಶವನ್ನು ತಿಳಿಸಲು ಇಚ್ಛಿಸುತ್ತೇನೆ. ಒಂದು ಕಾರಣಕ್ಕಾಗಿ ಈ ವಿಷಯದ ಬಗ್ಗೆ ಗಮನ ಸೆಳೆದಿದ್ದೇನೆ. ಯೋಜನಾ ವರದಿಯಲ್ಲಿ ಆಹಾರ ಸಮಸ್ಯೆಯ ಬಗ್ಗೆ ನೀಡಿರುವ ಕಾಳಜಿ, ನಾನೀಗಾಗಲೇ ಹೇಳಿದಂತೆ ತೀರಾ ಅತ್ಯಲ್ಪ, ಅಪೂರ್ಣ ಹಾಗೂ ಔಪಚಾರಿಕವಾಗಿದ್ದು ಇಡೀ ಸಮಸ್ಯೆಯ ಬಗ್ಗೆ ಈ ಸದನ ಮತ್ತು ರಾಷ್ಟ್ರಕ್ಕೆ ಅರಿವು ಮೂಡಿಸುವಲ್ಲಿ ಸಹಾಯಕವಾಗುವಂಥ ಯಾವುದೇ ಅಂದಾಜನ್ನು ಮಾಡದಿರುವುದರಿಂದ ಈ ರಾಷ್ಟ್ರದ ಸಮಗ್ರ ಯೋಜನೆ ಮತ್ತು ಅಭಿವೃದ್ಧಿ ಕಾರ್ಯಕ್ರಮಗಳು ಕುಸಿದುಬೀಳಬಹುದೆಂಬ ಶಂಕೆಯಿಂದ ನನಗೆ ತೀರಾ ನೋವುಂಟಾಗಿದೆ.

ಈ ಒಂದು ನಿರ್ದಿಷ್ಟ ವಿಷಯದಿಂದ ಉದ್ಭವವಾದ ಒಂದು ಅಥವಾ ಎರಡು ಪ್ರಮುಖ ಅಂಶಗಳ ಬಗ್ಗೆ ಸದನದ ಗಮನವನ್ನು ಸೆಳೆಯಬಯಸುತ್ತೇನೆ. ನೀರಾವರಿಗಾಗಿ ರೂ. 168 ಕೋಟಿ, ವಿವಿಧೋದ್ದೇಶ ಯೋಜನೆಗಳಿಗೆ ರೂ. 226 ಕೋಟಿ, ಇಂಧನಕ್ಕಾಗಿ ರೂ. 127 ಕೋಟಿಗಳನ್ನು ಒದಗಿಸಿರುವುದು ಇಲ್ಲಿ ಕಂಡುಬರುತ್ತದೆ. ಇದರ ಜೊತೆಗೆ,

ಸಣ್ಣ ನೀರಾವರಿ ಕಾಮಗಾರಿಗಳಿಗಾಗಿ ರೂ. 77 ಕೋಟಿಗಳನ್ನು ಒದಗಿಸಲಾಗಿದೆ. ಇನ್ನೊಂದು ರೀತಿಯಲ್ಲಿ ಹೇಳುವುದಾದರೆ, ಪ್ರತಿಬಿಂಬಿಸಲಾದ 2068 ಕೋಟಿ ರೂಪಾಯಿಗಳಲ್ಲಿ ಸುಮಾರು 800 ಕೋಟಿ ರೂ.ಗಳನ್ನು ಸಮಸ್ಯೆಯ ಈ ಒಂದು ನಿರ್ದಿಷ್ಟ ಭಾಗಕ್ಕೆ ಖರ್ಚು ಮಾಡಲಾಗುತ್ತದೆ. ಸದನದ ಗಮನವನ್ನು ವಿಶೇಷವಾಗಿ 26ನೇ ಅಧ್ಯಾಯದ 42ನೇ ಪ್ಯಾರಾದ ಕಡೆಗೆ ಸೆಳೆಯಬಯಸುತ್ತಿದ್ದು ಈ ಕೆಳಕಾಣಿಸಿದ ಗಮನಾರ್ಹ ಹೇಳಿಕೆಯನ್ನು ನೀವಲ್ಲಿ ನೋಡುತ್ತೀರಿ. ಅದನ್ನು ಉದಾಹರಿಸುತ್ತೇನೆ:

> "............... ಯೋಜನೆಯಲ್ಲಿ ಸೇರಿಸಲಾದ ಎಲ್ಲಾ ಯೋಜನೆಗಳನ್ನು ವಿವರವಾದ ತಾಂತ್ರಿಕ ವಿಚಾರಣೆಗೊಳಪಡಿಸಿ ಹಾಗೂ ಅವುಗಳ ಆರ್ಥಿಕ ಪ್ರಯೋಜನಾಂಶಗಳನ್ನು ಎಚ್ಚರಿಕೆಯಿಂದ ನಿರ್ಧರಿಸಿದ ತರುವಾಯವೇ, ಕಾಮಗಾರಿಗಳನ್ನು ಪ್ರಾರಂಭಿಸಲಾಗಿದೆ ಎನ್ನುವುದು ಸರಿಯಾಗಲಾರದು."

ಲೋಪದೋಷಗಳನ್ನು ಕಂಡುಹಿಡಿಯುವ ಉದ್ದೇಶದಿಂದಾಗಲೀ ಅಥವಾ ದ್ವೇಷಾಸೂಯೆಯಿಂದಾಗಲಿ ಈ ಸಮಸ್ಯೆಯ ವಿಶ್ಲೇಷಣೆಯನ್ನು ನಾನು ಮಾಡುತ್ತಿಲ್ಲವೆಂಬ ಭರವಸೆಯನ್ನು ಈಗಾಗಲೇ ನೀಡಿದ್ದೇನೆ. ಕೃಷಿ ಮತ್ತು ಆಹಾರ ಸಮಸ್ಯೆಯ ಬಗೆಗಿನ ಒಟ್ಟಾರೆ ದೃಷ್ಟಿಕೋನ ನಿರ್ದಿಷ್ಟವಾಗಿ, ಸಮರ್ಪಕ ರೀತಿಯಲ್ಲಿ ರೂಪಿತವಾಗಿಲ್ಲ ಹಾಗೂ ಸರಿಯಾದ ದಿಕ್ಕಿನಲ್ಲಿ ಕೊಂಡೊಯ್ದಿಲ್ಲವೆಂಬ ಅಂಶವನ್ನು ಹೇಳಲು ಇಚ್ಛಿಸುತ್ತೇನೆ. ಸಣ್ಣ ನೀರಾವರಿ ಕಾಮಗಾರಿಗಳಿಗಾಗಿ ಸ್ವಲ್ಪ ಹೆಚ್ಚಿನ ಪ್ರಮಾಣದ ಹಣವನ್ನು ಖರ್ಚು ಮಾಡಿದ್ದಲ್ಲಿ ನಮ್ಮ ಸಮಸ್ಯೆಗಳು ಅತಿ ಶೀಘ್ರದಲ್ಲಿ ಪರಿಹಾರವಾಗುತ್ತಿದ್ದವು. ಕಳೆದ ಅಧಿವೇಶನದ ಅನೇಕ ಸಂದರ್ಭಗಳಲ್ಲಿ ನಾನು ಹೇಳಿದಂತೆ ವಿವಿಧೋದ್ದೇಶ ಯೋಜನೆಗಳಿಗೆ ಸಂಬಂಧಪಟ್ಟಂತೆ ರಾಜಕೀಯ ಒತ್ತಡ, ಸಮೂಹ ಒತ್ತಡ, ಹೀಗೆ ಸಾಧ್ಯವಾದ ಎಲ್ಲಾ ರೀತಿಯ ಒತ್ತಡಗಳನ್ನು ತರುತ್ತಿರುವುದು ದುರದೃಷ್ಟಕರ ಎಂದು ನಿಸ್ಸಂದೇಹವಾಗಿ ಹೇಳಲು ಇಚ್ಛಿಸುತ್ತೇನೆ. ಇಷ್ಟೆಲ್ಲಾ ಏಕೆ? ಕಳೆದ ಕೆಲವೇ ದಿನಗಳ ಹಿಂದೆ ಈ ಸದನದಲ್ಲಿ ಮಂಡಿಸಲಾದ ಕೃಷ್ಣ ಪನ್ನಾರ ಯೋಜನೆಯ ವರದಿಯನ್ನು ನೀವೆಲ್ಲಾ ಓದಿದ್ದೀರಿ. ಯಾವುದೇ ಸ್ಥಳೀಯ ಸಮಸ್ಯೆಯನ್ನು, ಆ ಬಗ್ಗೆ ನನಗೆ ಸ್ಪಷ್ಟ ಮಾಹಿತಿ ಗೊತ್ತಿದ್ದರೂ, ಇಲ್ಲಿ ಪ್ರಸ್ತಾಪಿಸಿ ಅದನ್ನು ರಾಷ್ಟ್ರೀಯ ಸಮಸ್ಯೆಯನ್ನಾಗಿ ಮಾಡಲು ಇಚ್ಛಿಸುವುದಿಲ್ಲ. ವಿವಿಧೋದ್ದೇಶ ಯೋಜನೆಗಳ ಇಡೀ ಕಾರ್ಯಕ್ರಮ ಫಲ ನೀಡಬೇಕಾದರೆ ಹತ್ತರಿಂದ ಹದಿನೈದು ವರ್ಷಗಳಾದರೂ ಬೇಕಾಗುತ್ತದೆ ಎಂಬುದರ ಬಗ್ಗೆ ಈ ಸದನದ ಗಮನವನ್ನು ಸೆಳೆಯಲು ಪ್ರಯತ್ನಿಸುತ್ತಿದ್ದೇನೆ. ಸ್ವಜನ ಪಕ್ಷಪಾತ, ಲಂಚಗುಳಿತನ ಇತ್ಯಾದಿಗಳಿಗಾಗಿ ವಿವಿಧೋದ್ದೇಶ ಯೋಜನೆಗಳನ್ನು ಉಪಯೋಗಿಸಿಕೊಂಡು ಅಪಾರ ಹಣವನ್ನು ವ್ಯಯ ಮಾಡಿರುವ ರೀತಿಯ ಬಗ್ಗೆ ಗುರುತರ ಆಪಾದನೆಗಳನ್ನು ಮಾಡಿ ಈ ಸದನದಲ್ಲಿ ಅನೇಕ ಬಾರಿ ಪ್ರಸ್ತಾಪಿಸಿರುವುದನ್ನು, ಅನ್ಯಥಾ ಭಾವಿಸದಿದ್ದಲ್ಲಿ, ಈ ಸದನದ ಗಮನಕ್ಕೆ ತರುತ್ತಿದ್ದೇನೆ. ಸಣ್ಣ ನೀರಾವರಿ ಕಾಮಗಾರಿಗಳಿಗಾಗಿ

ಪ್ರತಿ ತಾಲ್ಲೂಕು ಹಾಗೂ ಜಿಲ್ಲೆಗಳಿಗೆ ಹೆಚ್ಚಿನ ಪ್ರಮಾಣದ ಹಣವನ್ನು ಒದಗಿಸಿ, ಹೆಚ್ಚಿನ ಗಮನ ನೀಡಿದ್ದೇ ಆಗಿದ್ದಲ್ಲಿ ಆಹಾರ ಸಮಸ್ಯೆಯನ್ನು ಶೀಘ್ರದಲ್ಲಿಯೇ ಪರಿಹರಿಸಬಹುದಿತ್ತು. ಮುಂದಿನ ಬೆಳೆಯ ಕಾಲದ ಒಳಗೇ ಪ್ರತಿಫಲ ನಮಗೆ ದೊರಕಬೇಕೆಂಬುದು ನನ್ನ ಇಚ್ಛೆ. ಆದರೆ ವಿವಿಧೋದ್ದೇಶ ಯೋಜನೆಗಳು ಫಲ ನೀಡಬೇಕೆಂದರೆ ದಶಕಗಳೇ ಬೇಕು. ಇದಕ್ಕಿಂತಲೂ ಮುಖ್ಯವಾಗಿ ನಾವು ಅಪಾರ ವೆಚ್ಚದಲ್ಲಿ ಆಹಾರ ಆಮದು ಮಾಡಿಕೊಳ್ಳಲೇಬೇಕಾಗುತ್ತದೆ. ಇದಕ್ಕಾಗಿ, ಈ ಯೋಜನಾ ಅವಧಿಯ ಉಳಿದ ಮೂರು ವರ್ಷಗಳಲ್ಲಿ ಪ್ರಾಯಶಃ ಮೂರು ಅಥವಾ ನಾಲ್ಕು ನೂರು ಕೋಟಿ ರೂಪಾಯಿಗಳನ್ನಾದರೂ ಖರ್ಚು ಮಾಡಬೇಕಾಗುತ್ತದೆ.

ಪ್ರಸ್ತಾವಿಸಬೇಕಾದ ಇನ್ನೂ ಒಂದೆರಡು ಸಣ್ಣ ವಿಷಯಗಳು ಇದೆ. ಹೊಸ ವಿವಿಧೋದ್ದೇಶ ಯೋಜನೆಗಳೆಂದು ಕರೆಯಲಾದ ಕೋಸ್ಸಿ ಕೃಷ್ಣ, ಚಂಬಲ್ ಇತ್ಯಾದಿಗಳನ್ನು ಯೋಜನೆಯಲ್ಲಿ ಪಟ್ಟಿ ಮಾಡಲಾಗಿದೆ. ಇವುಗಳಿಗಾಗಿ 200 ಕೋಟಿ ರೂ.ಗಳ ವೆಚ್ಚವನ್ನು ಅಂದಾಜು ಮಾಡಲಾಗಿದೆ. ಆದರೆ, ಈ ಯೋಜನೆಯಲ್ಲಿ ಇವುಗಳಿಗಾಗಿ ಕಲ್ಪಿಸಲಾದ ಹಣಕಾಸು ವ್ಯವಸ್ಥೆ ಕೇವಲ 40 ಕೋಟಿ ರೂ.ಗಳು. ಸುಮಾರು 6 ವಾರಗಳ ಹಿಂದೆ, ಯೋಜನಾ ಆಯೋಗವು ಸಮಾಲೋಚನೆಗಾಗಿ ನನ್ನನ್ನು ಆಹ್ವಾನಿಸಿದ್ದರಿಂದ, ಅದರ ಮೊದಲ ಕರಡನ್ನು ಓದುವ ಅವಕಾಶ ನನಗೆ ಲಭಿಸಿತು. ಅದರಲ್ಲಿನ ಅನೇಕ ಬಾಬುಗಳು ಪುನರಾವರ್ತನೆ ಆಗಿದ್ದವಲ್ಲದೆ, ಕಲಸುಮೇಲೋಗರವಾಗಿದ್ದವು. ಕರಾರುವಕ್ಕಾದ ದೃಷ್ಟಿಕೋನ ಅಲ್ಲಿರಲಿಲ್ಲ. ಅಂದರೆ ಯೋಜನೆಗಳಲ್ಲಿ ಒಳಗೊಂಡ ಹಣಕಾಸಿನ ಮೊತ್ತ ಕುರಿತಂತೆ ಯಾವುದೇ ನಿಖರ ಮಾನದಂಡಗಳು ಕಂಡುಬರುತ್ತಿರಲಿಲ್ಲ. ವೆಚ್ಚದ ಬಾಬುಗಳನ್ನು ಈ ರೀತಿಯಲ್ಲಿ ಒಂದರೊಳಗೊಂದಂತೆ ಸೇರಿಸಿರುವುದರಿಂದ, ಯೋಜನೆಯ ಮೌಲ್ಯ ಕಡಿಮೆ ಆಗುತ್ತದೆ ಹಾಗೂ ಯೋಜನೆಯ ಗತಿ ಕುಂದುತ್ತದೆ.

ಯೋಜನಾ ಆಯೋಗ ವರದಿಯ 4ನೇ ಅಧ್ಯಾಯದ 10ನೇ ಪ್ಯಾರಾವನ್ನು ಈಗ ಓದಿ ಹೇಳುತ್ತೇನೆ:

> "ಯೋಜನೆಗಾಗಿ ಮಾಡಲಾದ ಆರ್ಥಿಕ ಸಂಪನ್ಮೂಲ ಮೌಲ್ಯ ನಿರ್ಧಾರಣೆಯಲ್ಲಿ ತಿಳಿಸಿದಂತೆ, ಸಾರ್ವಜನಿಕ ಅಭಿವೃದ್ಧಿ ಯೋಜನೆಗೆ ಅವಶ್ಯವಾದ ರೂ. 655 ಕೋಟಿ ಬಾಕಿ ಹಣವನ್ನು ಸಾಧ್ಯವಾದಷ್ಟು ಮುಂದೆ ಬರಬಹುದಾದ ಇನ್ನಷ್ಟು ಹೊರ ಸಂಪನ್ಮೂಲಗಳಿಂದ ಹಾಗೂ ವ್ಯಯಾಧಿಕ್ಯದ ಆರ್ಥಿಕ ವಿಧಾನದಿಂದ ಭರಿಸಬೇಕಾಗುತ್ತದೆ."

ಗಮನಿಸಬೇಕಾದ ಅಂಶ ಇದು. ಅಂದರೆ ರಾಷ್ಟ್ರದ ಸಂಪನ್ಮೂಲಗಳಲ್ಲಿ ಸಾಧ್ಯವಾದ ಪ್ರತಿಯೊಂದು ಕಾರ್ಯಕ್ರಮವನ್ನು ಆರ್ಥಿಕ ಚೌಕಟ್ಟಿನ ರೂಪದಲ್ಲಿ ಈಗಾಗಲೇ ತರಲಾಗಿದೆ.

ಆಮದು ಮತ್ತು ರಫ್ತುಗಳ ಮೌಲ್ಯಾಂತರದ ಬಗ್ಗೆ ಈ ಯೋಜನೆಯಲ್ಲಿ ಏನು ಬರೆಯಲಾಗಿದೆ ಎಂಬುದನ್ನು ನಾನು ಮರೆಯುತ್ತಿಲ್ಲ, ಆದರೆ, ಆರ್ಥಿಕ ಲಭ್ಯತೆಯ ಗರಿಷ್ಠ ಮೊತ್ತವನ್ನು ಈ ಯೋಜನೆಯಲ್ಲಿ ನಿರೀಕ್ಷಿಸಲಾಗಿದೆಯಲ್ಲದೆ ಅದನ್ನು ಪ್ರತಿಬಿಂಬಿಸಿಯೂ ಆಗಿದೆ. ಪರಿಣಾಮವಾಗಿ, ಈ ಯೋಜನೆಯನ್ನು ಅನುಷ್ಠಾನಗೊಳಿಸುವಾಗ ಎದುರಾಗಬಹುದಾದ ಸಂಭವನೀಯ ಹಣಕಾಸು ಅಂತರಗಳು ಮತ್ತು ಲೋಪಗಳ ಬಗ್ಗೆ ನನಗೆ ಬಹಳ ಆತಂಕವಾಗಿದೆ. ಅತೀ ಮುಖ್ಯವೆಂದು ನಾನು ಪರಿಗಣಿಸಿರುವ, ಸಮಸ್ಯೆಯ ಮತ್ತೊಂದು ಭಾಗದ ಬಗ್ಗೆ ಉಲ್ಲೇಖಿಸಲು ಇಚ್ಛಿಸುತ್ತೇನೆ. ಅದು, ಸಾರ್ವಜನಿಕ ಸಹಕಾರಕ್ಕೆ ಸಂಬಂಧಪಟ್ಟಿದ್ದು, ಯೋಜನೆಯ ಎರಡನೇ ಭಾಗದಲ್ಲಿ ಪ್ರಸ್ತಾಪಿಸಲ್ಪಟ್ಟಿದೆ. ಸದನದ ನಾಯಕರ ವಿಚಾರಧಾರೆಯನ್ನು ಆಲಿಸುತ್ತಿದ್ದಾಗ, ನನಗೆ ಬಹಳಷ್ಟು ಸಂದೇಹಗಳು ಉಂಟಾದವು. ಈ ರಾಷ್ಟ್ರಕ್ಕೆ ಸಮರ್ಪಿಸಲು ಉದ್ದೇಶಿಸಲಾದ ಕ್ರಿಯಾತ್ಮಕ ದೃಷ್ಟಿಕೋನವು, ಪ್ರತಿಯೊಬ್ಬ ವ್ಯಕ್ತಿಯಲ್ಲೂ ಸಮರ್ಪಣೆ, ಭ್ರಾತೃತ್ವ ಹಾಗೂ ಸಹಕಾರ ಮನೋಭಾವಗಳನ್ನು ಉಂಟು ಮಾಡುವುದೇ? ಹಾಗೂ ಜಾರಿಗೊಳಿಸಬೇಕೆಂದಿರುವ ವಿಧಾನವು, ರಾಷ್ಟ್ರೀಯತೆಯನ್ನು ಪಡೆದುಕೊಳ್ಳುವುದೇ ಹಾಗೂ ಫಲಪ್ರದವಾಗುವುದೇ ಇತ್ಯಾದಿ., ಗೊರವಾಲ ವರದಿಯಲ್ಲಿನ ಅಂಶಗಳನ್ನು ಈ ವರದಿಯಲ್ಲಿ ಹೇರಳವಾಗಿ ಉಪಯೋಗಿಸಿಕೊಳ್ಳಲಾಗಿದೆ. ಪ್ರಾಯಶಃ ಹೊರ ಮೂಲಗಳಿಂದ ಉದಾಹರಿಸಿರುವ ವರದಿ ಕೇವಲ ಇದೊಂದೇ ಎನ್ನಬಹುದು. ಆದರೆ, ಮಾಡಿರುವುದಾದರೂ ಏನು?

ಭ್ರಷ್ಟಾಚಾರ, ಸಾರ್ವಜನಿಕ ಆಡಳಿತ ಸುಧಾರಣೆ ಇತ್ಯಾದಿಗಳ ಮೇಲಿನ ಗೊರವಾಲ ವರದಿ ಒಂದು ಮಹತಪೂರ್ಣ ವರದಿ. ಆ ವರದಿಯಲ್ಲಿರುವ ಸತ್ಯ ಸಂಗತಿಗಳು ನನ್ನನ್ನು ಅನ್ಯಥಾ ಭಾವಿಸದಿದ್ದಲ್ಲಿ, ಈ ರಾಷ್ಟ್ರದ ಕ್ರಮಬದ್ಧವಾದ ಕಾನೂನಿನ ಅಂಗವಾಗಿ ಪರಿಣಮಿಸಬೇಕು ಹಾಗೂ ಆಡಳಿತದ ಕಾರ್ಯವಿಧಾನವಾಗಬೇಕು.

ಆದರೆ, ಈ ರಾಷ್ಟ್ರದ ಪ್ರಸಕ್ತ ಸಂಗತಿಗಳಾದರೂ ಏನಾಗಿವೆ? ಸಾರ್ವಜನಿಕ ಸಹಕಾರದ ರಾಷ್ಟ್ರೀಯ ಸಲಹಾ ಸಮಿತಿಯ ರಚನೆಗೆ ಅವಕಾಶವಿದ್ದು, ಕಳೆದ ಅಧಿವೇಶನದ ಕೊನೆಯದಿನ ಅಥವಾ ಈ ಸದನದಿಂದ ನಾವು ನಿರ್ಗಮಿಸಿದ ದಿನದಂದು ಸಭೆ ಸೇರಿದ್ದನ್ನು ಬಿಟ್ಟರೆ ಇದುವರೆಗೂ ಏನನ್ನೂ ಅದು ಸಾಧಿಸಿಲ್ಲ. ಭಾರತ ಸೇವಕ ಸಮಾಜವೆಂದು ನಾವೇನು ಕರೆಯುತ್ತೇವೆಯೋ ಅದರ ಅಂಗರಚನೆ, ಅದರ ಸಿಬ್ಬಂದಿ ವರ್ಗ, ಸಾರ್ವಜನಿಕ ಜೀವನದ ಬಗ್ಗೆ ವಿವಿಧ ವರ್ಗಗಳ ಬಗ್ಗೆ, ವಿಶೇಷವಾಗಿ ಸಮಾಜದ ರಾಜಕೀಯ ವಿಭಾಗಗಳು ಮತ್ತು ರಾಜಕೀಯ ಪಕ್ಷಗಳ ಮೇಲಿನ ಅದರ ದೃಷ್ಟಿಕೋನ ದೋಷಯುಕ್ತವಾಗಿದೆ ಎಂದು ಸಾರ್ವತ್ರಿಕವಾಗಿ ಹೇಳುವಂಥ ಅನೇಕ ಸಂದರ್ಭಗಳು ನನಗೆ ಒದಗಿಬಂದವು. ಈ ಒಂದು ವಿಷಯ ನನಗೆ ತೀರಾ ಆತಂಕವನ್ನುಂಟು ಮಾಡಿದೆ) ಪ್ರತಿಯೊಂದೂ, ಅಧಿಕಾರಿ ಶಾಹಿಯಾಗಿ ಪರಿವರ್ತನೆಗೊಳ್ಳುವ ಜೊಣಗಾರಿಕೆಯನ್ನು ಅತ್ಯಂತ ತಾಳ್ಮೆಯಿಂದ ನಿಭಾಯಿಸುತ್ತಿರುವ

ಬಡಪಾಯಿ ಜಿಲ್ಲಾ ನ್ಯಾಯಾಧೀಶರಿಗೆ ಹಾಗೂ ಜಿಲ್ಲಾಧಿಕಾರಿಗೆ, ಅವನು ಸಜ್ಜಾಗಿಲ್ಲದಿದ್ದರೂ ಮತ್ತಷ್ಟು ಕಾರ್ಯಭಾರ ಹೆಚ್ಚಾಗುತ್ತದೆ.

ವರದಿಯ 2ನೇ ಭಾಗದಲ್ಲಿ ಅನೇಕ ಸಲಹೆಗಳನ್ನು ಮಾಡಲಾಗಿದೆ. ಇನ್ನೊಂದು ಯಂತ್ರದ ಆಡಳಿತ ಇರುತ್ತದೆಯೇ? ಸಾರ್ವಜನಿಕ ಸಹಕಾರದ ಈಡೇರಿಕೆಯ ಉದ್ದೇಶದಿಂದ ಸೃಜಿಸಲಾದ ಈ ಎಲ್ಲಾ ಹೊಸ ಅಧಿಕಾರಿ ವೃಂದಗಳಿಗೆ ಸಾಕಷ್ಟು ತರಬೇತಿ ನೀಡಲಾಗುವುದೇ? ಯೋಜನೆ ಮತ್ತು ಅಭಿವೃದ್ಧಿಯನ್ನು ಅದರಲ್ಲೂ ವಿಶೇಷವಾಗಿ ಭಾರತ ನೇಮಕ ಸಮಾಜದ ಕಾರ್ಯಚಟುವಟಿಕೆಗಳನ್ನು ಹೇಗೆ ನಿರ್ವಹಿಸಲಾಗಿದೆ ಎಂಬುದನ್ನು ನಾವು ನೋಡಿದ್ದೇವೆ; ಈ ರಾಷ್ಟ್ರದಲ್ಲಿ ಸಮುದಾಯ ಯೋಜನೆಗಳಿಗೆ ಯಾವ ಗತಿ ಉಂಟಾಯಿತೆಂಬುದನ್ನು ಇತ್ತೀಚಿಗಷ್ಟೇ ನೋಡಿದ್ದೇವೆ. ಈ ಮಾತನ್ನು ಹೇಳಬೇಕಾದರೆ ನನ್ನ ಹೃದಯ ಕಿತ್ತು ಬರುತ್ತದೆ, ಆದರೆ ಈ ಸಂದರ್ಭದಲ್ಲಿ ನಾನಿದನ್ನು ಹೇಳಲೇಬೇಕಾಗಿದೆ. ನನ್ನ ಸನ್ಮಾನ್ಯ ಮಿತ್ರರು, ಅದರಲ್ಲಿಯೂ, ನನ್ನ ಎಡಗಡೆ ಕುಳಿತಿರುವವರಿಗೆ ಅಭ್ಯಾಸವಾಗಿರುವ ಒಂದೇ ಒಂದು ಮನೋವೃತ್ತಿ - ಯೆಂದರೆ ಅವರಿಗೆ ಅದೃಷ್ಟದಿಂದ ಒದಗಿಬಂದಿರುವ ಅಧಿಕಾರಕ್ಕೆ ಅಂಟಿಕೊಂಡಿರುವುದು. ಆದರೆ ಈ ಒಂದು ಮುಖ್ಯ ಸಮಸ್ಯೆಗೆ ನಾನು ಕೊಡಬೇಕೆಂದಿರುವಂಥ ಸಮರ್ಪಣಾ ಭಾವದ ಜೊತೆಗೆ ಮುನ್ನಡೆಯಲು ಇಚ್ಛಿಸುತ್ತೇನೆ. ಸಮುದಾಯ ಯೋಜನೆಗಳು ಈ ರಾಷ್ಟ್ರದಲ್ಲಿ ಸಂಪೂರ್ಣವಾಗಿ ಬಿದ್ದುಹೋದ ರೀತಿಯನ್ನು ನಾವು ನೋಡಿದ್ದೇವೆ. ಸದನದ ನಾಯಕರು ದೆಹಲಿಯಲ್ಲಿ ಏನನ್ನು ನಿರ್ವಹಿಸಿದರೋ ಅದನ್ನು ಹೊರತುಪಡಿಸಿ, ಇಲ್ಲಿ ರಸ್ತೆ ನಿರ್ಮಾಣ ವ್ಯವಹಾರದ ಗತಿ ಏನಾಯಿತು?

ಈ ಸದನದ ನಾಯಕರಿಗೆ ಒಂದು ಮುಖ್ಯ ಅಂಶವನ್ನು ತಿಳಿಸಬೇಕಾಗಿದೆ. ಅದೇನೆಂದರೆ ಈ ರಾಷ್ಟ್ರದ ಎಲ್ಲ ಜನರಿಂದ ಅದರಲ್ಲಿಯೂ ಅವರ ಪಕ್ಷಕ್ಕೆ ಸೇರದ ಜನತೆಯಿಂದ ದೊರೆಯುವ ಸಹಕಾರವನ್ನು ಪಡೆಯಲು ಅವರು ಪ್ರಯತ್ನಿಸಬೇಕು. ಆದರೆ ಇದುವರೆಗೂ ಅಂಥ ಪ್ರಯತ್ನ ಮಾಡದಿರುವುದು ದುಃಖಕರ ಸಂಗತಿ. ಕಾಂಗ್ರೆಸ್ ಪಕ್ಷದ ಅಧ್ಯಕ್ಷರಿಗಿಂತಲೂ ಯೋಜನೆ ಮತ್ತು ಅಭಿವೃದ್ಧಿ ನಿರ್ದೇಶಕತ್ವದ ನಿಯಂತ್ರಣ ಎಂದು ನಾವೇನು ಕರೆಯಬಹುದೋ ಆ ಜವಾಬ್ದಾರಿಯನ್ನು  ಅವರು ವಹಿಸಿಕೊಂಡಿದ್ದಿದ್ದರೆ ನಾನು ಸ್ವಾಗತ ಮಾಡುತ್ತಿದ್ದೆ. ಅದು ಪಕ್ಷಾತೀತವಾದ ಕಾರ್ಯ. ಈ ರಾಷ್ಟ್ರ ಮುನ್ನಡೆಯಬೇಕು. ಸಣ್ಣ ಕಾರ್ಯವಾದರೂ ಸರಿಯೇ ಅದನ್ನು ನಿಭಾಯಿಸಬಲ್ಲ ಪ್ರತಿಯೊಬ್ಬರನ್ನೂ ಸಜ್ಜುಗೊಳಿಸಬೇಕು. ಇಂಥ ಪ್ರಯತ್ನವನ್ನು ಮಾಡುತ್ತಿಲ್ಲವೆಂಬುದನ್ನು ವಿಷಾದದಿಂದ ಹೇಳಬೇಕಾಗಿದೆ. ಈ ಮಾತನ್ನು ನಿರ್ಭಯದಿಂದ ಹೇಳುತ್ತಿದ್ದೇನೆ. ಈ ಸದನದ ನಾಯಕರು ಹಾಗೂ ಅವರ ಮಟ್ಟದ ಜನರು ಕ್ರಿಯಾಶೀಲತೆಯನ್ನು ಕುರಿತಂತೆ ಹೇಳಿರುವ ಹೇಳಿಕೆಗಳು ಈ ಸದನದ ನಡವಳಿಕೆಗಳ ಅಧಿಕೃತ ದಾಖಲೆಗಳಲ್ಲಿ ಮಾತ್ರ ಉಳಿದಿವೆ. ಅವುಗಳನ್ನು ಅಕ್ಷರಶಃ ಕಾರ್ಯರೂಪಕ್ಕೆ ತರಬೇಕು. ಪಕ್ಷ ರಾಜಕೀಯವನ್ನು ಬದಿಗೊತ್ತಿ ಸಮಾಜದ ಪ್ರತಿಯೊಂದು ವರ್ಗವನ್ನು ವಿಶ್ವಾಸಕ್ಕೆ ತೆಗೆದುಕೊಂಡಾಗ ಮಾತ್ರ ಈ ರಾಷ್ಟ್ರ ಮುನ್ನಡೆಯುತ್ತದೆ. ಇಲ್ಲದಿದ್ದರೆ, ಅಗತ್ಯ ಚಾಲನೆಯನ್ನು ನೀಡಬಲ್ಲ

ಶ್ರೀ ಕಾರ್ಯಪ್ಪನವರಂಥ ವ್ಯಕ್ತಿಯನ್ನಾಗಲೀ ಅಥವಾ ಬೇರೆ ಯಾವ ವ್ಯಕ್ತಿಯನ್ನಾಗಲೀ ನೇಮಿಸಬೇಕು. ಯೋಜನೆಯ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವ ಪೂರ್ಣಾವಧಿಯ ಕಾರ್ಯ ಇದು. ನಾನು ಕಾರ್ಯಪ್ಪನವರ ಪ್ರದೇಶದವನೇನೂ ಅಲ್ಲ. ನಾವಿಬ್ಬರೂ ಪರಸ್ಪರ 1400 ಮೈಲಿಗಳ ಅಂತರದಲ್ಲಿದ್ದೇವೆ. ಈ ಯೋಜನೆಗಳು ಸಫಲವಾಗಬೇಕೆಂಬುದೇ ನನ್ನ ಮುಖ್ಯ ಉದ್ದೇಶ. ಆದರೆ, ವಸ್ತು ಸ್ಥಿತಿಯನ್ನು ನೋಡಿದಾಗ ಸಫಲವಾಗುವಂಥ ಯಾವುದೇ ಅಂಶಗಳು ನನಗೆ ಗೋಚರಿಸುತ್ತಿಲ್ಲ. ಅಂದರೆ, ನನ್ನ ಸ್ನೇಹಿತರಾದ ಸದನದ ನಾಯಕರು ಈ ದಿನ ಮಧ್ಯಾಹ್ನ ತಮ್ಮ ಭಾಷಣದಲ್ಲಿ ಪ್ರತಿಬಿಂಬಿಸಿದ ಮಟ್ಟದಲ್ಲಿ ಸಾರ್ವಜನಿಕ ಸಹಕಾರ ದೊರೆಯುವುದಿಲ್ಲ. ಈಗಾಗಲೇ ಈ ಯೋಜನೆಯನ್ನು ಕಾರ್ಯಾರಂಭಗೊಳಿಸಿರುವುದರಿಂದ ಕಳೆದುಹೋದ ನೆಲೆಯನ್ನು ಪುನಃ ಗಳಿಸಲು ಪ್ರಯತ್ನಪಟ್ಟರೆ ಒಂದು ರೀತಿಯ ಅಖಂಡ ರಾಷ್ಟ್ರೀಯ ದೃಷ್ಟಿಕೋನವನ್ನು ಮೂಡಿಸಲು ಸಾಧ್ಯವಾಗುತ್ತದೆಂದು. ನನ್ನ ನಂಬಿಕೆ. ಇಲ್ಲದಿದ್ದಲ್ಲಿ, ಈ ಎಲ್ಲಾ 2068 ಕೋಟಿ ರೂಪಾಯಿಗಳು ಸೋರಿಹೋಗಿ, ಸ್ವಾತಂತ್ರ್ಯದ ಹೆಸರಿನಲ್ಲಿ ಅದರಲ್ಲಿಯೂ ವಿಶೇಷವಾಗಿ ಚುನಾವಣೆಗಳ ನಂತರ, ಅಧಿಕಾರದ ಗದ್ದುಗೆ ಹಿಡಿದ ಕೆಲವೇ ಕೆಲವು ವ್ಯಕ್ತಿಗಳ ಜೇಬುಗಳು ತುಂಬುತ್ತವೆಂದು ಹೇಳಲು ಇಚ್ಛಿಸುತ್ತೇನೆ.

## 3. ಆರ್ಥಿಕ ಸಮಸ್ಯೆಗಳು ಆಹಾರ ಪರಿಸ್ಥಿತಿ*

ಮಾನ್ಯ ಆಹಾರ ಸಚಿವರು ಕೆಲವು ವಾರಗಳ ಹಿಂದೆ ನೀಡಿದ ಗಮನಾರ್ಹ ಸರಣೀ ಹೇಳಿಕೆಗಳ ಪರಿಣಾಮವಾಗಿ ಉಂಟಾದ ಸಾರ್ವಜನಿಕ ಶಂಕೆಗಳನ್ನು ನಿವಾರಿಸುವ ನಿಟ್ಟಿನಲ್ಲಿ ಈ ಚರ್ಚೆ ನಡೆಯುತ್ತಿರುವುದು ನನಗೆ ಸಂತೋಷವನ್ನುಂಟು ಮಾಡಿದೆ.

ಇಂದಿನ ಹಾಗೂ ಮುಂದಿನ ನಿಯಂತ್ರಣಗಳ ಅದರಲ್ಲಿಯೂ ವಿಶೇಷವಾಗಿ ಆಹಾರ ನಿಯಂತ್ರಣಗಳ ಸಂಬಂಧದಲ್ಲಿ ರಾಷ್ಟ್ರದ ವಿವಿಧ ಭಾಗಗಳಲ್ಲಿ ಮೂಡಿರುವ ಶಂಕೆಗಳನ್ನು ಶಮನಗೊಳಿಸಲು ಈ ಚರ್ಚೆ ಕಾರಣವಾಗಿದೆ. ಈ ಮಧ್ಯೆ, ಮಾನ್ಯ ಆಹಾರ ಸಚಿವರು ನೀಡಿರುವ ಹೇಳಿಕೆ ಹಾಗೂ ಅದಕ್ಕೆ ಪೂರಕವಾಗಿ ಮಾನ್ಯ ಪ್ರಧಾನಮಂತ್ರಿ ಪಂಡಿತ್ ಜವಾಹರಲಾಲ್ ನೆಹರೂರವರು ನೀಡಿರುವ ಸ್ಪಷ್ಟೀಕರಣಗಳಿಂದಾಗಿ ಎರಡು ಅಥವಾ ಮೂರು ಬಹುಮುಖ್ಯ ವಾಸ್ತವ ಸಂಗತಿಗಳು ಉದ್ಭವಿಸಿವೆ ಎಂದು ನನಗನಿಸುತ್ತದೆ.

ಮೊದಲನೆಯದೆಂದರೆ, ರಾಜ್ಯ ಸರ್ಕಾರಗಳು ತಮಗೆ ಬೇಕಾದ ಕಡೆ ಹಾಗೂ ತಮಗೆ ಬೇಕೆನಿಸಿದ ಯಾವುದೇ ಆಹಾರ ಪದಾರ್ಥಗಳನ್ನು ಖರೀದಿಸುವುದು, ಎರಡನೆಯದೆಂದರೆ, ಪ್ರತಿ ರಾಜ್ಯದ ಎಲ್ಲೆಯೊಳಗೇ ಆಹಾರಧಾನ್ಯಗಳನ್ನು ಸಂಗ್ರಹಿಸಬೇಕೆಂಬ ಸಮಸ್ಯೆ ಮುಂದುವರಿದಿರುವುದು, ಮೂರನೆಯದೆಂದರೆ ಮಾನ್ಯ ಪ್ರಧಾನ ಮಂತ್ರಿಗಳು ದವಸ ಧಾನ್ಯಗಳ ಸಾಗಣೆಗಳಲ್ಲಿ ಸ್ವಲ್ಪಮಟ್ಟಿನ ಹೊಂದಾಣಿಕೆ ಇರುವುದಾಗಿ ಹೇಳಿದ್ದರೂ, ಅಕ್ಕಿ ಅಥವಾ ಗೋಧಿಯಲ್ಲಿ ಯಾವುದೇ ಬದಲಾವಣೆ ಇಲ್ಲದಿರುವುದು.

ಮಾನ್ಯ ಪ್ರಧಾನ ಮಂತ್ರಿಗಳು ಹಾಗೂ ಆಹಾರ ಮಂತ್ರಿಗಳ ಎರಡು ಹೇಳಿಕೆಗಳಿಂದ ಉದ್ಭವಿಸಿರುವ ಈ ಮೂರು ವಾಸ್ತವ ಸಂಗತಿಗಳು, ಆಹಾರ ಸಮಸ್ಯೆಯನ್ನು ಸಂಪೂರ್ಣವಾಗಿ ಬಗೆಹರಿಸುತ್ತವೆ ಎಂಬುದರ ಬಗ್ಗೆ ನನಗಂತೂ ತೃಪ್ತಿ ಇಲ್ಲ. ಏಕೆಂದರೆ, ಸಮಸ್ಯೆಯ ಮೂರು ಅಂಶಗಳ ಮೇಲೆ ಪ್ರಾಥಮಿಕವಾದ ವಾಸ್ತವಿಕ ಮಾಹಿತಿಯ ಅಗತ್ಯತೆ ಇಂದು ತೀವ್ರತರವಾಗಿದ್ದು, ಮಾನ್ಯ ಆಹಾರ ಸಚಿವರು ಈ ಚರ್ಚೆಗೆ ಉತ್ತರ ನೀಡುವಾಗ ಸ್ಪಷ್ಟಪಡಿಸುವರೆಂದು ಭಾವಿಸುತ್ತೇನೆ. ಮುಂದಿನ ವರ್ಷ ನಾವು ಆಮದು ಮಾಡಿಕೊಳ್ಳುತ್ತೇವೆಯೋ? ಅಥವಾ ಮುಂದಿನ ವರ್ಷ ನಾವು ಆಮದು ಮಾಡಿಕೊಳ್ಳುವುದಿಲ್ಲವೊ?

ಆಮದು ಮಾಡಿಕೊಳ್ಳುವುದಿದ್ದರೆ ಯಾವ ಮಟ್ಟದವರೆಗೆ? ಹಾಗಿದ್ದಲ್ಲಿ, 1951ರ ನಂತರ ಯಾವುದೇ ರೀತಿಯ ಆಹಾರದ ಆಮದು ಇಲ್ಲವೆಂದು ಕೆಲ ಸಮಯದ ಹಿಂದೆ ಘೋಷಿಸಿದ್ದ ಮಾನ್ಯ ಪ್ರಧಾನ ಮಂತ್ರಿಗಳ ಘೋಷಣೆ ಏನಾಯಿತು?

---

ಆಹಾರ ಪರಿಸ್ಥಿತಿಯ ಬಗ್ಗೆ ಸರ್ಕಾರದ ನಿಲುವಳಿ ಸೂಚನೆಯ ಮೇಲಿನ ಚರ್ಚೆಯಿಂದ - ಲೋಕಸಭಾ - 17-18 ನವೆಂಬರ್ 1952, ಸಿಸಿ 711,720, 748 - 53,843

ಯೋಜನಾ ಆಯೋಗದ ವರದಿಯ ಪ್ರಕಾರ, ನಾವು ಆಹಾರದಲ್ಲಿ ಸ್ವಾವಲಂಬಿಗಳಾಗುವುದು ಮೂರೂವರೆ ವರ್ಷಗಳ ನಂತರವೇ. ಸರ್ಕಾರದ ಪರಿಷ್ಕೃತ ಆಹಾರ ನೀತಿಯನ್ನು ವಿಶೇಷವಾಗಿ ದಕ್ಷಿಣ ಭಾರತದಲ್ಲಿ ನಿರ್ವಹಿಸಿಕೊಂಡು ಬರಬೇಕಾದಲ್ಲಿ ಆಹಾರ ಆಮದುಗಳ ಮಟ್ಟವನ್ನು ಅದರಲ್ಲಿಯೂ ಗೋಧಿಯೇತರ ಆಹಾರವನ್ನು ಯಾವ ರೀತಿಯಲ್ಲಿ ನಿಯಂತ್ರಿಸಲಾಗುವುದು?

ಈ ವಿಷಯದ ಮೇಲಿನ ಭಾರತ ಸರ್ಕಾರದ ಮೂರು ಮುಖ್ಯ ಉದ್ದೇಶಗಳನ್ನು ಮಾನ್ಯ ಆಹಾರ ಸಚಿವರು ತಮ್ಮ ಹೇಳಿಕೆಯಲ್ಲಿ ಹೇಳಿದರು. ಅವುಗಳು, ಅಧಿಕ ಆಹಾರದ ಉತ್ಪಾದನೆ, ನ್ಯಾಯಯುತ ವಿತರಣೆ ಮತ್ತು ಯಾವುದೇ ನಿರ್ದಿಷ್ಟ ರಾಜ್ಯ ಈ ನಿಟ್ಟಿನಲ್ಲಿ ತೊಂದರೆಯನ್ನು ಎದುರಿಸುತ್ತಿದ್ದರೆ ಭಾರತ ಸರ್ಕಾರ ಅದಕ್ಕೆ ಸಹಾಯಹಸ್ತ ನೀಡುವುದು, ಈ ರಾಷ್ಟ್ರದ ಪ್ರಯೋಜನಕ್ಕಾಗಿಯೇ ಈ ಅಧಿಕ ಆಹಾರ ಉತ್ಪಾದನಾ ಆಂದೋಲನ ಎನ್ನುವುದನ್ನು ತೋರಿಸುವಲ್ಲಿ ಮಾನ್ಯ ಆಹಾರ ಸಚಿವರು ಅತಿ ಉತ್ಸುಕರಾಗಿದ್ದಾರೆ.

ಅವರ ವಾದವನ್ನು ಅವರೇ ನೀಡಿರುವ ಅಂಕಿ ಅಂಶಗಳು ಸಮರ್ಥಿಸುತ್ತಿಲ್ಲವೆಂದು ಹೇಳಲು ನನಗೆ ಬೇಸರವಾಗುತ್ತದೆ. ಮದ್ರಾಸ್ ರಾಜ್ಯದಲ್ಲಿ ಆಹಾರ ಬೆಳೆಯುವಂಥ ಪ್ರದೇಶದಲ್ಲಿ ಸುಮಾರು 10 ಲಕ್ಷ ಎಕರೆಯಷ್ಟು ಜಮೀನು ಕಡಿಮೆಯಾಗಿದೆಯೆಂದು ತೋರಿಸಲಾಗಿದೆ. ರಾಷ್ಟ್ರದ ನನ್ನ ಭಾಗದಲ್ಲಿ ಅಂದರೆ ಮದ್ರಾಸ್ ರಾಜ್ಯದಲ್ಲಿ ಅಧಿಕ ಉತ್ಪಾದನಾ ಆಂದೋಲನದಂಥ ಕಾರ್ಯಕ್ರಮ ಜಾರಿಯಲ್ಲಿರುವುದನ್ನು ಯೋಜನಾ ಆಯೋಗಕ್ಕೆ ತೋರಿಸಿಕೊಡುವಂಥ ಅವಕಾಶ ನನಗೆ ಕಳೆದ ತಿಂಗಳು ಒದಗಿಬಂದಿತು. ಶಾಸನಬದ್ಧ ಸಮಿತಿಯಾದ ಜಿಲ್ಲಾ ಆಹಾರ ಸಮಿತಿಯ ಸಭೆಯಲ್ಲಿ ಪದನಿಮಿತ್ತ ಸದಸ್ಯನೆಂದು ಉಪಸ್ಥಿತನಿರುವಂತೆ ನನ್ನನ್ನು ವಿನಂತಿಸಿ ಬರೆದ ಆಹ್ವಾನದ ಸುತ್ತೋಲೆಯನ್ನು ಯೋಜನಾ ಆಯೋಗಕ್ಕೆ ಕಳೆದ ತಿಂಗಳು ತೋರಿಸಿದ್ದೇನೆ.

ತದನಂತರ ಆ ಸಭೆಯ ಕಾರ್ಯಸೂಚಿಇಲ್ಲದಿದ್ದುದನ್ನೂ ಕೂಡ ತಿಳಿಸಿದ್ದೆ. ಅಧಿಕ ಆಹಾರ ಉತ್ಪಾದನಾ ಚಳುವಳಿ ಈ ರಾಷ್ಟ್ರದಲ್ಲಿ ಕಾರ್ಯಾರಂಭ ಮಾಡಿ 10 ವರ್ಷಗಳು ಕಳೆದ ನಂತರ ಹಾಗೂ ಚುನಾವಣೆಗಳ ನಂತರ ನಡೆದ ಈ ಪ್ರಥಮ ಸಭೆಗೆ ಕಾರ್ಯಸೂಚಿಯೇ ಇರಲಿಲ್ಲ. ಇದರಿಂದಾಗಿ ನಾವು ಈ ರಾಷ್ಟ್ರದಲ್ಲಿ ಅಧಿಕ ಆಹಾರ ಉತ್ಪಾದನಾ ಚಳುವಳಿಯನ್ನು ಗಂಭೀರವಾಗಿ ಪರಿಗಣಿಸುವ ಸಮಯ ಇನ್ನೂ ಬಂದಿಲ್ಲ ಎಂಬುದನ್ನು ನಾನೇ ಮನದಟ್ಟು ಮಾಡಿಕೊಳ್ಳಬೇಕಾಯಿತು. ಒಂದು ರಾಜ್ಯದಲ್ಲಿ 10 ಲಕ್ಷ ಎಕರೆ ವಿಸ್ತೀರ್ಣದಷ್ಟು ಆಹಾರ ಬೆಳೆಯ ಕೃಷಿ ಕಡಿಮೆಯಾದ ವಾಸ್ತವ ಸಂಗತಿ ಕೃಷಿ ಅರ್ಥ ವ್ಯವಸ್ಥೆ ನಮ್ಮ ಕೈಮೀರಿ ಹೇಗೆ ಹೋಗುತ್ತಿದೆ ಎಂಬುದರ ಶೋಚನೀಯ ಪ್ರತೀಕವಾಗಿದೆ.

ವಾಣಿಜ್ಯ ಬೆಳೆಗಳ ಈ ಹಾವಳಿಯನ್ನು ನಿಲ್ಲಿಸಲು ಏನಾದರೂ ಕ್ರಮ ತೆಗೆದುಕೊಳ್ಳಬೇಕೆಂದು ಕಳೆದ ಐದಾರು ವರ್ಷಗಳಿಂದ ಒತ್ತಾಯಿಸುತ್ತಾ ಬಂದಿರುವ ಈ

ರಾಷ್ಟ್ರದ ಕೆಲವೇ ಕೆಲವು ವ್ಯಕ್ತಿಗಳಲ್ಲಿ ನಾನೂ ಒಬ್ಬ. ವಿಶೇಷವಾಗಿ ನನ್ನ ಸ್ವಂತ ಜಿಲ್ಲೆಗೆ ಸಂಬಂಧಿಸಿದಂತೆ ನಾನು ನನ್ನ ಜವಾಬ್ದಾರಿಯನ್ನು ಅರಿತು ಮಾತನಾಡುತ್ತಿದ್ದೇನೆ. ಅಭಾವಪೀಡಿತ ಪ್ರದೇಶಗಳ ಜಮೀನುಗಳು, ಈ ಹಿಂದೆ ರಾಷ್ಟ್ರದ ಆ ಭಾಗದ ಆಹಾರ ಉತ್ಪಾದನಾ ಜಮೀನುಗಳಾಗಿದ್ದು ಈಗ ಅಂದರೆ ಕಳೆದ ಎರಡು ಅಥವಾ ಮೂರು ವರ್ಷಗಳ ಅವಧಿಯಲ್ಲಿ ಅವುಗಳನ್ನು ಹೆಚ್ಚು ಹೆಚ್ಚು ಕಬ್ಬು, ಸೆಣಬು ಹಾಗೂ ಮತ್ತಿತರ ಬೆಳೆಗಳಾದ ತಂಬಾಕು ಇತ್ಯಾದಿಗಳನ್ನು ಬೆಳೆಯಲು ಬದಲಾಯಿಸಿಕೊಳ್ಳಲಾಗಿದೆ. ಅಭಾವವಿರುವ ಪ್ರದೇಶದಲ್ಲೇ ಆಹಾರೇತರ ಬೆಳೆಗಳನ್ನು ಬೆಳೆಯಲು ಪ್ರಾರಂಭಿಸಲಾಗಿದೆ. ವಾಣಿಜ್ಯ ಬೆಳೆಯ ಹಾವಳಿಯನ್ನು ನಿವಾರಿಸದಿರುವ ಬಗ್ಗೆ ಪ್ರಪ್ರಥಮವಾಗಿ ಕೇಂದ್ರ ಸರ್ಕಾರ ಹಾಗೂ ಎರಡನೆಯದಾಗಿ ರಾಜ್ಯ ಸರ್ಕಾರಗಳು ಅನುಸರಿಸುತ್ತಿರುವ ರೀತಿಯನ್ನು ನಾನು ತೀರಾ ಗಂಭೀರವಾಗಿ ಪರಿಗಣಿಸಬೇಕಾಗಿದೆ. ಹೆಚ್ಚುತ್ತಿರುವ ವಾಣಿಜ್ಯ ಬೆಳೆಗಳ ಹಾವಳಿಯನ್ನು ನಿಯಂತ್ರಿಸದಿದ್ದಲ್ಲಿ ಆಹಾರ ಉತ್ಪಾದನೆಯಲ್ಲಿ ಸ್ವಾವಲಂಬನೆಯನ್ನು ಸಾಧಿಸುವ ಯೋಜನೆಗೆ ಅರ್ಥವೇ ಇರುವುದಿಲ್ಲ. ಇದೊಂದು ರಾಜಕೀಯ ನೈತಿಕತೆಯನ್ನು ಒಳಗೊಂಡಿರುವ ವಿಚಾರವೇ ಎಂಬುದನ್ನು ನನ್ನ ಬಲಭಾಗದ ಕೆಲವು ಸ್ನೇಹಿತರು, ನನಗೆ ಮನದಟ್ಟು ಮಾಡುತ್ತಾರೆಂದು ನಂಬಿದ್ದೇನೆ. ಈ ಹೇಳಿಕೆಯ ಹಿಂದೆ ಯಾವ ಒಂದು ನಿರ್ದಿಷ್ಟ ನೈತಿಕತೆಯಾಗಲೀ ಅಥವಾ ಸಿದ್ಧಾಂತವಾಗಲೀ ಇಲ್ಲ ಎಂದು ನಿಸ್ಸಂಕೋಚವಾಗಿ ಹೇಳುತ್ತೇನೆ. ಇದೊಂದು ವಾಸ್ತವ ಸಂಗತಿ ಹಾಗೂ ರಾಷ್ಟ್ರದ ಅಭಿವೃದ್ಧಿಯಲ್ಲಿ ಒಂದು ಅತೀ ಮಹತ್ವವಾದ ವಿಚಾರ. ಈ ರಾಷ್ಟ್ರದಲ್ಲಿನ ವಾಣಿಜ್ಯ ಬೆಳೆ ಕೃಷಿಯನ್ನು ಮೊಟಕುಗೊಳಿಸಲು ಕೂಡಲೇ ಏನಾದರೂ ಕ್ರಮ ತೆಗೆದುಕೊಳ್ಳದಿದ್ದಲ್ಲಿ ಇದುವರೆಗೆ ಕೈಗೊಂಡಿರುವ ಹಾಗೂ ಪ್ರತಿಬಿಂಬಿಸಿದ ಎಲ್ಲಾ ಯೋಜನೆ ಮತ್ತು ಅಭಿವೃದ್ಧಿ ಕಾರ್ಯಕ್ರಮಗಳು ನಮ್ಮ ಜನತೆಗೆ ಯಾವ ರೀತಿಯಿಂದಲೂ ಉಪಯೋಗವಾಗಲಾರವು ಎನ್ನುವ ಆತಂಕ ನನಗೆ ಉಂಟಾಗಿದೆ.

ನನ್ನ ಸನ್ಮಾನ್ಯ ಮಿತ್ರರಾದ ಆಹಾರ ಸಚಿವರು ಈ ಬೆಳಿಗ್ಗೆ ನೀಡಿದ ಹೇಳಿಕೆಯನ್ನು ಕೇಳಿದ ನನಗೆ ಒಂದು ರೀತಿಯ ಆಶ್ಚರ್ಯ ಉಂಟಾಯಿತು. ಅವರು ಹೇಳುತ್ತಾರೆ: ಈ ವರ್ಷ ಜೂನ್ ತಿಂಗಳಲ್ಲಿ ಮದ್ರಾಸ್ ರಾಜ್ಯದಲ್ಲಿ ಆಹಾರಧಾನ್ಯಗಳ ಮೇಲಿನ ನಿಯಂತ್ರಣವನ್ನು ತೆಗೆದ ನಂತರ ಬೆಲೆಗಳಲ್ಲಿ ಇಳಿಮುಖವಾಯಿತು ಎಂದು. ಆ ವಿಷಯದ ಮೇಲೆ ಒಂದಿಬ್ಬರು ಇತರ ನನ್ನ ಸ್ನೇಹಿತರು, ವಿಶೇಷವಾಗಿ ಸರದಾರ್ ಲಾಲ್‌ಸಿಂಗ್ ಅವರು ಸವಿಸ್ತಾರವಾಗಿ ಪ್ರಸ್ತಾಪಿಸಿದರು. ಹಿಂದಿನ ರಾತ್ರಿಯಷ್ಟೇ ನಮಗೆ ಕಳುಹಿಸಿಕೊಡಲಾದ, ಜೂನ್ ತಿಂಗಳಿಂದ ಅನ್ವಯವಾಗುವಂಥ ಬೆಲೆಗಳು ಇಲ್ಲಿವೆ. ವಿಶಾಖಪಟ್ಟಣದಲ್ಲಿ ಒಂದು ಮಣದ ಅಕ್ಕಿಯ ಬೆಲೆ ರೂ. 17-4-6. ಈ ದಿನ ಚಾಲ್ತಿಯಲ್ಲಿರುವ ಬೆಲೆ ರೂ. 23. ಏಲೂರಿನಲ್ಲಿ (ಆಂಧ್ರ) ರೂ.16-6-0 ಗಳಿಂದ, ಅಕ್ಟೋಬರ್ ತಿಂಗಳ ಕೊನೆ ವಾರದಲ್ಲಿದ್ದಂಥ ಇತ್ತೀಚಿನ ಬೆಲೆ ರೂ. 23ಕ್ಕೆ ಏರಿತು. ಒಂದು ಅಥವಾ ಎರಡು ಪ್ರದೇಶಗಳನ್ನು ಹೊರತುಪಡಿಸಿ ನಾನು ಪ್ರಸ್ತುತ ವಸ್ತುಸ್ಥಿತಿಯನ್ನು ಲೆಕ್ಕ ಹಾಕಿದ್ದು, ಬೆಲೆಗಳು ಹೆಚ್ಚಾಗಿರುತ್ತವೆ. ಈ ದಿನದ ಚಾಲ್ತಿ

ಬೆಲೆಯನ್ನು ಹಿಂದಿನ ವರ್ಷದ ಇದೇ ದಿನದ ಕಾಳಸಂತೆ ಚಾಲ್ತಿಯ ಬೆಲೆಯೊಂದಿಗೆ ಹೋಲಿಸುವುದು ಅವುಗಳಲ್ಲಿ ಅಡಕವಾಗಿರುವ ಪರಿಣಾಮಗಳ ದೃಷ್ಟಿಯಿಂದ ಅತ್ಯಂತ ದುರದೃಷ್ಟಕರವೆಂದು ನಾನು ಪರಿಗಣಿಸುತ್ತೇನೆ. ಏಕೆಂದರೆ ನಿಯಂತ್ರಣಗಳು ಜಾರಿಯಲ್ಲಿದ್ದಾಗ, ಬೆಲೆಗಳು ದುಬಾರಿಯಿದ್ದಾಗಲೂ, ನಗರ ಮತ್ತು ಗ್ರಾಮಾಂತರ ಪ್ರದೇಶಗಳ ಎಲ್ಲಾ ರೇಷನ್‌ಕಾರ್ಡುದಾರರುಗಳಿಗೆ ಖಾತ್ರಿಯಾದ ಕನಿಷ್ಠ ಆಹಾರಧಾನ್ಯ ದೊರಕುತ್ತಿತ್ತು. ಪಡಿತರ ಆಹಾರಧಾನ್ಯ ಕೊಟ್ಟರೂ ಜನರು ಸರಿದೂಗಿಸಿಕೊಳ್ಳಲು ಕಾಳಸಂತೆಯಲ್ಲಿ ಖರೀದಿ ಮಾಡಿರುವುದನ್ನು ನಾನು ತಳ್ಳಿಹಾಕುತ್ತಿಲ್ಲ. ಆದರೆ, ನನ್ನ ಸ್ನೇಹಿತರ ಗಮನಕ್ಕೆ ಇಂದು ಬೆಳಿಗ್ಗೆ ಪ್ರಾಯಶಃ ಬಾರದಿರುವ ಮೂಲಭೂತ ಅಂಶವೆಂದರೆ, ನಿಯಂತ್ರಿತ ಬೆಲೆಯಲ್ಲಿ ಜನತೆಗೆ ಖಾತ್ರಿಯಾದ ಕನಿಷ್ಠ ಆಹಾರದ ಸರಬರಾಜಿನಿಂದಾಗಿ ಕಳೆದ ವರ್ಷದಲ್ಲಿದ್ದ ರೂ. 50 ಗಳ ಬೆಲೆ ಇಂದು ಕೇವಲ 23 ರೂ.ಗಳು ಎಂಬ ಹೋಲಿಕೆ ಒಂದು ನ್ಯಾಯುತ ಹೋಲಿಕೆಯೇ ಅಲ್ಲ ಎಂಬುದು.

ವ್ಯವಸ್ಥಿತವಾಗಿ ಮತ್ತು ಸಾಕಷ್ಟು ಪ್ರಮಾಣದಲ್ಲಿ ಪಡಿತರ ಆಹಾರವನ್ನು ಒದಗಿಸದೇ ಕೇವಲ ಬೆಲೆಗಳನ್ನು ನಿಗದಿಪಡಿಸುವುದರಿಂದ ಸಮಸ್ಯೆ ಪರಿಹಾರವಾಗುವುದಿಲ್ಲವೆಂದು ನಾನು ನಂಬಿದ್ದೇನೆ. ಬೆಲೆಗಳನ್ನು ನಿಯಂತ್ರಿಸಲು ಅದರಲ್ಲಿಯೂ ಪರಿಣಾಮಕಾರಿಯಾದ ಬೆಲೆಗಳನ್ನು ನಿಯಂತ್ರಿಸಲು ಒಂದು ರೀತಿಯ ನಿಯಂತ್ರಣ ವ್ಯವಸ್ಥೆ ಇರಬೇಕು ಹಾಗೂ ಅಂಥ ನಿಯಂತ್ರಣವನ್ನು, ಸಂಪೂರ್ಣವಾಗಿ, ಪಡಿತರ ಕ್ರಮದ ಬಗ್ಗೆ ಮತ್ತು ಪಡಿತರವನ್ನು ಸುವ್ಯವಸ್ಥಿತವಾಗಿ ಜಾರಿಗೆ ತರುವ ರೀತಿಯ ಬಗ್ಗೆ ಸರಿಹೊಂದುವಂತೆ ಮಾಡಬೇಕು. ಯಾವುದೇ ಒಂದು ಸಿದ್ಧಾಂತವನ್ನು ಪ್ರತಿಪಾದಿಸುವುದಕ್ಕಾಗಿ ನಾನು ಆಹಾರ ನಿಯಂತ್ರಣ ಅಥವಾ ಪಡಿತರದ ಬಗ್ಗೆ ಒ[illegible] ಕೊಡುತ್ತಿಲ್ಲ. ಇದುವರೆಗೆ ನಿಯಂತ್ರಣಗಳನ್ನು ಅಸಮರ್ಪಕವಾಗಿ ನಿರ್ವಹಿಸಿದ ಕಾರಣ ಉಂಟಾದ ನಿಂದನೆಗಳು, ವೈಯಕ್ತಿಕ ಹಿತಾಸಕ್ತಿಗಳು, ನ್ಯೂನತೆಗಳು ಇತ್ಯಾದಿಗಳ ಬಗ್ಗೆ ನಮಗೆ ತಿಳಿದಿಲ್ಲವೆಂದಲ್ಲ. ಆದರೆ, ಒಂದು ಹೇಳಿಕೆಯನ್ನು ನಾನಿಲ್ಲಿ ನೀಡಲೇಬೇಕೆಂದು ನನಗನ್ನಿಸುತ್ತದೆ. ಏನೆಂದರೆ, ನಾನೇ ಕಣ್ಣಾರೆ ಕಂಡಂತೆ ಆಂಧ್ರದ ಗ್ರಾಮಾಂತರ ಪ್ರದೇಶಗಳಲ್ಲಿ ಜನರು, ವಿಶೇಷವಾಗಿ ಕೃಷಿ ಜಮೀನುದಾರರಲ್ಲದವರು, ಉದಾಹರಣೆಗೆ ಕೃಷಿ ಕಾರ್ಮಿಕರು ಕಳೆದ ಮೂರು ವರ್ಷಗಳಲ್ಲಿ ಯಾವುದೇ ಬೆಲೆ ಇದ್ದರೂ, ಖರೀದಿಸಲು ಅಸಹಾಯಕರಾಗಿದ್ದಾರೆ. ಚಾಲ್ತಿಯಲ್ಲಿರುವ ಬೆಲೆಗಳು ತೀರಾ ಹೆಚ್ಚಾಗಿರುವುದರಿಂದ ಅದು ಕಾನೂನುಬದ್ಧ ಪಡಿತರವಿರಲಿ, ಅಥವಾ ಕಾನೂನು ರಹಿತಪಡಿತರವಿರಲಿ ನಗರ ಪ್ರದೇಶವಿರಲಿ ಅಥವಾ ಗ್ರಾಮಾಂತರ ಪ್ರದೇಶವಿರಲಿ, ಎಲ್ಲಾ ಕಡೆಯೂ ಸಮಸ್ಯೆ ತೀವ್ರ ಸ್ವರೂಪದ್ದಾಗಿದೆ. ಜನತೆಯ ಕೈಗೆಟಕುವಂಥ ಅತಿ ಕಡಿಮೆ ಹಾಗೂ ಸಮಾಧಾನ ತರುವಂಥ ದರದಲ್ಲಿ ಆಹಾರವನ್ನು ಒದಗಿಸಬೇಕು. ನನ್ನ ಸ್ನೇಹಿತರಾದ ಸನ್ಮಾನ್ಯ ಆಹಾರ ಸಚಿವರು, ಈ ದಿನ ಬೆಳಿಗ್ಗೆ ಪ್ರತಿಪಾದಿಸಿದ ಹಾಗೂ ಪ್ರಧಾನ ಮಂತ್ರಿಗಳು ಪುಷ್ಟೀಕರಿಸಿದ ಆಹಾರ ಯೋಜನೆಯಲ್ಲಿನ ತಿದ್ದುಪಡಿಗಳೆಂದು ಕರೆಯಲಾದ ತಿದ್ದುಪಡಿಗಳ

ಪರಿಣಾಮದಿಂದಾಗಿ ಈ ಅಂಶವನ್ನು ಕಡೆಗಣಿಸುವುದಿಲ್ಲವೆಂದು ನಾನು ನಂಬಿದ್ದೇನೆ. ಇಲ್ಲದಿದ್ದಲ್ಲಿ ನಗರ ಹಾಗೂ ಗ್ರಾಮೀಣ ಪ್ರದೇಶಗಳಲ್ಲಿನ ಅಸಂಖ್ಯಾತ ಜನರ ಹಿತಾಸಕ್ತಿಗೆ ಗುರುತರವಾದ ಕೊಡಲಿ ಪೆಟ್ಟನ್ನು ಕೊಟ್ಟಂತಾಗುತ್ತದೆ.

ನಾನು ಕೇಳಬೇಕೆಂದಿರುವ ಇನ್ನೂ ಒಂದು ಅಂಶ ಇದು : ಈ ರಾಷ್ಟ್ರದಲ್ಲಿ ಆಹಾರಧಾನ್ಯ ಸರಬರಾಜಿನ ಅಂದರೆ ಗೋಧಿ ಹಾಗೂ ಅಕ್ಕಿಯ ಕೊರತೆಯಿದೆಯೇ? ಜನಸಂಖ್ಯೆ ಹೆಚ್ಚಾಗುತ್ತಿದೆಯೇ? ಬೆಲೆಗಳಲ್ಲಿ ಹೆಚ್ಚಳ ಆಗಿದೆಯೇ ಅಥವಾ ಹೆಚ್ಚಳ ಆಗಿಲ್ಲವೆ? ಈ ಎಲ್ಲಾ ಅಂಶಗಳನ್ನು, ನಾವು ಹೇಗೆ ನಿಯಂತ್ರಿಸುತ್ತೇವೆ? ಇವೆಲ್ಲ ನಿಯಂತ್ರಣವನ್ನು ತೆಗೆದುಹಾಕುವುದರಿಂದ ಆಗುವುದಿಲ್ಲ. ನಿಯಂತ್ರಣ ತೆಗೆದುಹಾಕಿದ್ದೇವೆಂಬ ವಿವೇಚನಾ ರಹಿತ ಸಮರ್ಥನೆಯಿಂದಾಗಿ ಹೆಚ್ಚಿನ ರೀತಿಯಲ್ಲಿ ಇವು ಮಾನಸಿಕ ಆಘಾತವನ್ನುಂಟು ಮಾಡಲಿವೆ ಎಂಬ ಅಂಶವನ್ನು ತಿಳಿಸಲು ಇಚ್ಛಿಸುತ್ತೇನೆ.

ನನ್ನ ಮಟ್ಟಿಗೆ ಹೇಳುವುದಾದರೆ, ಈ ನಿಯಂತ್ರಣ ತೆಗೆದುಹಾಕಿರುವುದರ ಬಗ್ಗೆ ರಾಜಕೀಯ ನಡೆದಿದೆ. ಯಾವುದೇ ಲೋಪದೋಷ ಇರಲೇಬಾರದು. ಜನರ ಮತ್ತು ಅವರು ವಾಸಿಸುವ ಸ್ಥಳದ ಹಿತದೃಷ್ಟಿಯನ್ನಿಟ್ಟುಕೊಂಡೇ ವಲಯ ವ್ಯವಸ್ಥೆಯನ್ನು ರೂಪಿಸಲಾಗಿದೆ. ಪುನಃ ಪುನಃ ಈ ವಿಷಯ ಪ್ರಸ್ತಾಪಿಸಿ ಈ ಸದನಕ್ಕೆ ಬೇಸರವನ್ನುಂಟು ಮಾಡುವುದಿಲ್ಲ. ಉತ್ತರದಿಂದ ದಕ್ಷಿಣಕ್ಕೆ ಬಂದರೆ, ನಾನು ಉತ್ತರದಿಂದ ಬಂದವನು. ಶ್ರೀಕಾಕುಳಂ, ವಿಶಾಖಪಟ್ಟಣ ಮತ್ತು ಪೂರ್ವ ಗೋದಾವರಿಗಳು ಒಂದು ವಲಯ, ಎರಡನೆ ವಲಯ ಪಶ್ಚಿಮ ಗೋದಾವರಿ ಕೃಷ್ಣಾ. ಈ ವಲಯದಲ್ಲಿದ್ದ ಗುಂಟೂರನ್ನು ಬದಲಾಯಿಸಿ ನೆಲ್ಲೂರನ್ನು ಅದಕ್ಕೆ ಸೇರಿಸಲಾಗಿದೆ ಹಾಗೂ ಮದ್ರಾಸ್ ನಗರವನ್ನು ಸೇರಿಸಲಾಗಿದೆ. ಗುಂಟೂರನ್ನು ರಾಯಲ ಸೀಮಾದಲ್ಲಿ ಸೇರಿಸಿದೆ. ಈ ರೀತಿ ವಲಯಗಳನ್ನು ರೂಪಿಸಿರುವುದು ದುರದೃಷ್ಟಕರ ಮತ್ತು ನ್ಯಾಯಯುತವಲ್ಲ. ಹೀಗೇಕೆ ಮಾಡಲಾಗಿದೆ ಎಂಬುದನ್ನು ನಾನು ಬಲ್ಲೆ. ಗೋದಾವರಿ ಮತ್ತು ಕೃಷ್ಣಾ ಪಟ್ಟಿಯಲ್ಲಿ ಬೆಳೆಯುವ ಅಧಿಕ ಆಹಾರಧಾನ್ಯಗಳನ್ನು ಮದ್ರಾಸ್ ನಗರ ಮತ್ತು ದಕ್ಷಿಣಕ್ಕೆ ಕೊಂಡೊಯ್ಯಲು ಈ ರೀತಿ ರೂಪಿಸಲಾಗಿದೆ. ಈ ಎರಡು ತಿಂಗಳಲ್ಲಿ ಅಧಿವೇಶನಗಳ ಮಧ್ಯೆ ನಾನು ಅಲ್ಲಿಗೆ ಹೋಗಿಬಂದಿದ್ದೇನೆ. ಮದ್ರಾಸ್ ಮತ್ತು ದಕ್ಷಿಣ ಭಾರತದ ಹೋಟೆಲ್ ಮಾಲಿಕರು ಈ ಪ್ರದೇಶಗಳಿಂದ ಹೇಗೆ ಅಕ್ಕಿಯನ್ನು ಸಾಗಿಸುತ್ತಿದ್ದಾರೆ ಎಂಬುದನ್ನು ಸ್ವತಃ ಈ ಎರಡು ಜಿಲ್ಲೆಗಳಲ್ಲಿ ಪ್ರವಾಸ ಮಾಡಿ ನೋಡಿರುವ ನನಗೆ ಈ ಮಧ್ಯಾಹ್ನದಂದು ವಿವರಿಸಿ ಹೇಳಲು ಸಾಧ್ಯವಾಗುತ್ತಿಲ್ಲ. ಇಲ್ಲಿ ರಾಜಕೀಯ ನುಸುಳಿದೆ ಎಂಬುದೇ ನನ್ನ ಆಕ್ಷೇಪಣೆ. ಆಹಾರದ ವಿಷಯದಲ್ಲಿ ರಾಜಕೀಯ ಕೂಡದು. ಇದೊಂದು ಪಕ್ಷದ ವಿಷಯವಲ್ಲ. ಆಹಾರದ ವಿಷಯದಲ್ಲಿ ಯಾವುದೇ ರಾಜಕೀಯ ಮಾಡಬಾರದೆಂಬ ನನ್ನ ಸ್ನೇಹಿತರಾದ ಸನ್ಮಾನ್ಯ ಟಿ.ಎನ್. ಸಿಂಗ್‌ರವರ ವಾದವನ್ನು ನಾನು ಹೃತ್ಪೂರ್ವಕವಾಗಿ ಒಪ್ಪುತ್ತೇನೆ. ಪಕ್ಷ ರಾಜಕೀಯದಲ್ಲಿ ಅದನ್ನು ಆಟಿಕೆಯನ್ನಾಗಿ ಮಾಡಬಾರದು. ಈಗಲಾದರೂ ಭಾರತ ಸರ್ಕಾರ ಈ ಬಗ್ಗೆ ಪುನರ್‌ವಿಮರ್ಶಿಸುವುದೆಂದು ನಂಬುತ್ತೇನೆ.

ಮದ್ರಾಸ್ ರಾಜ್ಯದಿಂದ ಬಂದಿರುವ ನಾನು ಮಾನ್ಯ ಆಹಾರ ಸಚಿವರಿಗೆ ಈ ಪ್ರಶ್ನೆ ಕೇಳಲು ಇಚ್ಛಿಸುತ್ತೇನೆ: ಮದ್ರಾಸ್ ರಾಜ್ಯದಲ್ಲಿಯೇ 10 ಲಕ್ಷ ಎಕರೆಯಷ್ಟು ಆಹಾರಧಾನ್ಯ ಬೆಳೆಯುವ ಭೂಮಿ ಕಡಿಮೆ ಆಗಿರುವಾಗ ಭಾರತ ಸರ್ಕಾರ ಆಹಾರಧಾನ್ಯಗಳ ಸರಬರಾಜುಗಳನ್ನು ಮುಂದುವರಿಸಲು ಒಪ್ಪಿದ್ದಾದರೂ ಏಕೆ? ಪಂಚವಾರ್ಷಿಕ ಯೋಜನೆಯಡಿಯಲ್ಲಿ ಆಹಾರ ಸ್ವಾವಲಂಬನೆ ಆಂದೋಲನವನ್ನು ಮುಂದುವರಿಸಿಕೊಂಡು ಹೋಗಲು ಇದು ಯಾವ ರೀತಿಯಲ್ಲಿ ಭಾರತ ಸರ್ಕಾರಕ್ಕೆ ಸಹಾಯವಾಗುತ್ತದೆ? ಈ ವಿಷಯದಲ್ಲಿ ಹಲವಾರು ಪ್ರಮುಖ ಪ್ರಶ್ನೆಗಳು ಅಡಕವಾಗಿದ್ದು ಈ ವಿಷಯ ರಾಜಕೀಯಕ್ಕೆ ಸಂಬಂಧಿಸಿಲ್ಲವೆಂಬುದು ಸತ್ಯಕ್ಕೆ ದೂರ ಎಂದು ತೋರಿಸಲು ಹಾಗೂ ಇದರ ಪರಿಣಾಮದಿಂದಾಗಿ ರಾಷ್ಟ್ರದಲ್ಲಿ ತೊಂದರೆ ಉಂಟಾಗಿದೆ ಎಂಬುದನ್ನು ನಿರೂಪಿಸಲು, ಈ ವಿಷಯವನ್ನು ಪ್ರಸ್ತಾಪಿಸಿದ್ದೇನೆ. ಮಾನ್ಯ ಪ್ರಧಾನ ಮಂತ್ರಿಗಳು ಹಾಗೂ ನನ್ನ ಸ್ನೇಹಿತರಾದ ಆಹಾರಮಂತ್ರಿಗಳ ಎರಡು ಹೇಳಿಕೆಗಳ ಪರಿಣಾಮದಿಂದಾಗಿ ಈ ಮೊದಲು ಉಂಟಾಗಿದ್ದ ಶಂಕೆಗಳು ದೂರವಾಗುತ್ತಿರುವುದು ನನಗೆ ಸಂತೋಷವನ್ನುಂಟು ಮಾಡಿದೆ.

## 4. ಕಾರ್ಮಿಕ ಸಮಸ್ಯೆಗಳು*

ಶ್ರೀ ವಿ.ವಿ. ಗಿರಿಯವರು (ನನ್ನ ಸನ್ಮಾನ್ಯ ಸ್ನೇಹಿತರು) ಕಾರ್ಮಿಕ ನಾಯಕರಾಗಿ 30 ವರ್ಷಗಳ ಸೇವೆಯನ್ನು ಸಲ್ಲಿಸಿದ ನಂತರ ಉನ್ನತ ಹುದ್ದೆಯನ್ನು ಅಲಂಕರಿಸಿದರೆನ್ನುವ ಸಂಗತಿಯನ್ನು ರಾಷ್ಟ್ರ ಗಮನಿಸಿದೆ. ಸನ್ಮಾನ್ಯ ಕಾರ್ಮಿಕ ಸಚಿವರು, ತಮ್ಮ ಹುದ್ದೆಯನ್ನು ಅಲಂಕರಿಸಿದಂದಿನಿಂದ ತೆಗೆದುಕೊಂಡ ಶೀಘ್ರಕ್ರಮಗಳನ್ನು ಕೂಡ ರಾಷ್ಟ್ರ ಗಮನಿಸುತ್ತಿದೆ. 20 ವರ್ಷಗಳ ಹಿಂದೆ ನನ್ನ ಸ್ನೇಹಿತರು ನನ್ನನ್ನು ಆಂಧ್ರದೇಶದ ರೈಲು ಕಾರ್ಮಿಕರ ಮುಷ್ಕರಗಳ ಒಂದರಲ್ಲಿ ಭಾಗಿಯಾಗಿಸಿದ ಆ ದಿನಗಳ ನೆನಪು ನನಗಿದೆ. ಭಾರತದ ಸ್ವಾತಂತ್ರ್ಯ ಚಳುವಳಿಯ ಶಾಂತದಿನಗಳು ಅವು. ಯೋಜಿತ ರೀತಿಯಲ್ಲಿ ಕೈಗೊಂಡ ಅಥವಾ ನಡೆಸಿದ ಯಾವುದೇ ಮುಷ್ಕರ ಜನತೆಯ ದೃಷ್ಟಿಯಲ್ಲಿ ಗೌರವ ಸ್ಥಾನ ಪಡೆಯುತ್ತಿತ್ತು. ಸ್ವಾತಂತ್ರ್ಯ ಭಾರತದಲ್ಲಿ, ಇಂಥ ನಿರ್ದಿಷ್ಟ ಸಮಸ್ಯೆಯನ್ನು ಈಗ ನಾವು ಹೊಸದಾಗಿಯೇ ಅರ್ಥೈಸಬೇಕಾಗಿದೆ. ನನ್ನ ಸ್ನೇಹಿತರಾದ ಮಾನ್ಯ ಕಾರ್ಮಿಕ ಸಚಿವರ ಕಾರ್ಯಚಟುವಟಿಕೆಗಳನ್ನು ಕಳೆದ ಕೆಲವು ವರ್ಷಗಳಿಂದ ಅವರ ಕಿರಿಯ ಸಹೋದ್ಯೋಗಿಯಾಗಿ ಬಹಳ ಹತ್ತಿರದಿಂದ ಗಮನಿಸುವಂಥ ಸದಾವಕಾಶ ನನಗೆ ಒದಗಿತ್ತು. ಅವರಿಗೆ ಹುದ್ದೆಯ ಬಂಧನವಿಲ್ಲದಿದ್ದ ಸಮಯದಲ್ಲಿ ಕಾರ್ಮಿಕ ಹಕ್ಕುಗಳ ಬಗ್ಗೆ ವಿಶೇಷವಾಗಿ ಆ ಹಕ್ಕುಗಳನ್ನು ಸಂರಕ್ಷಿಸುವ ಅವಶ್ಯಕತೆಯ ಬಗ್ಗೆ ನಿರರ್ಗಳವಾಗಿ ಮಾತನಾಡಿದ್ದಾರೆ. ಆದರೆ ಈಗ ನಾನು ಗಮನಿಸಿದಂತೆ, ಅವರ ಬಗ್ಗೆ ಅತ್ಯಂತ ಗೌರವ ಭಾವನೆಯನ್ನು ತಾಳಿ ಹೇಳುವುದೇನೆಂದರೆ ಅವರು ಕಚೇರಿಗೆ ಎಂದೇ ಬರಲಿ ತಾನು ಹೇಳುವ ವಿಚಾರಗಳೇ ಸರಿ ಎಂದು ಹೇಳುವ ಒಂದು ಸುಲಭ ಮಾರ್ಗವನ್ನು ಕಂಡುಕೊಂಡಿದ್ದಾರೆ.

ಅವರು ಹೇಳಿದ್ದನ್ನು ನಾನು ಸರಿಯಾಗಿ ಉದಾಹರಿಸುತ್ತಿರುವೆನೆಂದು ಭಾವಿಸಿದ್ದೇನೆ. ಒಂದು ವೇಳೆ ನಾನು ಹೇಳುವುದು ಸರಿಯಿಲ್ಲವೆನಿಸಿದರೆ ತಕ್ಷಣವೇ ನನ್ನ ಮಾತುಗಳನ್ನು ಅವರು ತಡೆಯಬಹುದೆಂದೂ ಅವರಲ್ಲಿ ಕೇಳುತ್ತೇನೆ. ಕೆಲವು ವರ್ಷಗಳ ಹಿಂದೆ ಮದ್ರಾಸು ಸರ್ಕಾರದಲ್ಲಿ ಶ್ರೀ ಗಿರಿಯವರು ಕಾರ್ಮಿಕ ಸಚಿವರಾಗಿದ್ದಾಗ ಅವರ ಪ್ರಸಿದ್ಧ ಭಾಷಣಗಳ ಪೈಕಿ ಒಂದು ಮನಮುಟ್ಟುವ ಭಾಷಣವನ್ನು ತಿರುಚನಾಪಳ್ಳಿಯಲ್ಲಿ ಮಾಡಿದರು. ಒಟ್ಟಾರೆ ಅವರ ಸತ್ವ ಏನೆಂದರೆ,- ನಾನು ವ್ಯತಿರಿಕ್ತ ಅಭಿಪ್ರಾಯ ವ್ಯಕ್ತಪಡಿಸುತ್ತಿಲ್ಲ - ಮುಷ್ಕರ ಮಾಡಲು ಕಾರ್ಮಿಕರ ಹಕ್ಕಿಗೆ ಮಿತಿಯನ್ನು ಕಲಿಸುವುದಾಗಿತ್ತು. ಕಾರ್ಮಿಕ ಸಚಿವರಾಗಿ ಈ ಮಾತನ್ನು ಅವರು ಹೇಳಿದಾಗ ಏನು ಪ್ರತಿಕ್ರಿಯೆಗಳಾದವು ಎನ್ನುವ ಬಗ್ಗೆ ನಾನು ಅನುಚಿತ ವ್ಯಾಖ್ಯಾನವನ್ನು ಮಾಡುತ್ತಿಲ್ಲವೆಂದು ಭಾವಿಸುತ್ತೇನೆ. ಸಧ್ಯ ಅದನ್ನು ಮರೆತು ನನ್ನ ಸ್ನೇಹಿತರಾದ ಸನ್ಮಾನ್ಯ ಕಾರ್ಮಿಕ ಸಚಿವರು ತೀರಾ ಇತ್ತೀಚೆಗೆ ನೀಡಿದ ಹೇಳಿಕೆಯನ್ನು ಪ್ರಸ್ತಾಪಿಸುತ್ತೇನೆ. ಫ್ರೀ ಪ್ರೆಸ್ ಆಫ್ ಇಂಡಿಯಾ ಪತ್ರಿಕೆಯಿಂದ ಅದನ್ನು ಉದಾಹರಿಸುತ್ತಿದ್ದೇನೆ. ಅದು ಆ ಪತ್ರಿಕೆಯಲ್ಲಿ

* ಕಾರ್ಮಿಕ ಮಂತ್ರಾಲಯದ ಅನುದಾನದ ಬೇಡಿಕೆ ಮೇಲಿನ ಚರ್ಚೆಯಿಂದ (1952-53) ಲೋಕಸಭಾ - 19-1-1952, ಸಿ.ಸಿ. 2173-80

ಕಾರ್ಮಿಕ ಪಡೆಯುವುದು ಸಾಧ್ಯವೇ ಇಲ್ಲದಂತಾಗಿದೆ. ಕೈಗಾರಿಕಾ ವಿವಾದಗಳ ಅಧಿನಿಯಮದ 7ನೇ ಪ್ರಕರಣ, ಟ್ರೈ ಬುನಲ್‌ಗಳಿಗೆ ಉಚ್ಚ ನ್ಯಾಯಾಲಯದ ನ್ಯಾಯಾಧೀಶರನ್ನು ನೇಮಕ ಮಾಡಲು ಅವಕಾಶ ಮಾಡಿಕೊಟ್ಟಿದೆ. ಪ್ರಾಯಶಃ ಮುಂಬಯಿಯಲ್ಲಿರುವ ಬ್ಯಾಂಕುಗಳ ಟ್ರೈಬುನಲ್ ಹೊರತುಪಡಿಸಿದಂತೆ, ಉಚ್ಚ ನ್ಯಾಯಾಲಯದ ನ್ಯಾಯಾಧೀಶರನ್ನು ನೇಮಕ ಮಾಡಿರುವಂಥ ಯಾವುದೇ ಪ್ರಕರಣ ನನ್ನ ಗಮನಕ್ಕೆ ಬಂದಿಲ್ಲ. ಆದರೆ, ಅಖಿಲ ಭಾರತ ರಾಷ್ಟ್ರಮಟ್ಟದ ಕೈಗಾರಿಕಾ ವಿವಾದ ಟ್ರೈಬುನಲ್‌ಗಳಿಗೆ ಮಾತ್ರ ಉಚ್ಚ ನ್ಯಾಯಾಲಯದ ನ್ಯಾಯಾಧೀಶರ ಸೇವೆಯನ್ನು ಒದಗಿಸಿಕೊಡಲಾಗುತ್ತಿದೆ. ನನ್ನ ಸ್ನೇಹಿತರಾದ ಸನ್ಮಾನ್ಯ ಕಾರ್ಮಿಕ ಸಚಿವರು ಇತ್ತೀಚಿಗೆ ಮುಂಬಯಿಗೆ ಭೇಟಿ ನೀಡಿದ್ದ ಸಮಯದಲ್ಲಿ, ಕೆಲವು ಮಾಲೀಕರ ಪರವಾದ ಹಿತಾಸಕ್ತಿಗಳು, ಅವರಿಗೆ ಮನವಿಪತ್ರ ಸಲ್ಲಿಸಿ, ಅಧಿನಿಯಮದ 33ನೇ ಪ್ರಕರಣವನ್ನು ರದ್ದು ಮಾಡಬಾರದು ಬದಲಿಗೆ ಬಲಪಡಿಸಬೇಕೆಂದು ವಿನಂತಿಸಿದರೆಂಬ ಒಂದು ಕಾರಣಕ್ಕಾಗಿ ಈ ಬಗ್ಗೆ ಉಲ್ಲೇಖ ಮಾಡುತ್ತಿದ್ದೇನೆ. ಅಂದರೆ ಅಪಿಲೆಟ್ ಟ್ರೈಬುನಲ್ ಇರಬೇಕು ಅದನ್ನು ಮುಂದುವರಿಸಿಕೊಂಡು ಹೋಗಬೇಕು ಎಂಬುದು. ಈ ರಾಷ್ಟ್ರದಲ್ಲಿನ ವಸ್ತುಸ್ಥಿತಿಯನ್ನು ನಾನು ಸರಿಯಾಗಿ ಅರ್ಥ ಮಾಡಿಕೊಂಡಿದ್ದಲ್ಲಿ ಎಲ್ಲಾ ಜವಾಬ್ದಾರಿಯುತ ಕಾರ್ಮಿಕ ಸಂಘಗಳ ಬೇಡಿಕೆಯೆಂದರೆ ಈ ಅಪಿಲೆಟ್ ಟ್ರೈಬುನಲ್‌ನ ಕಾರ್ಯವ್ಯಾಪ್ತಿಯನ್ನು ರದ್ದುಪಡಿಸಿಬೇಕೆಂಬುದು. ಏಕೆಂದರೆ ಇದರ ಕಾರ್ಯವಿಧಾನ ಕೆಲಸಗಾರರಿಗೆ ಅನ್ಯಥಾ ತೊಂದರೆಯನ್ನುಂಟು ಮಾಡುವುದೇ ಅಲ್ಲದೆ ನ್ಯಾಯ ವ್ಯವಹಾರದ ವೆಚ್ಚ ಹೆಚ್ಚಾಗಿ, ಅವರಿಗೆ ಎಷ್ಟು ಜಾಗ್ರತೆ ನ್ಯಾಯ ಸಿಗಬೇಕೋ ಅಷ್ಟು ಜಾಗ್ರತೆಯಲ್ಲಿ ನ್ಯಾಯ ಸಿಗದೇ ಹೋಗುವುದು. ಕೈಗಾರಿಕಾ ವಿವಾದಗಳ ಅಧಿನಿಯಮದ 7 ಮತ್ತು 33ನೇ ಪ್ರಕರಣಗಳಲ್ಲಿ ಅಡಕವಾಗಿರುವ ಪರಿಣಾಮಗಳ ಬಗ್ಗೆ ಪರಿಶೀಲನೆ ಮಾಡಲು ಹಾಗೂ ಕಾರ್ಮಿಕರ ಹಿತಾಸಕ್ತಿಗೆ ಮಾರಕವಾದಂಥ ನಿರ್ಣಯಕ್ಕೆ ಬರಲು ಮಾನ್ಯ ಕಾರ್ಮಿಕ ಸಚಿವರು ತಮ್ಮ ಹೆಚ್ಚಿನ ಸಮಯ ವಿನಿಯೋಗಿಸುವರೆಂದು ನಾನು ದೃಢವಾಗಿ ನಂಬಿದ್ದೇನೆ.

ನನ್ನ ಸ್ನೇಹಿತರು ಅಧಿಕಾರ ವಹಿಸಿಕೊಂಡ ಮೇಲೆ ಕೆಲವು ತೀರ್ಮಾನಗಳಿಗೆ ಅವರು ಬಂದಿದ್ದಾರೆಂದು ಹೇಳುವುದನ್ನು ನಾನು ಇತ್ತೀಚಿಗೆ ಕೇಳಿದ್ದೇನೆ. ಅಂಥ ಅವರ ಒಂದು ನಿರ್ಣಯ, ಈ ಬಗ್ಗೆ ನನಗೆ ತಪ್ಪು ಮಾಹಿತಿಯಿದ್ದಲ್ಲಿ ಅದನ್ನು ಸರಿಪಡಿಸಿಕೊಳ್ಳಲು ಸಿದ್ಧನಿದ್ದೇನೆ, ಕಾರ್ಮಿಕ ಸಂಘಗಳ ಮತ್ತು ಕಾರ್ಮಿಕರ ಸಂಬಂಧಗಳ ವಿಧೇಯಕಗಳನ್ನು ಪ್ರಸ್ತುತ ಅಧಿವೇಶನದಲ್ಲಿ ಸದನದ ಮುಂದೆ ತರಬಾರದು ಎಂಬುದಾಗಿದೆ. ಈ ನಿರ್ದಿಷ್ಟ ವಿಧೇಯಕಗಳನ್ನು ಕುರಿತಂತೆ ಕಳೆದ ಕೆಲವಾರು ತಿಂಗಳುಗಳಿಂದ ರಾಷ್ಟ್ರವ್ಯಾಪಿ ತೀವ್ರತರ ವಿವಾದಗಳಿದ್ದರೂ ಇವುಗಳನ್ನು ಸದನದ ಮುಂದೆ ಮಂಡಿಸದಿರುವುದರ ಹಿಂದಿರುವ ಅವರ ಉದ್ದೇಶಗಳಾದರೂ ಏನು? ಈ ಬಗ್ಗೆ ಎಲ್ಲರಿಗೂ ಆಸಕ್ತಿಯಿರುವುದು ಖಚಿತ.

ವಿಶೇಷವಾಗಿ ಕೃಷಿ ಕಾರ್ಮಿಕರಿಗೆ ಸಂಬಂಧಪಟ್ಟಂತೆ, ಕನಿಷ್ಠ ವೇತನ ಕಾಯಿದೆಯನ್ನು ಜಾರಿಗೊಳಿಸಬೇಕೆಂಬುದು ಅವರ ಮತ್ತೊಂದು ಉದ್ದೇಶವೆಂದು ಹೇಳುವುದನ್ನು ನಾನು

ಕೇಳಿದ್ದೇನೆ. 1948ರ ಕನಿಷ್ಠ ವೇತನ ಕಾಯಿದೆ ನನ್ನ ಮುಂದಿದೆ. ಕೃಷಿ ಕಾರ್ಮಿಕರಿಗೆ ಕ್ರಮಬದ್ಧವಾಗಿ ಕನಿಷ್ಠ ವೇತನ ಕಾಯಿದೆಯನ್ನು ಅನ್ವಯಿಸಲು ಭಾರತ ಸರ್ಕಾರಕ್ಕಿರುವ ಅತಿ ಮುಖ್ಯ ಸಾಮಾಜಿಕ ನೀತಿಯ ಸಾಧನವೆಂದರೆ, ಈ ಕಾಯಿದೆಯ ಅನುಸೂಚಿ ಭಾಗ -II. ಈ ಮೊದಲೇ ನಾನು ಹೇಳಿದಂತೆ, ಕೆಲವು ಅಂಶಗಳ ಮೇಲೆ ನನ್ನ ಸ್ನೇಹಿತರಾದ ಮಾನ್ಯ ಕಾರ್ಮಿಕ ಸಚಿವರು ಈಗಾಗಲೇ ನಿರ್ಧಾರ ಮಾಡಿರುವುದು ಕಂಡುಬರುತ್ತಿದ್ದು, ಅವುಗಳ ಬಗ್ಗೆ ಅತಿ ಶೀಘ್ರದಲ್ಲಿಯೇ ಅವರು ಕೆಲವೊಂದು ಕ್ರಮಗಳನ್ನು ತೆಗೆದುಕೊಳ್ಳುವುದರಿಂದ ಈ ದಿಕ್ಕಿನಲ್ಲಿ ಅವರ ಮನಸ್ಸು ಹೇಗೆ ಯೋಚಿಸುತ್ತದೆ ಎಂಬುದನ್ನು ಸ್ಪಷ್ಟಪಡಿಸಬೇಕೆಂದು ಕೋರುತ್ತೇನೆ.

ಈ ರಾಷ್ಟ್ರದ ಕಾರ್ಮಿಕ ಸಮಸ್ಯೆಗಳ ಬಗ್ಗೆ ಭಾರತ ಸರ್ಕಾರದ ನೀತಿಯನ್ನು ಸಂಪೂರ್ಣವಾಗಿ ಪುನರ್ ರೂಪಿಸುವುದು ಅಗತ್ಯವೆಂದು ನಾನು ಭಾವಿಸಿರುವುದರಿಂದ ಕೈಗಾರಿಕಾ ಮತ್ತು ಸಾಮಾಜಿಕ ಶ್ರೇಯೋಭಿವೃದ್ಧಿಯ ಮೇಲೆ ಪರಿಣಾಮ ಬೀರಲಿರುವ ಕೆಲವು ಸಂಗತಿಗಳು ಮತ್ತು ಅಂಕಿ ಅಂಶಗಳನ್ನು ತಮ್ಮ ಅಪ್ಪಣೆಯ ಮೇರೆಗೆ ವಿಶ್ಲೇಷಿಸಲು ಇಚ್ಛಿಸಿದ್ದೇನೆ. 1952ರ ಮಾರ್ಚ್ ಭಾರತೀಯ ಕಾರ್ಮಿಕ ಗೆಜೆಟ್‌ನ ಅನುಸಾರ ಮುಷ್ಕರ ನಿರತ ಕಾರ್ಮಿಕರ ಸಂಖ್ಯೆ ಹಾಗೂ ಮಾನವ ದಿವಸಗಳ ನಷ್ಟದ ಸಂಖ್ಯೆಗಳಲ್ಲಿ ಗಣನೀಯವಾಗಿ ಇಳಿಮುಖವಾಗಿದ್ದು ಅವುಗಳನ್ನು ಈ ಕೆಳಗೆ ನಾನು ಪಟ್ಟಿ ಮಾಡಿದ್ದೇನೆ:

| | | |
|---|---|---|
| 1930 | ಮಾನವ ದಿನಗಳ ನಷ್ಟ | 50 ಲಕ್ಷ |
| 1946 | ಮಾನವ ದಿನಗಳ ನಷ್ಟ | 127 ಲಕ್ಷ |
| 1948 | ಮಾನವ ದಿನಗಳ ನಷ್ಟ | 78 ಲಕ್ಷ |
| 1949 | ಮಾನವ ದಿನಗಳ ನಷ್ಟ | 66 ಲಕ್ಷ |
| 1950 | ಮಾನವ ದಿನಗಳ ನಷ್ಟ | 128 ಲಕ್ಷ |
| 1951 | ಮಾನವ ದಿನಗಳ ನಷ್ಟ | 36 ಲಕ್ಷ |

ಇದು ಏನನ್ನು ತೋರಿಸುತ್ತದೆ? ಸ್ವಾತಂತ್ರ್ಯಾ ನಂತರ ಈ ರಾಷ್ಟ್ರದ ಇಂದಿನ ಕಾರ್ಮಿಕ ವರ್ಗ ಹೆಚ್ಚು ಜವಾಬ್ದಾರಿಯುತವಾಗಿದೆ ಹಾಗೂ ಸರ್ಕಾರ ಮತ್ತು ಮಾಲೀಕರ ವರ್ತನೆಗಳಿಗೆ ಸ್ಪಂದಿಸುತ್ತದೆ ಎಂಬುದು ಸ್ವತಃ ಕಾರ್ಮಿಕ ಸಂಘಟಕನಾದ ನನಗೆ ಅನಿಸುತ್ತದೆ.

ಗೈರುಹಾಜರಾತಿ ಇಳಿಮುಖದ ವಿಶ್ಲೇಷಣೆಯೂ ನನ್ನ ಬಳಿ ಇದೆ. ತೀರಾ ವಿವರವಾಗಿ ಪ್ರಸ್ತಾಪಿಸಿ ಸದನದ ಬೇಸರಕ್ಕೆ ಕಾರಣನಾಗುವುದಿಲ್ಲ. ನಾಲ್ಕು ಶೀರ್ಷಿಕೆಗಳಲ್ಲಿ ಮಾತ್ರ ಇವುಗಳನ್ನು ಕ್ರೋಢೀಕರಿಸಿದೆ.

ಉಕ್ಕು ಮತ್ತು ಕಬ್ಬಿಣ ಕೈಗಾರಿಕೆಯಲ್ಲಿ 1948 ರಲ್ಲಿದ್ದ ಶೇ. 14.3 ಗೈರುಹಾಜರಾತಿ 1952ರ ಜನವರಿಯಲ್ಲಿ ಶೇ. 10ಕ್ಕೆ ಇಳಿದಿದೆ. ಸಿಮೆಂಟ್ ಕೈಗಾರಿಕೆಯಲ್ಲಿ 1947 ರಲ್ಲಿದ್ದ

ಮುದ್ರಿಸಿದಂಥ ಯಥೋಕ್ತಿ. ಜೂನ್ 2 ರಂದು, ಮುಂಬಯಿಯಲ್ಲಿ ಅಖಿಲ ಭಾರತ ಉತ್ಪಾದಕರುಗಳ ಸಂಘವನ್ನು ಉದ್ದೇಶಿಸಿ ನನ್ನ ಸ್ನೇಹಿತರು ಮಾಡಿದ ಭಾಷಣ ಇದು. "ನನಗೆ ಶಾಸನದಲ್ಲಿ ಹೆಚ್ಚು ನಂಬಿಕೆಯಿಲ್ಲ. ನನಗೆ ಇಬ್ಬರ ನಡುವಿನ ಎಂದರೆ ಮಾಲಿಕರ ಮತ್ತು ನೌಕರರ ನಡುವಿನ, ತಿಳುವಳಿಕೆ ಮತ್ತು ಸತ್‌ಸಂಪ್ರದಾಯಗಳ ಬಗ್ಗೆ ಹೆಚ್ಚು ನಂಬಿಕೆಯಿದೆ". ನನಗನ್ನಿಸುತ್ತದೆ ಇದು ಒಂದು ಅತ್ಯಂತ ಅಪಾಯಕರ ಸಿದ್ಧಾಂತ. ಮಾನ್ಯ ಕಾರ್ಮಿಕ ಸಚಿವರ ಭಾಷಣ ಸರಿಯಾಗಿ ವರದಿಯಾಗಿದ್ದಲ್ಲಿ, ನನ್ನ ಮನಸ್ಸಿನಲ್ಲಿ ಮೂಡುವುದೇನೆಂದರೆ, ಯಾರು ಕಳೆದ 25 ವರ್ಷಗಳ ಅವಧಿಯಲ್ಲಿ ಈ ರಾಷ್ಟ್ರದಲ್ಲಿನ ಕಾರ್ಮಿಕ ಶಾಸನದ ಬಗ್ಗೆ ಹೆಚ್ಚಿನ ಗಮನವನ್ನು ನೀಡಿದ್ದರೋ ಅವರೇ ದುಡಿಯುವ ಕಾರ್ಮಿಕರ ಸಮಸ್ಯೆಯ ಬಗ್ಗೆ ಭಾರತ ಸರ್ಕಾರ ತಾಳಿರುವ ಅಂಗೀಕೃತ ನೀತಿಗಳ ನಿಲುವಿನಿಂದ ಹಿಂದಕ್ಕೆ ಸರಿಯುತ್ತಿರುವುದು ಅತ್ಯಂತ ಅಪಾಯಕರ.

ಈ ಸಮಸ್ಯೆಯ ಬಗ್ಗೆ ನಾನೇ ಏಕೆ ಪ್ರಸ್ತಾಪ ಮಾಡುತ್ತಿದ್ದೇನೆ? ಈ ರಾಷ್ಟ್ರದ ಎಲ್ಲಾ ಕಡೆ ನಡೆಯುತ್ತಿರುವ ಕೆಲವು ಬೆಳವಣಿಗೆಗಳು ನನಗೆ ಆತಂಕ ಉಂಟು ಮಾಡಿದ್ದು ಆದಷ್ಟೂ ಅವುಗಳನ್ನು ಸಂಕ್ಷಿಪ್ತವಾಗಿ ವಿಶ್ಲೇಷಣೆ ಮಾಡಲು ಇಚ್ಛಿಸುತ್ತೇನೆ. ವಿಶೇಷವಾಗಿ, ಕೈಗಾರಿಕಾ ವಿವಾದಗಳ ಅಧಿನಿಯಮದ ಜಾರಿಯ ಬಗ್ಗೆ ಉಲ್ಲೇಖಿಸುತ್ತೇನೆ.

ಸ್ವತಃ ಕಾರ್ಮಿಕ ಸಂಘಟನಾಕಾರನಾದ ನಾನು ಇತ್ತೀಚೆಗಷ್ಟೇ ಕೈಗಾರಿಕಾ ವಿವಾದಗಳ ಟ್ರೈಬುನಲ್ ಮುಂದೆ 12 ತಿಂಗಳಷ್ಟು ದೀರ್ಘ ಕಾಲಾವಧಿಯವರೆಗೆ ಹಾಜರಾಗುವ ಅವಕಾಶ ಒದಗಿಬಂತು. ನನ್ನ ಮಟ್ಟಿಗೆ ಹೇಳುವುದಾದರೆ, ಈ ಸದನದ ಘನತೆಯ ದೃಷ್ಟಿಯಿಂದ ಹಾಗೂ ಜವಾಬ್ದಾರಿಯುತನಾಗಿ ಕಲಾಪದಲ್ಲಿ ಭಾಗಿಯಾಗಬೇಕೆಂಬ ಇಚ್ಛೆಯಿಂದ, ವಾಣಿಜ್ಯದ ಅಥವಾ ಕಂಪನಿಯ ಹೆಸರುಗಳನ್ನಾಗಲೀ ಅಥವಾ ಕಾರ್ಮಿಕ ಸಂಘದ ಹೆಸರನ್ನಾಗಲೀ ಇಲ್ಲಿ ಹೇಳಲು ನಾನು ಇಚ್ಛಿಸುವುದಿಲ್ಲ. ಅವುಗಳ ಅವಶ್ಯಕತೆ ಇದ್ದರೆ, ಹೇಳಲು ಸಿದ್ಧನಿದ್ದೇನೆ. 1952ರ ಜನವರಿ 17 ರಂದು ಕೈಗಾರಿಕಾ ವಿವಾದಗಳ ಟ್ರೈಬುನಲ್, ವಿಜಯವಾಡ ನೀಡಿದ ತೀರ್ಪಿನ 2ನೇ ಪ್ಯಾರಾವನ್ನು ಇಲ್ಲಿ ಉದಾಹರಿಸುತ್ತೇನೆ. ಸಂದರ್ಭಕ್ಕೆ ಅನುಚಿತವಾದ ಉಲ್ಲೇಖವೆಂದು ನೀವು ಹೇಳದ ಹಾಗೆ, ಸಂಬಂಧಿಸಿದ ಭಾಗವನ್ನಷ್ಟೇ ನೇರವಾಗಿ ಇಲ್ಲಿ ಉದಾಹರಿಸುತ್ತಿದ್ದೇನೆ:

"1951ರ ಜುಲೈ 18 ರಂದು ಸರ್ಕಾರ ಒಂದು ಉಲ್ಲೇಖವನ್ನು ಕಳುಹಿಸಿತು. ಅದನ್ನು 1951 ರ ಆಗಸ್ಟ್ 1 ರಂದು ಸ್ವೀಕರಿಸಲಾಯಿತು. ಆ ದಿನವೇ ಹೇಳಿಕೆಗಳನ್ನು ಫೈಲು ಮಾಡಲು ನೋಟೀಸುಗಳನ್ನು ಜಾರಿಗೊಳಿಸಲಾಯಿತು. ಸಂಸ್ಥೆಗಳು (ಎಂದರೆ ಕಾರ್ಮಿಕ ಸಂಸ್ಥೆಗಳು) 1951ರ ಆಗಸ್ಟ್ 24ರಂದು ಹೇಳಿಕೆಗಳನ್ನು ಫೈಲು ಮಾಡಿದವು. ಆಡಳಿತ ಮಂಡಲಿಯು ಮೂರು ಬಾರಿ ಕಾಲವಕಾಶ ಪಡೆದುಕೊಂಡು ದಿನಾಂಕ 19-10-51 ರಂದು ಉತ್ತರದ ಹೇಳಿಕೆಯನ್ನು ಫೈಲು ಮಾಡಿತು. (ಅಂದರೆ ಕೈಗಾರಿಕಾ ವಿವಾದಗಳ ಟ್ರಿಬುನಲ್

ವಾಸ್ತವವಾಗಿ ಕಾರ್ಯ ಪ್ರಾರಂಭಿಸಿದ ಸುಮಾರು 3 ತಿಂಗಳ ನಂತರ) ಆ ದಿನದಿಂದ, ಲೆಕ್ಕಪತ್ರಗಳನ್ನು ಸಲ್ಲಿಸಲು ಅನೇಕ ಬಾರಿ ಸಮಯಾವಕಾಶ ತೆಗೆದುಕೊಂಡಿದ್ದರೂ ಇದುವರೆಗೆ ಕಂಪನಿಯ ಲೆಡ್ಜರ್ ಪುಸ್ತಕಗಳನ್ನು ಸಲ್ಲಿಸಿರುವುದಿಲ್ಲ."

ಕೊನೆಯಲ್ಲಿ, ಟ್ರೈಬುನಲ್ ಹೇಳುತ್ತದೆ. - ತೀರ್ಪಿನಲ್ಲಿರುವ ಅದರದೇ ಆದ ಶಬ್ದಗಳನ್ನು ನಾನಿಲ್ಲಿ ನಿರೂಪಿಸುತ್ತೇನೆ:

" ಕಂಪನಿಯ ಈ ನಡವಳಿಕೆ, ಕಾರ್ಮಿಕ ಸಂಸ್ಥೆಗಳಲ್ಲಿ ಕಹಿ ವಾತಾವರಣವನ್ನು ಸೃಷ್ಟಿಸಿದೆ".

ನಮ್ಮದೇ ಆದ ಕಾನೂನಿನ ಮೇರೆಗೆ ನೇಮಿಸಲಾದ ಟ್ರಿಬುನಲ್‌ನ ಕಾರ್ಯ ವೈಖರಿಗಳನ್ನು ನಿಂದಿಸಲು ನೀವೇಕೆ ಅವಕಾಶ ಮಾಡಿಕೊಡುತ್ತೀರಿ? ಮಾನ್ಯ ಕಾರ್ಮಿಕ ಸಚಿವರು ಮುಂಬಯಿಯಲ್ಲಿ ಪ್ರತಿಪಾದಿಸಿದಂಥ ಸಿದ್ಧಾಂತವು ಅಪಾಯಕರ ಪರಿಣಾಮಗಳಿಂದ ಕೂಡಿದ್ದಾಗಿದೆ. ನಾವೂ ಭಾಗೀದಾರರಾದ ಅಂತಾರಾಷ್ಟ್ರೀಯ ಕಾರ್ಮಿಕ ಸಂಘದ ಆಡಳಿತ ಪದ್ಧತಿಯಂತೆ, ಯಾವುದೇ ರೀತಿಯಲ್ಲೂ ಕಾರ್ಮಿಕ ದುರ್ಬಲ ಪಾಲುದಾರನಾಗುತ್ತಾನೆ. ತನ್ನನ್ನು ಸಂರಕ್ಷಿಸಿಕೊಳ್ಳುವ ಹಕ್ಕು ಕಾರ್ಮಿಕನಿಗಿದೆ. ಇಲ್ಲದಿದ್ದಲ್ಲಿ ಕಾನೂನು ಪುಸ್ತಕದಲ್ಲಿರುವ ಈ ಎಲ್ಲಾ ಅಧಿನಿಯಮಗಳಿಗೆ, ಅಂದರೆ, ಕನಿಷ್ಠ ವೇತನಗಳ ಅಧಿನಿಯಮ, ಮಕ್ಕಳ ಉದ್ಯೋಗ ಅಧಿನಿಯಮ, ಕಾರ್ಖಾನೆಗಳ ಅಧಿನಿಯಮ, ಮಧ್ಯಸ್ಥಿಕೆ ಅಧಿನಿಯಮ ಇತ್ಯಾದಿಗಳಿಗೆ ಅರ್ಥವೇ ಇರುವುದಿಲ್ಲ. ಆದ್ದರಿಂದ ಕಾರ್ಮಿಕರ ಬಗೆಗಿನ ಭಾರತ ಸರ್ಕಾರದ ನೀತಿಗೆ ವಿದಾಯ ಹೇಳಲಾಗುತ್ತದೆಯೇ ಎಂಬುದನ್ನು ಧೈರ್ಯವಾಗಿ ಮತ್ತು ಸ್ಪಷ್ಟವಾಗಿ ನಮಗೆ ಹೇಳಬೇಕೆಂದು ನನ್ನ ಸ್ನೇಹಿತರಾದ ಕಾನೂನು ಸಚಿವರನ್ನು ಕೇಳುತ್ತೇನೆ. ಹಾಗಿದ್ದಲ್ಲಿ, ಅವರ ಮಂತ್ರಾಲಯದ ಅನುದಾನ ಬೇಡಿಕೆಗಳನ್ನು ಇತ್ಯರ್ಥ ಮಾಡಲು ಈಗಲೇ ಕೈಗೆತ್ತಿಕೊಂಡಿರುವುದರಿಂದ ಈಗಲೇ ಹೇಳುವುದು ಒಳಿತು. ಇಲ್ಲದಿದ್ದಲ್ಲಿ ದುಡಿಮೆ ಮತ್ತು ಬಂಡವಾಳವೆರಡೂ, ಅಂದರೆ ಮಾಲೀಕರು, ಸರ್ಕಾರದ ಜೊತೆ ತಮ್ಮ ನಡವಳಿಕೆ ಮತ್ತು ಅಭಿಪ್ರಾಯಗಳ ಬಗ್ಗೆ ಪುನರ್ ಹೊಂದಾಣಿಕೆ ಮಾಡಿಕೊಳ್ಳುವುದಂತೂ ಖಚಿತ. ಏಕೆಂದರೆ, ಇದಕ್ಕೆ ವಿದಾಯ ಹೇಳಿದ ಪಕ್ಷದಲ್ಲಿ ಈ ಸಂಬಂಧದಲ್ಲಿ ರಚಿಸಲಾದ ತ್ರಿಪಕ್ಷೀಯ ವ್ಯವಸ್ಥೆ ಮತ್ತು ಕೈಗಾರಿಕೆ ಹಾಗೂ ಕಾರ್ಮಿಕರ ಸಮಸ್ಯೆಗಳ ಪರಿಹಾರದ ಬಗೆಗಿನ ತ್ರಿಕೋನ ದೃಷ್ಟಿ ಹಾಳಾಗುವುದೆಂದು ನನಗೆ ಮನವರಿಕೆಯಾಗಿದೆ.

ಕೈಗಾರಿಕೆ ವಿವಾದಗಳ ಈ ಸಮಸ್ಯೆಯನ್ನು ಕೈಗೆತ್ತಿಕೊಂಡಿರುವುದರಿಂದ ಕೈಗಾರಿಕಾ ವಿವಾದಗಳ ಅಧಿನಿಯಮ 1947ರ ಪ್ರಕರಣ 7ರ ಕಡೆಗೆ ನನ್ನ ಸ್ನೇಹಿತರ ಗಮನವನ್ನು ಸೆಳೆಯುತ್ತೇನೆ. ಈ ಟ್ರೈಬುನಲ್‌ಗಳ ಕಾರ್ಯ ನಿರ್ವಹಣೆಯನ್ನು ಒಂದಕ್ಕಿಂತಲೂ ಹೆಚ್ಚಿನ ಪ್ರಕರಣದಲ್ಲಿ ಸ್ವತಃ ನೋಡಿರುವ ನಾನು, ಈ ಮೊದಲೇ ಹೇಳಿದಂತೆ, ಈ ಟ್ರೈಬುನಲ್‌ಗಳ ಕಾರ್ಯನಿರ್ವಹಣೆ ಹೇಗಿದೆ ಎಂದರೆ, ವಿವಾದಿತ ಸಮಸ್ಯೆಯ ಬಗ್ಗೆ ಶೀಘ್ರ ಇತ್ಯರ್ಥವನ್ನು

ಶೇ. 12.2 ಗೈರುಹಾಜರಾತಿ ಈ ವರ್ಷದ ಜನವರಿಯಲ್ಲಿ ಶೇ. 10.2 ಕ್ಕೆ ಇಳಿದಿದೆ. ಬೆಂಕಿಪೊಟ್ಟಣ ಕೈಗಾರಿಕೆಯಲ್ಲಿ 1947 ರಲ್ಲಿದ್ದ ಶೇ. 12.4, ಈ ವರ್ಷದ ಜನವರಿಯಲ್ಲಿ ಶೇ. 8.4ಕ್ಕೆ ಇಳಿದಿದೆ ಹಾಗೂ ಕೊನೆಯಲ್ಲಿ ಯುದ್ಧೋಪಕರಣಗಳ ಕಾರ್ಖಾನೆಗಳಲ್ಲಿದ್ದ ಶೇ. 10.6, ಈ ವರ್ಷದ ಪ್ರಾರಂಭದಲ್ಲಿ ಶೇ. 7.8ಕ್ಕೆ ಇಳಿದಿದೆ.

ಕಲ್ಲಿದ್ದಲು ಕೈಗಾರಿಕೆಗೆ ಸಂಬಂಧಪಟ್ಟಂತೆ ಮಾತನಾಡಲು ನನಗೆ ಕಾಲಾವಕಾಶ ದೊರೆಯುವುದೆಂದು ನಂಬಿದ್ದೇನೆ. ಈ ರಾಷ್ಟ್ರದ ಪುನರ್ ನಿರ್ಮಾಣದ ಕ್ಷೇತ್ರದಲ್ಲಿ ಭಾರತ ಸರ್ಕಾರದ ಕಾರ್ಯಚಟುವಟಿಕೆಗಳಿಗೆ ಚಾಲನೆ ನೀಡುವ ಹಾಗೂ ಅಡಚಣೆಯೊಡ್ಡದಂಥ ಜವಾಬ್ದಾರಿಯುತ ಭಾರತೀಯ ಕಾರ್ಮಿಕ ವರ್ಗದ ಮತ್ತೊಂದು ಸಾಧನೆಯನ್ನೇ ಈ ಕೈಗಾರಿಕೆ ತೋರಿಸುತ್ತದೆ. ನನ್ನ ಸ್ನೇಹಿತರಾದ ಶ್ರೀ ದಾಸ್‌ರವರು ಸೌಜನ್ಯಪೂರ್ವಕವಾಗಿ ನನ್ನ ನೆನಪಿಗೆ ತಂದಿದ್ದುದರಿಂದ ಕಲ್ಲಿದ್ದಲು ಕೈಗಾರಿಕೆಯ ಬಗ್ಗೆ ಪ್ರಸ್ತಾಪಿಸುತ್ತೇನೆ. 1952ರ ಮಾರ್ಚ್‌ನ ಭಾರತ ಸರ್ಕಾರದ ಕಾರ್ಮಿಕ ಗೆಜೆಟ್‌ನ ಪ್ಯಾರಾ ನನ್ನ ಮುಂದಿದೆ. ಅದರ ಪ್ರಕಾರ ಕಲ್ಲಿದ್ದಲು ಕೈಗಾರಿಕೆಯಲ್ಲಿ ಕಾರ್ಮಿಕ ವರ್ಗದ ಉತ್ಪಾದಕತೆ 1950 ರಲ್ಲಿದ್ದ ಶೇ. 0.33 ಕ್ಕಿಂತ 1951ರಲ್ಲಿ ಶೇ. 0.34 ವರೆಗೆ ಹೆಚ್ಚಾಗಿದೆ. ಈ ಮೂರು ರೀತಿಯ ಸಂಗತಿಗಳ ಮೇಲೆ ಸಾಮಾನ್ಯ ಅಭಿಪ್ರಾಯಗಳನ್ನು ವ್ಯಕ್ತಪಡಿಸುವುದನ್ನು ಬಿಟ್ಟರೆ ಹೆಚ್ಚಿನ ವಿವರಗಳನ್ನು ಹೇಳಿ ಈ ಸದನದ ತಾಳ್ಮೆಯನ್ನು ಕೆಣಕಲು ಇಷ್ಟಪಡುವುದಿಲ್ಲ. ಅಂದರೆ..........

ಕೈಗಾರಿಕಾ ವಿವಾದಗಳು, ಗೈರುಹಾಜರಾತಿ ಮತ್ತು ಕಾರ್ಮಿಕ ವರ್ಗದ ಉತ್ಪಾದಕತೆಗಳನ್ನು ಕುರಿತಂತೆ ಹೇಳುವುದಾದರೆ, ಅವುಗಳು, ಇಂದು ಭಾರತದಲ್ಲಿನ ಕಾರ್ಮಿಕ ವರ್ಗ ಹೋರಾಟದ ಪರವಾಗಿದೆ ಮತ್ತು ತನ್ನ ಹಕ್ಕುಗಳು ಹಾಗೂ ಕರ್ತವ್ಯಗಳ ಬಗ್ಗೆ ಎಚ್ಚರದಿಂದಿದೆ ಹಾಗೂ ಆ ಹಕ್ಕುಗಳ ಬಗ್ಗೆ ಸಂಪೂರ್ಣ ತಿಳುವಳಿಕೆ ಹೊಂದಿದೆ ಎಂಬುದನ್ನು ಎತ್ತಿ ತೋರಿಸುತ್ತವೆ. ಗೌರವಯುತ ಹೊಂದಾಣಿಕೆಗೆ ಅದು ಸಿದ್ಧವಿದೆ. ಈ ರಾಷ್ಟ್ರದ ಕಾರ್ಮಿಕ ವರ್ಗದ ಪರಿಸ್ಥಿತಿಯನ್ನು ಸರಿಯಾದ ರೀತಿಯಲ್ಲಿ ನಿರ್ವಹಿಸುವ ಅವಶ್ಯಕತೆ ಬಗ್ಗೆ ನನ್ನ ಸ್ನೇಹಿತರಾದ ಮಾನ್ಯ ಕಾರ್ಮಿಕ ಸಚಿವರ ಗಮನವನ್ನು ಸೆಳೆಯಲು ನಾನು ಕಾತುರನಾಗಿದ್ದೇನೆ. ಕಾರ್ಮಿಕರ ಹಕ್ಕುಗಳನ್ನು ಕಾಪಾಡುವಲ್ಲಿ ಮಾನ್ಯ ಕಾರ್ಮಿಕ ಸಚಿವರು ಶಾಸಕಾಂಗದ ಯಥೋಚಿತ ಸಹಾಯವನ್ನು ಪಡೆಯಲು ವಿಫಲರಾಗರು ಎಂದು ನಾನು ದೃಢವಾಗಿ ನಂಬಿದ್ದೇನೆ. ಸರ್ಕಾರದ ನೀತಿಯಲ್ಲಿ ಲಾಭ ಹಂಚಿಕೆ ಮತ್ತು ಕಾರ್ಮಿಕ ವರ್ಗದ ಸಹಭಾಗಿತ್ವದ ಭರವಸೆಯ ದಿನಕ್ಕಾಗಿ ನಾನು ಕಾತರಿಸುತ್ತಿದ್ದೇನೆ. ಸಾಮಾಜಿಕ ಹಾಗೂ ಕೈಗಾರಿಕಾ ಶ್ರೇಯೋಭಿವೃದ್ಧಿ ಕ್ಷಿತಿಜದಲ್ಲಿ ನಾವು ತರಬೇಕೆಂದಿರುವ ಕ್ರಾಂತಿ ಅಥವಾ ವಿಕಾಸಗಳನ್ನು ಇವುಗಳ ಹೊರತಾಗಿ ಈ ರಾಷ್ಟ್ರದಲ್ಲಿ ತರಲು ಸಾಧ್ಯವೇ ಇಲ್ಲ. ನಾನು ಜವಾಬ್ದಾರಿಯನ್ನು ಅರಿತು ಮಾತನಾಡುತ್ತಿರುವೆ. ಚುನಾವಣಾ ಪ್ರಚಾರದ ಸಭೆಗಳಲ್ಲಿ ನಾನು ಮಾತನಾಡುತ್ತಿಲ್ಲ. ಈ ಸಂದರ್ಭದ ಗಂಭೀರತೆಯನ್ನು ನಾನು ಚೆನ್ನಾಗಿ ಅರಿತಿದ್ದೇನೆ. ಈ ವಿಷಯಗಳ ಯಶಸ್ವಿ ಜಾರಿಗೆ ಭಾರತ ಸರ್ಕಾರ ಕೂಡಲೇ ಸೂಕ್ತ ಕಾನೂನನ್ನು ಜಾರಿಗೊಳಿಸುವುದೆಂದು ನಾನು ಭಾವಿಸುತ್ತೇನೆ. ಇತರೆ ವಿಷಯಗಳಿಗೆ

ನೀಡುವುದಕ್ಕಿಂತ ಹೆಚ್ಚಿನ ಗಮನವನ್ನು ಈ ಸಮಸ್ಯೆಗೆ ನನ್ನ ಸ್ನೇಹಿತರಾದ ಕಾರ್ಮಿಕ ಸಚಿವರು ನೀಡುವರೆಂದು ಆಶಿಸುತ್ತೇನೆ.

ಕಳೆದ 25 ವರ್ಷಗಳ ಅವಧಿಯಲ್ಲಿ ಕಾರ್ಮಿಕ ಸಂಘಟಕನಾಗಿ ಸೇವೆ ಸಲ್ಲಿಸಲು ನನಗೆ ದೊರೆತ ಅವಕಾಶದಲ್ಲಿ ಕಾರ್ಮಿಕ ಚಳುವಳಿಯ ನೇತೃತ್ವ ವಹಿಸಿದಂಥ ಕಾರ್ಮಿಕ ಸಂಘ ಸಂಸ್ಥೆಗಳ ಮಧ್ಯೆ ಒಗ್ಗಟ್ಟಿನ ಕೊರತೆ ಎದ್ದು ಕಾಣುತ್ತಿದ್ದುದನ್ನು ಅನೇಕ ಪ್ರಕರಣಗಳಲ್ಲಿ ನಾನು ನೋಡಬೇಕಾಯಿತು. 1952ರ ಫೆಬ್ರವರಿಯಲ್ಲಿ ನನಗೆ ಸಂಬಂಧಪಟ್ಟಂತೆ ಕಾರ್ಮಿಕ ಸಂಘಗಳ ಒಂದು ಸಂಘದ ಮುಷ್ಕರವನ್ನು ನಾನು ನಡೆಸುವಂಥ ಪ್ರಸಂಗ ಒದಗಿಬಂದಿತು. ಹಡಗು ಕಾರ್ಮಿಕರ ಆ ಮುಷ್ಕರ ಅತ್ಯಂತ ಯಶಸ್ವಿಯಾಗಿ ನಡೆಯಿತು. ನಾನು ಆ ಸಂಘದ ಅಧ್ಯಕ್ಷನಾಗಿದ್ದೆ. ಆ ಮುಷ್ಕರದ ಪ್ರತಿಫಲವಾಗಿ ಸರ್ಕಾರದಿಂದ 9 ಲಕ್ಷ ರೂಪಾಯಿಗಳನ್ನು ಪಡೆದೆವು. ನನ್ನ ಸ್ನೇಹಿತರಾದ ಶ್ರೀ ಗಾಡ್ಗಿಲ್‌ರವರು ಆಗ ಅಧಿಕಾರದಲ್ಲಿದ್ದರು. ಈ ಮನೆಯ ಸದಸ್ಯರುಗಳಾದ ಕಾರ್ಮಿಕ ಸಂಘಗಳ ಮುಖಂಡರುಗಳಲ್ಲಿ ನನ್ನ ಮನವಿ ಇಷ್ಟೆ. ಕಾರ್ಮಿಕ ಸಂಘಗಳು ಮುಂದಿನ ಐದು ವರ್ಷಗಳ ಅವಧಿಗೆ ವಿರಾಮವನ್ನು ಘೋಷಿಸಬೇಕು. ಇಲ್ಲದಿದ್ದಲ್ಲಿ, ಸರ್ಕಾರ ಏನೇ ಮಾಡಲಿ ಅಥವಾ ಮಾಡದಿರಲಿ ಕೈಗಾರಿಕಾ ಉತ್ಪನ್ನಗಳನ್ನು ಹೆಚ್ಚಿಸಲು ನಮಗೆ ಸಾಧ್ಯವಾಗುವುದಿಲ್ಲವೆಂದು ನನ್ನ ಮನಸ್ಸಿಗೆ ಅನಿಸುತ್ತದೆ. ನನ್ನ ನೇತೃತ್ವದ ಸಂಘಗಳಲ್ಲಿ ಯಾವುದೇ ಸಂದರ್ಭದಲ್ಲೂ ಬದಲಾಯಿಸಲಾಗದಂಥ ಒಂದು ನಿಯಮವನ್ನು ನಾವು ರೂಪಿಸಿಕೊಂಡಿದ್ದೇವೆ. ಅದೇನೆಂದರೆ ಅಲ್ಲಿ ರಾಜಕೀಯ ಇರಲೇಕೂಡದು. ನಮ್ಮಲ್ಲಿ ರಾಜಕೀಯ ಪಕ್ಷಗಳು ಇವೆ. ನಾನೂ ಕಾಂಗ್ರೆಸ್‌ನಲ್ಲಿ ಅನೇಕ ವರ್ಷಗಳ ಕಾಲ ಸದಸ್ಯನಾಗಿದ್ದೆ. ನನ್ನ ಸ್ನೇಹಿತ ಶ್ರೀ ರಾಜಭೋಜ ಅವರು ಬಹುತೇಕ ಇನ್‌ಟೆಕ್ (INTUC) ನ ಧ್ಯೇಯಗಳನ್ನೇ ಪ್ರಸ್ತಾಪಿಸಿದರು. ಈ ರಾಷ್ಟ್ರದ ಯಾವುದೇ ಕಾರ್ಮಿಕ ಸಂಘ ಸಂಸ್ಥೆಗಳನ್ನು ವಿರೋಧಿಸುವ ಉದ್ದೇಶ ನನಗಿಲ್ಲ. ಈ ರಾಷ್ಟ್ರದ ಕಾರ್ಮಿಕ ಚಳುವಳಿಯ ನೇತೃತ್ವವನ್ನು ವಹಿಸಿಕೊಳ್ಳುವಂಥ ಗೌರವಾದರಗಳಿಗೆ ನಾವೇ ಪಾತ್ರರು ಎಂದು ಹೇಳಿಕೊಳ್ಳುವಂಥ ನಾಲ್ಕೈದು ಸಂಘಸಂಸ್ಥೆಗಳು ಇವೆ, ಅವುಗಳಿಗೆ ನಾನು ಮಾಡಿಕೊಳ್ಳುವ ಮನವಿ ಇಷ್ಟೇ, ಕಾರ್ಮಿಕ ಮುಂದೆ ಬರಲು ಸಹಾಯ ಮಾಡಿ, ಅವನಿಗೆ ದೊರಕಬೇಕಾದಂಥ ಸೌಲಭ್ಯಗಳನ್ನು ದೊರಕಿಸಿಕೊಡಿ. ಎರಡು ವರ್ಷಗಳ ಹಿಂದೆ ಮುಂಬಯಿಯಲ್ಲಿ ಸೋಲನ್ನು ಅನುಭವಿಸಿದ ಜವಳಿ ಮುಷ್ಕರದಂಥ ಮುಷ್ಕರಕ್ಕೆ ಬಲಿಯಾಗಬೇಡಿ. ಆ ಮುಷ್ಕರ ಮುರಿಬಿದುಬಿದ್ದು ಮಾಲೀಕರ ಬೃಹತ್ ಶಕ್ತಿಯಿಂದಲ್ಲ. ಭಾರತ ಸರ್ಕಾರ ಅಥವಾ ಬೊಂಬಾಯಿ ಸರ್ಕಾರಗಳ ತೋಪಿನ ಗುಂಡಿನಿಂದಲ್ಲ. ಈ ರಾಷ್ಟ್ರದ ಕಾರ್ಮಿಕ ಸಂಘ ಚಳುವಳಿಯ ಪರಸ್ಪರ ಒಗ್ಗಟ್ಟಿನ ತೀವ್ರ ಕೊರತೆಯಿಂದ ಮುರಿದು ಬಿತ್ತು.

## 4. ಕಾರ್ಯನೀತಿ ವಿಷಯಗಳು

### ಆಮದು - ರಫ್ತು ನೀತಿ ಮತ್ತು ಕೈಗಾರಿಕಾ ನೀತಿ

ಸನ್ಮಾನ್ಯ ವಾಣಿಜ್ಯ ಸಚಿವರಾದ ಶ್ರೀ ಕರಮರ್‌ಕರ್‌ರವರ ಕುತೂಹಲಕರ ಭಾಷಣವನ್ನು ಈ ಸದನ ಆಲಿಸಿದೆ. ತಮ್ಮ ಭಾಷಣದ ಅವಧಿಯಲ್ಲಿ, ಇದುವರೆಗೆ ಚರ್ಚೆಯಲ್ಲಿ ಪ್ರಸ್ತಾಪಿಸಲಾದ ಕೆಲವೊಂದು ವಿಷಯಗಳಿಗೆ ಅವರು ಉತ್ತರ ನೀಡುವ ಜಾಣತನ ತೋರಿದರು. 1947 ಕ್ಕಿಂತಲೂ ಹಿಂದೆ ಹೋಗಿ, ಮುಂದೆ ನೋಡಬೇಕೆಂದು ಸದನ ಮತ್ತು ರಾಷ್ಟ್ರಕ್ಕೆ ತಿಳಿಸಿದರು. ಅಲ್ಲದೆ, ಅನೇಕ ಸಾಮಾನ್ಯ ಪ್ರಸ್ತಾವಗಳನ್ನು ಮಾಡಿದ್ದಾಗಿಯೂ ಅವರು ಹೇಳಿದರು. ಅವರು ಹೇಳಿರುವುದನ್ನು ನಾನು ಟಿಪ್ಪಣಿ ಮಾಡಿಕೊಳ್ಳಬೇಕಾಯಿತು. ಇದರಿಂದಾಗಿ, ನಾನು ಅವರಿಗೆ ಅನ್ಯಾಯ ಮಾಡುತ್ತಿಲ್ಲವೆಂದು ಭಾವಿಸುತ್ತೇನೆ. ಆಮದು ಉತ್ತೇಜನದ ಬಗ್ಗೆ ತೆಗೆದುಕೊಂಡ ಕ್ರಮಗಳನ್ನು ಅವರು ವಿವರಿಸಿದರು. ಅವರು ಹೇಳಿದ ವಿಷಯ ಸರಿಯಾಗಿರುವುದೆಂದು ಆಶಿಸುತ್ತೇನೆ. ಅವರು ಪ್ರಸ್ತಾಪಿಸಿದ ಎಲ್ಲಾ ಅಂಶಗಳ ಬಗ್ಗೆ ಪ್ರಾಯಶಃ ಉತ್ತರಿಸಲು ನನಗೆ ಸಾಧ್ಯವಾಗುವುದಿಲ್ಲವೆಂದು ಗೊತ್ತಿದೆ. ಅವರ ಮಂತ್ರಾಲಯವೇ ಪ್ರಕಟಿಸುವ ವಾಣಿಜ್ಯ ಮತ್ತು ಕೈಗಾರಿಕಾ ಸಂಚಿಕೆಯ ಮಾರ್ಚ್ ತಿಂಗಳ ಪ್ರತಿಯಲ್ಲಿ ಪ್ರಕಟವಾದ ಕೆಲವು ಸಂಗತಿಗಳನ್ನು ಪಡೆಯುವ ಅವಕಾಶ ನನಗೆ ಬಂದಿದ್ದು, ಅವುಗಳು ನನ್ನ ಮುಂದಿವೆ. ಕಾಪುಪಟ್ಟಿಗಳೂ ಒಳಗೊಂಡಂತೆ ಎಲ್ಲಾ ರೀತಿಯ ಯಂತ್ರೋಪಕರಣಗಳ ಆಮದಿಗೆ ಸಂಬಂಧಪಟ್ಟ ಗೋಳಿನಕಥೆ ಪುಟ 415 ರಲ್ಲಿದೆ. ಅದರಲ್ಲಿರುವ ಅಂಕಿ ಅಂಶಗಳು:

| | |
|---|---|
| 1948-49 | 81.56 ಕೋಟಿ ರೂ.ಗಳು |
| 1949-50 | 105.51 ಕೋಟಿ ರೂ.ಗಳು |
| 1950-51 | 93.00 ಕೋಟಿ ರೂ.ಗಳು |
| 1951-52 | 104.00 ಕೋಟಿ ರೂ.ಗಳು |
| 1952-53 | 87.87 ಕೋಟಿ ರೂ.ಗಳು |

ಏಪ್ರಿಲ್‌ನಿಂದ ಅಕ್ಟೋಬರ್‌ವರೆಗಿನ ಅಂಕಿ 47.72 ಕೋಟಿ ರೂಪಾಯಿಗಳು.

ಮಾನ್ಯ ವಾಣಿಜ್ಯ ಸಚಿವರು, ಸಾಮಾನ್ಯವಾಗಿ ಏನು ಒಂದು ಸ್ಥೂಲ ಹೇಳಿಕೆ ನೀಡಿದರೋ, ಆ ಹೇಳಿಕೆಯನ್ನು ಅವರು ನೀಡಬಾರದಿತ್ತೆಂಬುದು ನನ್ನ ಅನಿಸಿಕೆ. ಕೇವಲ ಒಂದು ಪ್ರಕರಣದ ಅಂಕಿಅಂಶಗಳು ನನ್ನ ಬಳಿ ಇದ್ದುದರಿಂದ ಆ ಒಂದು ಪ್ರಕರಣವನ್ನಷ್ಟೇ

* ವಾಣಿಜ್ಯ ಮತ್ತು ಕೈಗಾರಿಕಾ ಮಂತ್ರಾಲಯದ 1954ರ ಅನುದಾನಗಳ ಬೇಡಿಕೆಯ ಮೇಲಿನ ಚರ್ಚೆಯಿಂದ: ಲೋ.ಸ. 14ನೇ ಏಪ್ರಿಲ್ 1954 ಸಿ.ಸಿ. 4739 - 4750.

ಇಲ್ಲಿ ಉದಾಹರಿಸಿದ್ದೇನೆ. ನಮ್ಮ ಉತ್ಪಾದಕ ಸಾಮಗ್ರಿಗಳು ಅಥವಾ ಬೃಹತ್ ಕೈಗಾರಿಕೆಗಳು ಯಂತ್ರೋಪಕರಣಗಳ ಬದಲಾವಣೆಗಾಗಿ ಹೇಗೆ ಪರಿತಪಿಸುತ್ತವೆ ಎಂಬುದನ್ನು ಇದು ರೂಪಿಸುತ್ತದೆ. ಮೇಲಾಗಿ ಈ ಅಂಕಿಅಂಶಗಳು ಮಂತ್ರಾಲಯದ ಹೆಸರಿನಲ್ಲಿಯೇ ಪ್ರಕಟವಾಗಿವೆ. ಯಂತ್ರೋಪಕರಣಗಳ ಆಮದು ವ್ಯಾಪಾರದ ಸಂವರ್ಧನೆ ಕುರಿತಂತೆ ಮಾನ್ಯ ಸಚಿವರು ನೀಡಿದ ಹೇಳಿಕೆಯನ್ನಷ್ಟೇ ಕುರಿತು ನಾನು ಮಾತನಾಡುತ್ತಿದ್ದೇನೆ. ಅವರ ಈ ಹೇಳಿಕೆ ಈಗಾಗಲೇ ದಾಖಲೆಗೂ ಹೋಗಿದೆ. ಮೊನ್ನೆಯ ದಿನ, ಚರ್ಚೆಯನ್ನು ಪ್ರಾರಂಭಿಸುತ್ತಾ ಶ್ರೀ ಬನ್ಸಾಲ್‌ರವರು ನನ್ನ ಹೆಸರಿನಲ್ಲಿದ್ದ ಖೋತಾ ಸೂಚನೆಯನ್ನು ಉಲ್ಲೇಖಿಸಿ ಆಪಾದನೆ ಮಾಡಿದರು. ಈ ಸದನ ಹಾಗೂ ಬಹುತೇಕ ಇತರ ಸದನಗಳ ಸತ್ಸಂಪ್ರದಾಯದಂತೆ ಔಪಚಾರಿಕವಾಗಿ ವಿರೋಧಪಕ್ಷವೇ ಇಂಥ ಚರ್ಚೆಗಳನ್ನು ಖೋತಾ ಸೂಚನೆಯ ಮೂಲಕ ಪ್ರಾರಂಭಿಸುವುದು ಹಾಗೂ ಈ ಖೋತಾ ಸೂಚನೆಯನ್ನು ವಿರೋಧಪಕ್ಷವಷ್ಟೇ ನೀಡುವುದೆಂಬ ಮಾಹಿತಿಯ ಕಡೆಗೆ ನಿಮ್ಮ ಗಮನವನ್ನು ಸೆಳೆಯಲು ಇಚ್ಛಿಸುತ್ತೇನೆ. ಆದರೂ ನನ್ನ ಹೆಸರಿನ ಖೋತಾ ಸೂಚನೆಯನ್ನು ಪ್ರಸ್ತಾಪಿಸಲು ನನ್ನ ಸ್ನೇಹಿತರಿಗೆ ದೊರೆತ ಅವಕಾಶದಿಂದ ನನಗೆ ಬೇಸರವಾಗುತ್ತಿಲ್ಲ. ಆರ್ಡರ್ ಪೇಪರ್ ಪ್ರಕಾರ ಇದುವರೆಗೂ 1329 ಖೋತಾ ಸೂಚನೆಗಳನ್ನು ನೀಡಲಾಗಿದೆ. ಒಂದು ಸಮಗ್ರ ವ್ಯಾಪಾರ ನೀತಿಯ ಕೊರತೆಯಿಂದಾಗಿ ನಮ್ಮ ವಿದೇಶೀ ವ್ಯಾಪಾರ ಎಲ್ಲಾ ರೀತಿಯಿಂದಲೂ ಕುಂಠಿತವಾಗಿದೆ ಎಂಬುದೇ ನನ್ನ ಖೋತಾ ಸೂಚನೆಯ ಉದ್ದೇಶವಾಗಿದ್ದು, ಅದಕ್ಕೆ ಸನ್ಮಾನ್ಯ ಸದಸ್ಯರಾದ ಶ್ರೀ ಬನ್ಸಾಲ್‌ರವರು ಹೇಳುತ್ತಾರೆ.

> "ಈ ಅತ್ಯಂತ ಅವಶ್ಯಕ ಸಾಮಗ್ರಿಗಳ ವಿಷಯದಲ್ಲಿ ರಾಷ್ಟ್ರವು ಸ್ವಾವಲಂಬಿ ಆಗಬೇಕೆಂಬುದು ಈ ಗೌರವಾನ್ವಿತ ಸದನದ ನೀತಿ. ಅತ್ಯಂತ ಅವಶ್ಯಕ ಸಾಮಗ್ರಿಗಳ ಸ್ವಾಲಂಬನೆಯಲ್ಲಿ ರಾಷ್ಟ್ರ ಸಾಧನೆ ಮಾಡಿದ್ದಕ್ಕೆ ಸರ್ಕಾರಕ್ಕೆ ಅಭಿನಂದನೆಯನ್ನು ಸಲ್ಲಿಸುವುದಕ್ಕೆ ಬದಲಾಗಿ ನನ್ನ ಸ್ನೇಹಿತರು ಖೋತಾ ಸೂಚನೆಯನ್ನು ಮಂಡಿಸಿದ್ದಾರೆ."

ಒಂದು ನಿರ್ದಿಷ್ಟ ಅಂಶವನ್ನು ಚರ್ಚಿಸುವುದೇ ಖೋತಾ ಸೂಚನೆಯ ಉದ್ದೇಶವಾಗಿದ್ದು, ಅದರಲ್ಲಿ ಖಂಡನೀಯ ಅಂಶಗಳು ಇರಬೇಕೆಂದೇನೂ ಇಲ್ಲ ಎನ್ನುವುದನ್ನು ನನ್ನ ಸ್ನೇಹಿತರಿಗೆ ತಿಳಿಯಬಯಸುತ್ತೇನೆ. ವಾಸ್ತವವಾಗಿ ಮೂರು ರೀತಿಯ ಖೋತಾ ಸೂಚನೆಗಳಿವೆ. ಶ್ರೀ ಬನ್ಸಾಲ್‌ರವರು ಗಮನಿಸಿದಂಥ ಅಂಶಗಳು ಯಾವುವು ಎಂಬುದನ್ನು ಮೊದಲು ನಾನು ಪರಿಶೀಲಿಸಬೇಕಾಗಿದೆ. ವಾಣಿಜ್ಯ ವ್ಯವಹಾರದಲ್ಲಿ ಕುಂಠಿತವಾಗಿರುವುದನ್ನು ಅವರು ಒಪ್ಪಿಕೊಂಡಿದ್ದಾರೆ. ಈ ಇಳಿಮುಖಕ್ಕೆ ಅನೇಕ ಕಾರಣಗಳಿವೆ. ಅವುಗಳು ಆಹಾರ ಧಾನ್ಯಗಳ ಆಮದಿನಲ್ಲಿ ಕುಂಠಿತವಾಗಿರುವುದು. ಕಚ್ಚಾ ಸೆಣಬಿನ ಆಮದು ಇತ್ಯಾದಿಗಳು, ಅಲ್ಲದೆ, 1954ರ ಅವಧಿಯಲ್ಲಿ ವಾಣಿಜ್ಯ ನಿಬಂಧನೆಗಳು ನಮ್ಮ ರಾಷ್ಟ್ರದ ಹಿತದ ವಿರುದ್ಧ ಪರಿಣಾಮ ಬೀರಿದವು ಎಂಬ ಅಂಶವನ್ನು ನನ್ನ ಸ್ನೇಹಿತರಾದ ಮಾನ್ಯ ವಾಣಿಜ್ಯ ಸಚಿವರು ಈಗ ತಾನೆ ಪ್ರಸ್ತಾಪಿಸಿದರು. ಒಂದು ಅಂಶದ ಬಗ್ಗೆ ನಾನು ಸಂಕ್ಷಿಪ್ತವಾಗಿ ಇಲ್ಲಿ ಪ್ರಸ್ತಾಪಿಸಲಿದ್ದು

ಆ ಅಂಶ ಮಾನ್ಯ ಸಚಿವರಿಗೆ ಯೋಗ್ಯವೆಂದು ಕಂಡುಬಂದಲ್ಲಿ, ಅದಕ್ಕೆ ಅವರು ಉತ್ತರ ನೀಡಬಹುದು. 1953-54ರ ಮಂತ್ರಾಲಯದ ವರದಿಯು ನನ್ನ ಈ ಅಂಶಕ್ಕೆ ಪುಷ್ಟಿಕೊಡುತ್ತಿದ್ದು, ವಿದೇಶೀ ವ್ಯಾಪಾರ ಸದೃಢವಾಗಿರುವುದರ ಬಗ್ಗೆ ಪ್ರಸ್ತಾಪಿಸಿರುವುದನ್ನು ಪುಟ 2 ರಲ್ಲಿ ಕಾಣಬಹುದು.

"ರಫ್ತು ಮೌಲ್ಯ ಮೊದಲಿಗಿಂತಲೂ ಕಡಿಮೆಯಾಗಿದ್ದರೂ, ವರ್ಷದ ಕೊನೆಯಲ್ಲಿ ಅದು ಆರೋಗ್ಯಕರ ಏರಿಕೆ ಬೆಳವಣಿಗೆಯನ್ನು ತೋರಿದೆ. ಒಟ್ಟಾರೆ, 1953ರ ಅವಧಿಯಲ್ಲಿ ರಾಷ್ಟ್ರದ ವಾಣಿಜ್ಯ ಸಮತೋಲನದಲ್ಲಿ ಅತ್ಯಲ್ಪ ಕೊರತೆ ಉಂಟಾಗಿದ್ದರೂ ಇನ್ನೊಂದು ಕಡೆ ಅನುಕೂಲಕರ ಸಮತೋಲನ ಉಂಟಾಗಿದೆ. ಇದರಿಂದಾಗಿ ನಮ್ಮ ಮೀಸಲುಗಳನ್ನು ಬಳಸದೇ ನಮ್ಮ ಚಾಲ್ತಿಗಳಿಕೆಗಳಿಂದ ವಿದೇಶಿ ವಿನಿಮಯ ಅವಶ್ಯಕತೆಗಳನ್ನು ಭರಿಸಲು ಸಾಧ್ಯವಾದಂತಾಗಿದೆ."

ನನ್ನ ಪ್ರಶ್ನೆ ಇಷ್ಟೇ? ವಾಣಿಜ್ಯ ನಿಬಂಧನೆಗಳನ್ನು ಸರಿಪಡಿಸುವ ಹೊಣೆಗಾರಿಕೆ ಈ ಮಂತ್ರಾಲಯಕ್ಕೆ ಇದೆಯೋ ಅಥವಾ ಇಲ್ಲವೋ ಎಂಬುದು. ವಾಣಿಜ್ಯ ನಿಬಂಧನೆಗಳು ನಮ್ಮ ವಿರುದ್ಧ ಏಕೆ ಪರಿಣಾಮ ಬೀರಿದವು? ನನ್ನ ಸನ್ಮಾನ್ಯ ಸ್ನೇಹಿತರು ಮಾರಾಟಗಾರರ ಮಾರುಕಟ್ಟೆಯು ಖರೀದಿಸುವವರ ಮಾರುಕಟ್ಟೆಯಾಗುತ್ತಿರುವ ಬಗ್ಗೆ ಮಾತನಾಡುತ್ತಿದ್ದರು. ವಾಣಿಜ್ಯ ನಿಬಂಧನೆಗಳು ಈ ರಾಷ್ಟ್ರದ ಹಿತಕ್ಕೆ ಹೇಗೆ ವಿರುದ್ಧವಾದವು ಹಾಗೂ ನಾನು ಉದಾಹರಿಸಿದ ವರದಿಯನ್ನು ಒಪ್ಪಿಕೊಂಡಿರುವ ಹಿನ್ನೆಲೆಯಲ್ಲಿ ಸರ್ಕಾರ ಯಾವ ಕ್ರಮಗಳನ್ನು ತೆಗೆದುಕೊಂಡಿದೆ ಎನ್ನುವುದನ್ನು ತಿಳಿದುಕೊಳ್ಳುವ ಹಕ್ಕು ಈ ರಾಷ್ಟ್ರಕ್ಕಿದೆ. ಸನ್ಮಾನ್ಯ ಸಚಿವರ ಪಕ್ಷಕ್ಕೆ ಶ್ರೀ ಬನ್ಸಾಲ್‌ರವರು ಸೇರಿರುವುದರಿಂದ ಅವರ ಹೇಳಿಕೆಯನ್ನು ಸಚಿವರು ಪರಿಶೀಲಿಸದಿರುವುದು ದುರದೃಷ್ಟಕರ.

ನಾನು ವಿಶ್ಲೇಷಣೆ ಮಾಡಿದಂಥ ಕೆಲವು ಅಂಕಿಅಂಶಗಳು ಇಲ್ಲಿವೆ. ಈ ರಾಷ್ಟ್ರದ ಆಮದಿನಲ್ಲಿ ಇಳಿಮುಖವಾಗಿದ್ದು ಅದರ ಪರಿಣಾಮಗಳನ್ನು, ಜರ್ನಲ್ ಆಫ್ ಟ್ರೇಡ್ ಅಂಡ್ ಇಂಡಸ್ಟ್ರಿಯ ಮಾರ್ಚ್ 1954ರ ಸಂಚಿಕೆಯಿಂದ ಪಟ್ಟಿ ಮಾಡಿದ್ದೇನೆ.

ಯಂತ್ರೋಪಕರಣಗಳ ಅಂಕಿಗಳು 1951-52ರ 104.31 ಕೋಟಿ ರೂಪಾಯಿಗಳಿಗೆ ಪ್ರತಿಯಾಗಿ 1952-53ರಲ್ಲಿ 87.87 ಕೋಟಿ ರೂಪಾಯಿಗಳು ಮತ್ತು ಏಪ್ರಿಲ್‌ನಿಂದ ಅಕ್ಟೋಬರ್ 1953ರ ವರಗೆ 42.72 ಕೋಟಿ ರೂಪಾಯಿಗಳು. ಲೋಹಗಳ ಅಂಕಿಗಳು 1951-52ರ 20.66 ಕೋಟಿ ರೂಪಾಯಿಗಳಿಗೆ ಪ್ರತಿಯಾಗಿ 1952-53ರಲ್ಲಿ 19.30 ಕೋಟಿ ರೂಪಾಯಿಗಳು ಮತ್ತು 1953ರ ಏಪ್ರಿಲ್‌ನಿಂದ ಅಕ್ಟೋಬರ್‌ರವರೆಗೆ 8.63 ಕೋಟಿ ರೂಪಾಯಿಗಳು.

ರಾಸಾಯನಿಕ ವಸ್ತುಗಳ ಅಂಕಿಗಳು - 1951-52ರ 19.20 ಕೋಟಿ ರೂಪಾಯಿಗಳಿಗೆ ಪ್ರತಿಯಾಗಿ 1952-53 ರಲ್ಲಿ 12.68 ಕೋಟಿ ರೂಪಾಯಿಗಳು ಮತ್ತು 1953ರ ಏಪ್ರಿಲ್‌ನಿಂದ ಅಕ್ಟೋಬರ್‌ವರೆಗೆ 7.25 ಕೋಟಿ ರೂಪಾಯಿಗಳು.

ಈಗ ರಫ್ತುಗಳ ಕಡೆಗೆ ಬರುತ್ತಿದ್ದೇನೆ. 1950-51 ರಲ್ಲಿ ರಫ್ತುಗಳ ಪ್ರವೃತ್ತಿ ಹೇಗಿತ್ತು ಎಂಬುದನ್ನು ನೋಡೋಣ. ಬಟ್ಟೆಗಳ ರಫ್ತು 1224 ಮಿಲಿಯನ್ ಗಜಗಳಷ್ಟಿದ್ದು, ಅದರ ಮೌಲ್ಯ 112.17 ಕೋಟಿ ರೂಪಾಯಿಗಳಾಗಿತ್ತು. 1951-52 ರಲ್ಲಿ ಅದು 388 ಮಿಲಿಯನ್ ಗಳು ಮತ್ತು ಮೌಲ್ಯ 42.95 ಕೋಟಿ ರೂಪಾಯಿಗಳು. 1952-53 ರಲ್ಲಿ ಅದು 565 ಮಿಲಿಯನ್ ಗಜಗಳು, ಮೌಲ್ಯ 53.19 ಕೋಟಿ ರೂಪಾಯಿಗಳು. ಅಂದರೆ ಈ ಮೂರು ವರ್ಷಗಳಲ್ಲಿ, ಪ್ರಮಾಣ ಮತ್ತು ಬೆಲೆ ಹೆಚ್ಚು ಕಮ್ಮಿ ಅರ್ಧದಷ್ಟಕ್ಕೆ ಬಂದಿರುತ್ತದೆ. ಗೋಣಿಚೀಲಗಳು ಮತ್ತು ಚಹಾದ ಬಗ್ಗೆಯೂ ನನ್ನಲ್ಲಿ ಅಂಕಿಅಂಶಗಳಿವೆ. ಅಲ್ಲಿಯೂ ಕೂಡ ಇದೇ ಕಥೆ ಮುಂದುವರೆದಿದೆ. ಆಮದು ಮತ್ತು ರಫ್ತು ಸೂಚ್ಯಂಕದ ಅಂಕಿಅಂಶಗಳ ಕುರಿತು ಶ್ರೀ ಬನ್ಸಾಲ್ ಅವರು ಮಾತನಾಡಿದರು. 1951-52 ರ ಆಮದು ಸೂಚ್ಯಂಕದ ಅಂಕಿಅಂಶಗಳ ವಿಶ್ಲೇಷಣೆ ನನ್ನಲ್ಲಿದ್ದು ಪ್ರಮಾಣ 108, ಬೆಲೆ 147 ಇರುತ್ತದೆ. 1952-53 ರಲ್ಲಿ ಅದು 74 ಮತ್ತು 128 ಇತ್ತು. ನವೆಂಬರ್ 1953ರ ವರೆಗೆ 48 ಮತ್ತು 110 ಇತ್ತು. ರಫ್ತು ಸೂಚ್ಯಂಕಕ್ಕೆ ಸಂಬಂಧಿಸಿದಂತೆ, ಅಂಕಿ ಅಂಶಗಳು, 1951-52 ರಲ್ಲಿ 39 ಮತ್ತು 178, 1952-53 ರಲ್ಲಿ 94 ಮತ್ತು 116 ಹಾಗೂ 1953ರ ನವೆಂಬರ್ ತಿಂಗಳವರೆಗೆ ತಾತ್ಕಾಲಿಕ ಅಂಕಿಅಂಶಗಳು 106 ಮತ್ತು 107 ಇದ್ದವು. ವಾಣಿಜ್ಯ ಮತ್ತು ಕೈಗಾರಿಕಾ ಮಂತ್ರಾಲಯವು ಉತ್ತರಿಸಬೇಕಾದಂಥ ಅಂಶ ಇಲ್ಲಿದೆ. ಏಕರೂಪದ ಇಳಿತ ಇಲ್ಲಿ ಏಕೆ ಆಯಿತು? ವಾಣಿಜ್ಯ ಮತ್ತು ಕೈಗಾರಿಕಾ ಸಚಿವರಿಂದ ಉತ್ತರವನ್ನು ಪಡೆಯುವ ಹಕ್ಕು ಈ ರಾಷ್ಟ್ರಕ್ಕಿದೆ ಎಂದು ನನಗನಿಸುತ್ತಿದ್ದು ನನಗಿಂತ ಮೊದಲು ಮಾತನಾಡಿದವರು ಈ ಎಲ್ಲಾ ಅಂಶಗಳನ್ನು ಪ್ರಸ್ತುತ ಪಡಿಸದಿರುವುದಕ್ಕೆ ನನಗೆ ವ್ಯಥೆಯಾಗುತ್ತದೆ.

ಈ ಚರ್ಚೆಯಲ್ಲಿ ಖಾಸಗೀ ಕ್ಷೇತ್ರದ ಕೈಗಾರಿಕಾ ಬಗ್ಗೆಯೂ ಸ್ವಲ್ಪ ಪ್ರಸ್ತಾಪಿಸಲಾಗಿದೆ. ಭಾರತ ವಾಣಿಜ್ಯ ಮಂಡಲಿಯ ಒಕ್ಕೂಟದ ಕಾರ್ಯದರ್ಶಿಯಾಗಿ ವಿಶೇಷ ಸ್ಥಾನವನ್ನು ಹೊಂದಿದ ಶ್ರೀ ಬನ್ಸಾಲ್ ಅವರು ಮಾತನಾಡುವಾಗ ಈ ಸಂಬಂಧದಲ್ಲಿ ಏನಾದರೂ ಹೇಳುತ್ತಾರೆಂದು ನಾನು ಯೋಚಿಸಿದ್ದೆ. ಆದರೆ ಅವರು ಆ ಬಗ್ಗೆ ಹೇಳದಿದ್ದಕ್ಕೆ ನನಗೆ ವಿಷಾದ ಉಂಟು ಮಾಡಿದೆ: 1953-54ರ ವಾರ್ಷಿಕ ವರದಿ ನನ್ನಲ್ಲಿದ್ದು, ಆ ವರದಿಯ ಪುಟ 8 ರಲ್ಲಿ ಒಂದು ಮುಖ್ಯವಾದ ಹೇಳಿಕೆ ಈ ರೀತಿ ಇರುತ್ತದೆ:

> "ಮಂತ್ರಾಲಯದ ವ್ಯಾಪ್ತಿಯೊಳಗೆ ಬರಲಿರುವ ಕೈಗಾರಿಕೆಗಳ ಒಡೆತನ ಮತ್ತು ಆಡಳಿತ ಖಾಸಗೀಯವರ ಕೈಯಲ್ಲಿರುವುದರಿಂದ ಅವುಗಳ ಅಭಿವೃದ್ಧಿ ಮತ್ತು ವಿಸ್ತರಣೆಗಾಗಿ ಪ್ರಭಾವ ಬೀರುವ ಸರ್ಕಾರದ ಪಾತ್ರ ಜಟಿಲವಾದುದು".

ನಂತರ ಪುಟ 5 ರಲ್ಲಿ ವರದಿ ಹೇಳುತ್ತದೆ:

> "ನಿಯಂತ್ರಣದ ವ್ಯಾಪಕ ಅಧಿಕಾರಗಳು ಸರ್ಕಾರಕ್ಕೆ ಇರುವುದು ನಿಸ್ಸಂದೇಹ. ಆದರೂ, ಕಾನೂನಿನಂತೆ ಅಂಥ ನಿಯಂತ್ರಣಗಳನ್ನು ಚಲಾಯಿಸುವುದು ಅಸಹಜ ವರ್ತನೆಯಾಗುತ್ತದೆ. ಕೆಲವು ಕಾರ್ಯಚಟುವಟಿಕೆಗಳನ್ನು ಅವು ನಿಷೇಧಿಸಬಹುದಾದರೂ ಸಾಂಪ್ರದಾಯಿಕ ರೀತಿಯಲ್ಲಿ ಚಲಾಯಿಸಬಹುದಾದವುಗಳನ್ನಲ್ಲ. ಹಾಗಿದ್ದಲ್ಲಿ ಅವು ನಿರೀಕ್ಷಿತ ಮಟ್ಟದಲ್ಲಿ ಸಕಾರಾತ್ಮಕ ಪರಿಣಾಮಗಳನ್ನು ತರಲಾರವು"

ಸಾರ್ವಜನಿಕ ಹಾಗೂ ಖಾಸಗಿ ವಲಯಕ್ಕೆ ಒದಗಿಸಲಾದ ಯೋಜಿತ ಹಣಕಾಸಿನ ಕ್ರಮದ ಬಗ್ಗೆ ನಾನು ಲೆಕ್ಕ ಮಾಡಿದ್ದು ಅದರ ಅಂಕಿ ಅಂಶಗಳು ನನ್ನಲ್ಲಿವೆ:-

| | |
|---|---|
| ಕೈಗಾರಿಕೆಗಳ ವಿಸ್ತರಣೆ | ರೂ. 223 ಕೋಟಿ. |
| ಆಧುನಿಕರಣ ಮತ್ತು ಪ್ರತಿಸ್ಥಾಪನೆ | ರೂ. 150 ಕೋಟಿ |
| ದುಡಿಮೆ ಬಂಡವಾಳ | ರೂ. 150 ಕೋಟಿ |
| ಪರಿಗಣಿಸದಿರುವ ಸವಕಳಿ | ರೂ. 80 ಕೋಟಿ |
| ಒಟ್ಟು | ರೂ. 613 ಕೋಟಿ |

ಸಂಪನ್ಮೂಲಗಳನ್ನೂ ಕೂಡ ಪಟ್ಟಿ ಮಾಡಲಾಗಿದೆ:

| | |
|---|---|
| ವಿದೇಶೀ ಬಂಡವಾಳ ಹೂಡಿಕೆ | ರೂ. 100 ಕೋಟಿ |
| ಕಾರ್ಪೊರೇಟ್ ಉಳಿತಾಯಗಳು | ರೂ. 200 ಕೋಟಿ |
| ಹೊಸ ಹೂಡಿಕೆಗಳು | ರೂ. 90 ಕೋಟಿ |
| ಸಾರ್ವಜನಿಕ ವಲಯದ ಸಹಾಯಧನ | ರೂ. 5 ಕೋಟಿ |
| ಅಧಿಕ ಲಾಭಾಂಶ ತೆರಿಗೆ ರೇವಣಿ ಗಳಿಸಿದ ಮರುಪಾವತಿ | ರೂ. 60 ಕೋಟಿ |
| ಕೈಗಾರಿಕಾ ಹಣಕಾಸು ನಿಗಮ ಬ್ಯಾಂಕುಗಳು ಮತ್ತು ಇತರೆ | ರೂ. 20 ಕೋಟಿ |
| ಸಂಪನ್ಮೂಲಗಳ ಅಲ್ಪಾವಧಿ ಹಣಕಾಸು | ರೂ. 158 ಕೋಟಿ |
| ಒಟ್ಟು | ರೂ. 633 ಕೋಟಿ |

ಮಾನ್ಯ ವಾಣಿಜ್ಯ ಮತ್ತು ಕೈಗಾರಿಕಾ ಸಚಿವರಾದ ಶ್ರೀ ಕೃಷ್ಣಮಾಚಾರಿಯವರಲ್ಲಿ ಒಂದು ಪ್ರಶ್ನೆ ಕೇಳುತ್ತೇನೆ; ಈ ಕ್ಷಣದವರೆಗೆ, ಈ ಸದನ ಮತ್ತು ಸಾಮಾನ್ಯರ್ಥದಲ್ಲಿ ಈ

ರಾಷ್ಟ್ರ ಯೋಜನೆಯ ಹಿಂದಿನ ಮೂರು ವರ್ಷಗಳ ಅವಧಿಯಲ್ಲಿ ನಿಶ್ಚಿತ ಗುರಿಗಳನ್ನು ತಲುಪಲು ಮಾಡಿದ ಪ್ರಯತ್ನಗಳ ಅಥವಾ ಸಂಪನ್ಮೂಲಗಳನ್ನು ಕ್ರೋಢೀಕರಿಸಿಕೊಳ್ಳುವ ಅಥವಾ ಕ್ರೋಡೀಕರಿಸಿಕೊಳ್ಳದಿರುವ ಬಗ್ಗೆ ಆಧಾರ ಸಹಿತವಾದ ವಿವರಣೆ ಇಲ್ಲವೇ? ವಾಣಿಜ್ಯ ಮತ್ತು ಕೈಗಾರಿಕಾ ಮಂತ್ರಾಲಯದ ಕಾರ್ಯಚಟುವಟಿಕೆಗಳನ್ನು ತೀರ್ಮಾನಿಸುವುದಕ್ಕೂ ಮುಂಚೆ ಈ ಮಾಹಿತಿ ಸದನಕ್ಕೆ ಅತೀ ಮುಖ್ಯವೆಂದು ನಾನು ಭಾವಿಸುತ್ತೇನೆ. ಇದರಿಂದಾಗಿ ಈ ಮಂತ್ರಾಲಯದ ಘನತೆ ಮತ್ತಷ್ಟು ಹೆಚ್ಚುವುದೆಂದು ನಾನು ಭಾವಿಸುತ್ತೇನೆ.

ಉತ್ಪಾದನಾ ಹೆಚ್ಚಳದ ಬಗ್ಗೆ ವಿಶೇಷವಾಗಿ ಹೇಳಲಾಗಿದೆ. ವಾಣಿಜ್ಯ ಮತ್ತು ಕೈಗಾರಿಕಾ ಮಂತ್ರಾಲಯದ 1953-54ರ ವಾರ್ಷಿಕ ವರದಿಯ ಅನುಬಂಧಗಳಲ್ಲಿ ನಮೂದಾಗಿರುವ ಉತ್ಪಾದನಾ ಅಂಕಿಅಂಶಗಳನ್ನು ನಾನು ಬಹಳ ಎಚ್ಚರಿಕೆಯಿಂದ ವಿಶ್ಲೇಷಣೆ ಮಾಡಿದ್ದೇನೆ. ಈ ವಾರ್ಷಿಕ ವರದಿ 1952 ಮತ್ತು 1953ರ ಕ್ಯಾಲೆಂಡರ್ ವರ್ಷಗಳಿಗೆ ಸಂಬಂಧಪಟ್ಟಿರುತ್ತದೆ. ನನ್ನ ವಿಶ್ಲೇಷಣೆ ಪ್ರಕಾರ, ಅಂದರೆ ಯೋಜನಾ ಅವಧಿಯ ಮೂರನೇ ವರ್ಷದಲ್ಲಿ, ಅಸ್ತಿತ್ವದಲ್ಲಿರುವ ಘಟಕಗಳ ಉತ್ಪಾದನೆಯಲ್ಲಿ ಗಣನೀಯ ಕಡಿತ ಉಂಟಾಗಿದೆ. ಸಾಧ್ಯವಾದಷ್ಟು, ಅನುಬಂಧಗಳಲ್ಲಿನ ಎಲ್ಲಾ ಮಾಹಿತಿಯನ್ನು, ವರ್ಗೀಕರಣ ಮಾಡಿರುತ್ತೇನೆ.

ರಾಸಾಯನಿಕಗಳ ವರ್ಗದಲ್ಲಿ, ಕಾರ್ಬಾಲಿಕ್ ಆಮ್ಲ, ಕಪ್ಪು ರಾಳ (ಟಾರೆಣ್ಣೆ), ರಸ್ತೆ ಟಾರು ಮತ್ತು ನ್ಯಾಪ್ತಲೀನ್ ಕೈಗಾರಿಕೆಗಳು ಕಡಿಮೆ ಉತ್ಪಾದನೆ ಮಾಡಿವೆ; ಔಷಧಿಗಳ ವರ್ಗದಲ್ಲಿ ಕೆಫೀನ್, ಸ್ಟ್ರಿಕ್‌ನಿನ್, ಶಾರ್ಕ್ ಲಿವರ್ ಎಣ್ಣೆ ಮತ್ತು ಗೆಲನಿಕಲ್ ಕೈಗಾರಿಕೆಗಳಲ್ಲಿ ಅದೇ ಸ್ಥಿತಿ ಇದೆ ಸಾಬೂನುಗಳ ವರ್ಗದಲ್ಲಿ ವ್ಯವಸ್ಥಿತ ಘಟಕಗಳಲ್ಲಿನ ಸಾಬೂನು ಉತ್ಪಾದನೆ ಗಣನೀಯವಾಗಿ ಕಡಿಮೆಯಾಗಿದೆ; ಕಾಂತಿವರ್ಧಕ ವರ್ಗಗಳಲ್ಲಿ ಹಲ್ಲುಪುಡಿಗಳು, ಮುಖಪೌಡರ್‌ಗಳು ಮತ್ತು ಮುಖ ಕ್ರೀಮುಗಳ ಉತ್ಪಾದನೆಯಲ್ಲಿ ಇಳಿಮುಖವಾಗಿದೆ; ಸಿಗರೇಟುಗಳ ವರ್ಗದಲ್ಲಿ ಒಂದು ವರ್ಷದಲ್ಲಿಯೇ ಎರಡು ಸಾವಿರ ಮಿಲಿಯನ್ ಸಿಗರೇಟುಗಳ ಉತ್ಪಾದನೆ ಕಡಿಮೆಯಾಗಿದೆ; ಬಣ್ಣಗಳ ವರ್ಗದಲ್ಲಿ ನಿರ್ದಿಷ್ಟ ದರ್ಜೆಯ ಬಣ್ಣಗಳು, ಗಾಜು ಮತ್ತು ಗಾಜಿನ ಉಪಕರಣಗಳ ವರ್ಗದಲ್ಲಿ ಬಾಟಲಿಗಳು, ಪ್ರಯೋಗಶಾಲಾ ಗಾಜಿನ ಉಪಕರಣಗಳು ಮತ್ತು ಗಾಜಿನದೀಪ ಉಪಕರಣಗಳು; ಮಟ್ಟಿನ ಸಾಮಗ್ರಿಗಳಲ್ಲಿ ಬಿರಸಾದ ಕಲ್ನಾರು ಸಿಮೆಂಟ್ ತಗಡುಗಳನ್ನು ಹೊರತುಪಡಿಸಿ, ಪಿಂಗಾಣಿ ಸಾಮಗ್ರಿಗಳು, ವಿದ್ಯುತ್ ಪಿಂಗಾಣಿ ಸಾಮಗ್ರಿಗಳು, ಮತ್ತು ದರ್ಶಕಗಳು; ಪ್ಲಾಸ್ಟಿಕ್ ವರ್ಗಗಳಲ್ಲಿ ದ್ರಾವಣ ಅಚ್ಚು ಮತ್ತು ವಾಯು ಸಂಕೋಚದ ಅಚ್ಚು: ಚರ್ಮ ಕೈಗಾರಿಕೆ ವರ್ಗಗಳಲ್ಲಿ ಪ್ರಾಣಿಗಳ ಚರ್ಮ ಹದ ಮಾಡುವುದು ಮತ್ತು ಪಾಶ್ಚಾತ್ಯ ಮಾದರಿಯ ಪಾದರಕ್ಷೆಗಳು: ಹಾಗೂ ಗಡಸು ರಬ್ಬರ್ ವರ್ಗಗಳಲ್ಲಿ ಉತ್ಪಾದನೆ ಕಡಿಮೆಯಾಗಿರುತ್ತದೆ. ಪ್ಲೈವುಡ್ ಕೈಗಾರಿಕೆಯಲ್ಲಿ ಟೀ ಚೆಸ್ಟ್ ಗುಣಮಟ್ಟ ಹಾಗೂ ವಾಣಿಜ್ಯ ಗುಣಮಟ್ಟ, ಆಹಾರ ಸಂಸ್ಕರಣಾ ಕೈಗಾರಿಕೆಗಳ ವರ್ಗಗಳಲ್ಲಿ ಬಿಸ್ಕತ್ತುಗಳು, ಮಿಠಾಯಿಗಳು, ಕೋಕಾ, ಚಾಕಲೇಟ್‌ಗಳು ಮತ್ತು ಹಿಟ್ಟು ಗಿರಣಿ, ಹೀಗೆ ಎಲ್ಲಾ ವರ್ಗಗಳಲ್ಲಿ ಉತ್ಪಾದನೆ ಕಡಿಮೆಯಾಗಿರುತ್ತದೆ.

1952ಕ್ಕೆ ಹೋಲಿಸಿದಾಗ, 1953 ರಲ್ಲಿ ಈ ಎಲ್ಲಾ ಕೈಗಾರಿಕೆಗಳಲ್ಲಿ ಉತ್ಪಾದನೆ ಕಡಿಮೆಯಾಗಿರುತ್ತದೆ. ಆದರೂ, ಎಲ್ಲವೂ ಸರಿಯಾಗಿದೆ ಎನ್ನುವುದನ್ನು ನಂಬಬೇಕೆಂದು ನನ್ನ ಸ್ನೇಹಿತರು ನನ್ನನ್ನು ಕೇಳುತ್ತಾರೆ. ಮುಖದ ಮೇಲಿನ ಮುನಿಸಿನಿಂದ ಮೂಗು ಕೊಯ್ದುಕೊಳ್ಳುವಂಥ ಜನರ ವರ್ಗಕ್ಕೆ ನಾನು ಸೇರಿದವನಲ್ಲ. ನನ್ನ ರಾಷ್ಟ್ರ ಅಥವಾ ನನ್ನ ಸರ್ಕಾರದ ಘನತೆಗೆ ಚ್ಯುತಿ ಉಂಟು ಮಾಡುವುದರಿಂದ ನನಗಾಗುವ ಲಾಭವಾದರೂ ಏನು? ಆದರೆ, ಯೋಜನೆಯ ಮೂರನೇ ವರ್ಷದಲ್ಲಿನ ದಾಖಲೆ ಇದಾಗಿದೆ. ವಾಣಿಜ್ಯ ಮತ್ತು ಕೈಗಾರಿಕಾ ಮಂತ್ರಾಲಯಕ್ಕೆ ಈ ಸದನ ಕೊಡಬೇಕಾದ ಆರೋಗ್ಯಕರ ಪ್ರಮಾಣಪತ್ರ ಇದೇ ಏನು? ಮಂತ್ರಾಲಯದ ಅಧೀನಕ್ಕೆ ವಹಿಸಿಕೊಡಲಾದ ಖಾಸಗೀ ವಲಯದ ನಿರ್ವಹಣೆಯ ಪರಿಣಾಮವಾಗಿ ಖಾಸಗೀ ವಲಯ ಸಾಧಿಸಿದ ಸಾಧನೆಗಳ ವಿವರವಾದ ತಃಖ್ತೆಯನ್ನು ಪಡೆಯುವ ಹಕ್ಕು ಈ ರಾಷ್ಟ್ರ ಮತ್ತು ಈ ಸದನಕ್ಕಿದೆ.

ನಾನು ಈ ಸದನದ ಹೆಚ್ಚು ಸಮಯವನ್ನು ತೆಗೆದುಕೊಳ್ಳಲು ಇಷ್ಟಪಡುವುದಿಲ್ಲ, ಆದರೆ ನಾನು ಪ್ರಸ್ತಾಪಿಸಲಿರುವ ಮೂರು ಸಂಕ್ಷಿಪ್ತ ಅಂಶಗಳಿಗೆ ಸನ್ಮಾನ್ಯ ಸಚಿವರು ಉತ್ತರ ನೀಡಬೇಕೆಂದು ಬಯಸುತ್ತೇನೆ.

ನಾನು ಕೂಡ ಸ್ವಲ್ಪಮಟ್ಟಿಗೆ ಭಾಗಿಯಾಗಿರುವ ಈ ನಿರ್ದಿಷ್ಟ ವಿಷಯದಲ್ಲಿ ಈ ಸದನ ಲೆಕ್ಕವಿಲ್ಲದಷ್ಟು ಬಾರಿ ಸಾಮ್ರಾಜ್ಯ ಸುಂಕ ರಿಯಾಯಿತಿ ನಿರ್ವಹಣೆಯ ಆಯವ್ಯಯ ಪಟ್ಟಿಯನ್ನು ನೀಡುವಂತೆ ಕೇಳಿದೆ. ಗ್ಯಾಟ್ ಬಗ್ಗೆ ಪ್ರಸ್ತಾಪಿಸಿರುವ 1953ರ ಪುಸ್ತಕದ ಬಗ್ಗೆ ನನ್ನ ಸ್ನೇಹಿತರು ಈಗ ತಾನೇ ಉದಾಹರಿಸಿದರು. ನಾವೀಗ 1954ರ ವರ್ಷದಲ್ಲಿದ್ದೇವೆ. ಪ್ರಸ್ತಾವನೆ ಸರ್ಕಾರದ ಪರಿಶೀಲನೆಯಲ್ಲಿದ್ದು ವರದಿಯನ್ನು ತಯಾರಿಸಲಾಗುತ್ತಿದೆ, ಅದನ್ನು ಒದಗಿಸಲಾಗುವುದೆಂಬ ಭರವಸೆಯನ್ನು ನನ್ನ ಸ್ನೇಹಿತರಾದ ಸನ್ಮಾನ್ಯ ಕೃಷ್ಣ ಮಾಚಾರಿಯವರು ನಮಗೆ ಈ ಸದನದಲ್ಲಿ ನೀಡಿದ್ದಾರೆಂದು ಹೇಳಿದರೆ, ಅವರ ಹೇಳಿಕೆಯನ್ನು ತಪ್ಪಾಗಿ ಉಲ್ಲೇಖಿಸುತ್ತಿಲ್ಲವೆಂದು ನಾನು ಭಾವಿಸುತ್ತೇನೆ. ಆಮದು ಮಾಡಿಕೊಳ್ಳಲಾದ ಕೆಲವು ರೀತಿಯ ಮೋಟಾರು ಕಾರುಗಳ ಮೇಲಿನ ಸುಂಕ ಕಡಿಮೆಯಾಗಿರುವ ಕಾರಣ, ಸಾಮ್ರಾಜ್ಯ ಸುಂಕ ರಿಯಾಯಿತಿಯಲ್ಲಿ, ಸ್ವಲ್ಪಮಟ್ಟಿನ ಬದಲಾವಣೆ ಪ್ರಸ್ತುತ ವರ್ಷದಲ್ಲಿ ಆಗಬಹುದು. ನನ್ನ ಸ್ನೇಹಿತರು ಪ್ರಸ್ತಾಪಿಸಿದಂತೆ, ಕೆಲವು ಸೀಮಿತ ದೇಶಗಳೊಂದಿಗೆ ಆಮದು - ರಫ್ತು ಸುಂಕ ಕುರಿತಂತೆ ವ್ಯವಹರಿಸಲು ನಮ್ಮ ರಾಷ್ಟ್ರಕ್ಕೆ 'ಗ್ಯಾಟ್' ಸಂಸ್ಥೆಯವರು ಕೆಲವು ವಾರಗಳ ಹಿಂದೆ ಅನುಮತಿ ನೀಡಿರುವ ಸಂಗತಿಯೂ ನನಗೆ ಗೊತ್ತಿದೆ. ಆದರೆ ಚರ್ಚೆಯಲ್ಲಿರುವ ವಿಷಯದ ಅಂಶ ಅದಲ್ಲ, ಚರ್ಚಿತ ವಿಷಯವೇನೆಂದರೆ ಸಾಮ್ರಾಜ್ಯ ಸುಂಕ ರಿಯಾಯಿತಿಯೊಂದಿಗೆ ಹೊಂದಿಕೊಂಡ ಆಮದು ಮತ್ತು ರಫ್ತು ವ್ಯವಹಾರಗಳ ತಃಖ್ತೆಯ ಸಂಪೂರ್ಣ ವಿಶ್ಲೇಷಣೆ. ಇದರಿಂದ ಈ ನಿರ್ವಹಣೆಯನ್ನು ಹೇಗೆ ನಿಭಾಯಿಸಲಾಗುತ್ತಿದೆ ಎಂಬುದು ಈ ರಾಷ್ಟ್ರಕ್ಕೆ ಮನವರಿಕೆಯಾಗುತ್ತದೆ. ಪಾವತಿಗಳ ಸಮತೋಲನ ಈ ರಾಷ್ಟ್ರಕ್ಕೆ ಮಾರಕವಾಗಿಲ್ಲವೆಂದು ಬಹು ದೊಡ್ಡದಾಗಿ, ಕೆಲವೊಮ್ಮೆ ಅತೀ ಎನಿಸುವಷ್ಟು ಹೇಳಲಾಗಿದೆ. ಆದರೆ, ಈ ರಾಷ್ಟ್ರ ಆ ಉತ್ತರವನ್ನು ನಿರೀಕ್ಷಿಸುತ್ತಿಲ್ಲ. ಸನ್ಮಾನ್ಯ

ಸಚಿವರು ಈ ಚರ್ಚೆಗೆ ಉತ್ತರ ನೀಡುವಾಗ, ವಿಚಾರಣೆಯ ಸ್ಥಿತಿ ಏನಾಗಿದೆ, ವರದಿ ಎಲ್ಲಿಯವರೆಗೆ ಬಂದಿದೆ ಹಾಗೂ ಅದು ದಿನದ ಬೆಳಕನ್ನು ಎಂದು ಕಾಣುತ್ತದೆ ಎಂಬುದರ ಬಗ್ಗೆ ಹೇಳಿಕೆಯನ್ನು ನೀಡುವರೆಂದು ಭಾವಿಸುತ್ತೇನೆ.

ನನ್ನ ಎರಡನೇ ಅಂಶ, ಶ್ರೀ ರಾಮಸ್ವಾಮಿ ಮೊದಲಿಯಾರ್‌ರವರ ನೇತೃತ್ವದ ಹತ್ತಿ ಜವಳಿ ಕೈಗಾರಿಕೆಯ ಮೇಲಿನ ಕಾರ್ಯನಿರತ ಸಮಿತಿಯ ವರದಿಯನ್ನು ಕುರಿತದ್ದಾಗಿದೆ. 1949ರ ನವೆಂಬರ್ 13 ರಂದು ಈ ಸಮಿತಿಯನ್ನು ರಚಿಸಲಾಯಿತು. ಸಮಿತಿಯು 1952ರ ಏಪ್ರಿಲ್ 22 ರಂದು ವರದಿಗೆ ಸಹಿ ಮಾಡಿದೆ. 1959ರ ಜನವರಿ 28ಕ್ಕೆ ವರದಿಯನ್ನು ಮುದ್ರಿಸಲಾಗಿದೆ. ಇದು 613 ಪುಟಗಳ ವರದಿ. 92 ಶಿಫಾರಸುಗಳನ್ನು ಇದು ಒಳಗೊಂಡಿದೆ. ಸಾರ್ವಜನಿಕರಿಗೆ ಈ ವರದಿಯನ್ನು ಒದಗಿಸಿಕೊಡುವ ಮೊದಲೇ ಭಾರತ ಸರ್ಕಾರ ಕನುಂಗೋ ಸಮಿತಿಯನ್ನು 1953ರ ನವೆಂಬರ್ 29ರಂದು ರಚಿಸಿತು. ಈ ಎರಡೂ ಸಮಿತಿಗಳ ಪರ್ಯಾಲೋಚನಾಂಶಗಳು ನನ್ನ ಮುಂದಿವೆ. ಈ ಪರ್ಯಾಲೋಚನಾಂಶಗಳಲ್ಲಿ ಯಾವುದೇ ಮುಖ್ಯ ವ್ಯತ್ಯಾಸಗಳಿಲ್ಲವೆಂದು ಸ್ಪಷ್ಟವಾಗಿ ಹೇಳಬಯಸುತ್ತೇನೆ. ಆದರೆ, ಈ ವರದಿಯ ಗತಿ ಏನಾಯಿತು? ಪ್ರತಿ ವರದಿಗೆ 14-10.00 ರೂ.ಗಳ ಬೆಲೆಯನ್ನು ನಿಗದಿಪಡಿಸಲಾಗಿದೆ. ಈ ವರದಿಯಲ್ಲಿನ ಶಿಫಾರಸುಗಳನ್ನು ಸರ್ಕಾರ ಪರಿಗಣಿಸಿದೆಯೇ? ಹಾಗಿದ್ದಲ್ಲಿ, ಏನು ಕ್ರಮಗಳನ್ನು ತೆಗೆದುಕೊಳ್ಳಲಾಗಿದೆ? ಈಗ, ಅಂದರೆ 1953 ರ ನವೆಂಬರ್‌ನಲ್ಲಿ ಇನ್ನೊಂದು ಸಮಿತಿಯನ್ನು ರಚಿಸುವ ಅವಶ್ಯಕತೆಯಾದರೂ ಏನಿತ್ತು? ಇದರ ವರದಿ ಎಂದು ಬರುತ್ತದೆ? ಈ ವರದಿಯ ಸ್ಥಿತಿ ಏನಾಗುತ್ತದೆ? ಇವುಗಳಿಂದಾಗಿ ರಾಷ್ಟ್ರ ಗೊಂದಲಕ್ಕೊಳಗಾಗಿದೆ ಹಾಗೂ ವರದಿಯನ್ನುತಯಾರಿಸುವಲ್ಲಿ ತೆರಿಗೆದಾರರ ಹಣ ಎಷ್ಟು ಖರ್ಚಾಗುತ್ತದೆ ಎಂದು ತಿಳಿಯಲು ಅದು ಕಾತುರವಾಗಿದೆ. ಕೇಂದ್ರ ಟ್ರ್ಯಾಕ್ಟರ್ ಸಂಸ್ಥೆಯ ಬಗ್ಗೆಯೂ ಇದೇ ರೀತಿ ಪ್ರಯತ್ನ ಮಾಡಲಾಯಿತೆಂಬುದನ್ನು ಈ ಸದನ ನೆನಪಿಸಿಕೊಳ್ಳಬೇಕು. ಸಮಿತಿಗಳನ್ನು ಬಹು ಲಘುವಾಗಿ ನೇಮಕ ಮಾಡುವ ಹಾಗೂ ಆ ಸಮಿತಿಯ ಶಿಫಾರಸುಗಳ ಬಗ್ಗೆ ಏನನ್ನೂ ಹೇಳದಿರುವ ಸರ್ಕಾರದ ಪ್ರವೃತ್ತಿಯನ್ನು ನಾನು ತೀವ್ರವಾಗಿ ಖಂಡಿಸುತ್ತೇನೆ. ಯಾವುದೇ ಸಮಿತಿಯ ಅಥವಾ ಅವುಗಳ ಶಿಫಾರಸುಗಳ ಬಗ್ಗೆ ನಾನು ವಕಾಲತು ವಹಿಸುತ್ತಿಲ್ಲ. ಆದರೆ, ಈ ವಿಚಾರಣಾ ಸಮಿತಿಗಳ ಕಾರ್ಯನಿರ್ವಹಣೆಯಲ್ಲಿ ಮತ್ತು ವರದಿಗಳನ್ನು ಪ್ರಕಟಿಸುವ ಕಾರ್ಯದಲ್ಲಿ ತೆರಿಗೆದಾರರ ಹಣವಂತೂ ಸಾಕಷ್ಟು ಪ್ರಮಾಣದಲ್ಲಿ ವಿನಿಯೋಗವಾಗಿದೆ. ಈ ಬಗ್ಗೆ ಏನಾಯಿತು ಎಂಬುದನ್ನು ಸಚಿವರಿಂದ ನಾನು ನಿರೀಕ್ಷಿಸುತ್ತೇನೆ.

ಕೊನೆಯದಾಗಿ, ಈ ಫೌಂಟೆನ್‌ಪೆನ್ನಿನ ಕಥೆಯನ್ನು ಹೇಳುತ್ತೇನೆ. ಶೇ. 10 ರಷ್ಟು ಸ್ವದೇಶದಲ್ಲಿ ಅಂದರೆ ಆಂಧ್ರ ಪ್ರದೇಶದ ರಾಜಮುಂದ್ರಿಯಲ್ಲಿ ತಯಾರಾಗುತ್ತಿರುವ ಪೆನ್ನು ಇದು. 10,000 ರೂಪಾಯಿಗಳ ಮೌಲ್ಯದ ಸಾಮಗ್ರಿಗಳನ್ನು ಜರ್ಮನಿಯಿಂದ ಆಮದು ಮಾಡಿಕೊಳ್ಳಲು ಈ ಸಂಸ್ಥೆಗೆ ಪರವಾನಗಿ ನೀಡಬೇಕೆಂದು ಎರಡು ವರ್ಷಗಳ ಹಿಂದೆ ನನ್ನ

ಸ್ನೇಹಿತರಾದ ವಾಣಿಜ್ಯ ಮತ್ತು ಕೈಗಾರಿಕಾ ಸಚಿವರಿಗೆ ಬರೆದು ವಿನಂತಿಸಿದ್ದೆ. ನನಗೆ ವೈಯಕ್ತಿಕವಾಗಿ ಗೊತ್ತಿರುವಂತೆ ಈ ಸಂಸ್ಥೆ ಕಳೆದ 30 ವರ್ಷಗಳಿಂದ ಕಾರ್ಯ ನಿರ್ವಹಿಸುತ್ತಾ ಬಂದಿದೆ. ಮಹಾತ್ಮಾ ಗಾಂಧೀಜಿಯವರೂ ಸಹ 20 ವರ್ಷಗಳ ಹಿಂದೆ ಈ ಫ್ಯಾಕ್ಟರಿಗೆ ಭೇಟಿ ನೀಡಿ ಮೆಚ್ಚುಗೆಯ ಪ್ರಮಾಣ ಪತ್ರ ನೀಡಿದ್ದಾರೆ. ರಾಷ್ಟ್ರಾಧ್ಯಕ್ಷರಾದ ಡಾ. ರಾಜೇಂದ್ರಪ್ರಸಾದ್‌ರವರೂ ಕೂಡ ಕೆಲವು ತಿಂಗಳ ಹಿಂದೆ ಬಹುಮಾನಗಳನ್ನು ನೀಡುವ ಉದ್ದೇಶಕ್ಕಾಗಿ ಅನೇಕ ಪೆನ್ನುಗಳನ್ನು ಖರೀದಿಸಿದರು. ಈ ಕೈಗಾರಿಕೆಯ ಬಗ್ಗೆ ಎರಡು ವರ್ಷಗಳ ಹಿಂದೆಯೇ ಸಚಿವರಿಗೆ ನಾನು ಬರೆದಿರುತ್ತೇನೆ, ಇದು ಒಂದು ಗುಡಿ ಕೈಗಾರಿಕೆ ಹಾಗೂ ಪ್ರಸಿದ್ಧಿ ಪಡೆದಂಥ ಒಂದು ಕೈಗಾರಿಕೆ. ಇದೇ ರೀತಿಯ ಇತರೆ ಎರಡು ಅಥವಾ ಮೂರು ಘಟಕಗಳಿವೆ. ಸಚಿವರ ಸಿಬ್ಬಂದಿಯೊಬ್ಬರು ಗಮನ ನೀಡುತ್ತಿದ್ದಾರೆಂಬ ಉತ್ತರ ನನಗೆ ಬಂದಿತು. ತದನಂತರ, ಯಾವ ಉತ್ತರವೂ ಬರಲಿಲ್ಲ. ನಾನು ಯಾರ ಬಗ್ಗೆಯೂ ದೋಷಾರೋಪಣೆ ಮಾಡುತ್ತಿಲ್ಲ. ಮೇಲಾಗಿ ಈ ಸಂಸ್ಥೆಯ ಬಗ್ಗೆ ನನಗೆ ಯಾವುದೇ ವಿಶೇಷವಾದ ಆಸಕ್ತಿಯೂ ಇಲ್ಲ. ನಾನು ಇದರ ಬಗ್ಗೆ ಏಕೆ ಉಲ್ಲೇಖ ಮಾಡುತ್ತಿದೇನೆಂದರೆ, ವಾರ್ಷಿಕವರದಿಯ 10ನೇ ಅಧ್ಯಾಯದಲ್ಲಿ ಗುಡಿ ಕೈಗಾರಿಕೆಗಳಿಗೆ ಈ ಮಂತ್ರಾಲಯದಿಂದ ದೊರೆಯಲಿರುವ ಸಹಾಯದ ಬಗ್ಗೆ ಸಾಕಷ್ಟು ಹೇಳಿರುವುದರಿಂದಾಗಿ ಉಲ್ಲೇಖಿಸಿದ್ದೇನೆ. ಸಂಸ್ಥೆಯವರು ಬರೆದ ಪತ್ರ ಇಲ್ಲಿದೆ. ಆ ಸಂಸ್ಥೆಯ ಹೆಸರನ್ನು ನಾನು ಹೇಳಲು ಇಚ್ಛಿಸುವುದಿಲ್ಲ. ಏಕೆಂದರೆ, ಆ ಸಂಸ್ಥೆಗೆ ಪ್ರಚಾರ ಕೊಡಬೇಕೆಂಬ ಉದ್ದೇಶ ನನ್ನದಲ್ಲ:

> "1953ರ ಜುಲೈ - ಡಿಸೆಂಬರ್ ಅವಧಿಗೆ ಸೆಲ್ಯೂಲೊಸ್ ನೈಟ್ರೇಟ್ ಫೌಂಟೆನ್ ಪೆನ್ನಿನ ಟ್ಯೂಬುಗಳನ್ನು ಆಮದು ಮಾಡಿಕೊಳ್ಳಲು, ಸಂಖ್ಯೆ: 999632:53:ಎಯು: ಎಂ.ಡಿ.ಆರ್. ದಿನಾಂಕ 11-6-1953ರ ಪ್ರಕಾರ ಆಮದು ಪರವಾನಗಿಯನ್ನು ನಮಗೆ ಮಂಜೂರು ಮಾಡಲಾಯಿತು. ಅದರ ಸಿಂಧುತ್ವದ ಅವಧಿ ಕಡಿಮೆ ಇದ್ದುದರಿಂದ ಸರಬರಾಜುದಾರರ ಅಪೇಕ್ಷೆಯಂತೆ ದಿನಾಂಕ 31-12-53ರ ವರೆಗೆ ವಿಸ್ತರಿಸಲಾಯಿತು. ತದನುಸಾರ, ಸರಬುರಾಜುದಾರರು, ಅವರ ಪರಿವೀಕ್ಷಕರು ತಿರಸ್ಕರಣೆ ಮಾಡಿದ್ದುದರಿಂದ ಬೇಡಿಕೆ ಮಾಡಲಾಗಿದ್ದ 50 ಪೌಂಡ್ ಮೌಲ್ಯದ ಪೆನ್ ಟ್ಯೂಬ್‌ಗಳಲ್ಲಿ 43 ಪೌಂಡ್ ಮೌಲ್ಯದ ಪೆನ್ ಟ್ಯೂಬುಗಳ ಶಿಲ್ಕನ್ನು ಉಳಿಸಿಕೊಂಡು, ಉಳಿದ ಮೌಲ್ಯದ ಸಾಮಗ್ರಿಗಳನ್ನು ನವೀಕರಿಸಿದ ಪರವಾನಗಿಯ ಕೊನೆಯದಿನ ರವಾನಿಸಿದರು. ಉಳಿದ 43 ಪೌಂಡ್ ಮೌಲ್ಯದ ಟ್ಯೂಬ್‌ಗಳ ಆಮದಿಗಾಗಿ ಪುನಃ ನಾವು ಪರವಾನಗಿಯನ್ನು ದಯಪಾಲಿಸಬೇಕೆಂದು ಮದ್ರಾಸಿನಲ್ಲಿರುವ ಉಪ ಮುಖ್ಯ ಆಮದು ನಿಯಂತ್ರಕರಿಗೆ ಮನವಿ ಮಾಡಿಕೊಂಡೆವು"

ಈ ಕೈಗಾರಿಕೆ ಈಗಲೂ ಕಂಬಗಳನ್ನು ಸುತ್ತುತ್ತಲೇ ಇದೆ. ಪಂಚವಾರ್ಷಿಕ ಯೋಜನಾ ಅಡಿಯಲ್ಲಿನ ಕೈಗಾರಿಕಾ ಅಭಿವೃದ್ಧಿಯ ಬಹು ಮುಖ್ಯ ಕೈಗಾರಿಕೆಗಳಲ್ಲಿ ಇದೂ ಒಂದಾಗಿದೆ. ವಾಟರ್‌ಮೆನ್ ಮತ್ತು ಪಾರ್ಕರ್ ಫೌಂಟನ್ ಪೆನ್ನುಗಳ ಜೋಡಣಾ ಕೈಗಾರಿಕೆಗಳಿಗೆ ಯಾವ ರೀತಿಯಲ್ಲಿ ಪರವಾನಗಿಗಳನ್ನು ನೀಡಲಾಗುತ್ತಿದೆ ಎಂಬುದರ ಬಗ್ಗೆ ಪತ್ರಿಕೆಗಳು ವರದಿ ಮಾಡಿವೆ. ಈ ಫೌಂಟನ್ ಪೆನ್ ಕೈಗಾರಿಕೆಯು ಅನೇಕ ವರ್ಷಗಳಿಂದ ಗುಡಿ ಕೈಗಾರಿಕೆಯಾಗಿಯೇ ಕಾರ್ಯ ನಿರ್ವಹಿಸುತ್ತಿದೆ. ಈ ಪತ್ರಿಕೆಯನ್ನು ನಾನು ಇಲ್ಲಿ ಓದಲು ಇಷ್ಟಪಡುತ್ತಿಲ್ಲ. ಈ ಸದನದ ಪ್ರತಿಯೊಬ್ಬ ಸದಸ್ಯರಿಗೂ ತಿಳಿದಿರುವಂತೆ ಉನ್ನತಾಧಿಕಾರದಲ್ಲಿರುವವರ ಸಂಬಂಧಿಗಳಿಗೆ ಮತ್ತು ಸ್ನೇಹಿತರಿಗೆ ನೀಡಲಾಗುತ್ತಿರುವ ಪರವಾನಗಿಗಳನ್ನು ಕುರಿತು ಇದು ಉಲ್ಲೇಖ ಮಾಡಿದೆ. ಯಾವ ಸರ್ಕಾರೀ ಅಧಿಕಾರಿಯ ವಿರುದ್ಧವೂ ನಾನು ಮಾತನಾಡಲು ಇಷ್ಟಪಡುವುದಿಲ್ಲ. ಆದರೆ, ಉತ್ತರವನ್ನು ತಿಳಿಯುವ ಹಕ್ಕು ಈ ರಾಷ್ಟ್ರಕ್ಕಿದೆ ಎಂಬುದು ನನ್ನ ಅನಿಸಿಕೆ. ಇದು ಈ ಫೌಂಟನ್ ಪೆನ್ನಿನ ಕಥೆ.

## 5. ಆರ್ಥಿಕ ವಿಷಯಗಳು I

### ಕೈಗಾರಿಕಾ ಹಣಕಾಸು ನಿಗಮ*

ಕೈಗಾರಿಕಾ ಹಣಕಾಸು ನಿಗಮ (ತಿದ್ದುಪಡಿ) ವಿಧೇಯಕದ ಮೇಲಿನ ಚರ್ಚೆ ಅನೇಕ ತಿರುವುಗಳನ್ನು ಪಡೆದಿರುವುದಕ್ಕಾಗಿ ನಾನು ವಿಷಾದ ವ್ಯಕ್ತಪಡಿಸುತ್ತೇನೆ. ಈ ಸದನದ ಹಕ್ಕು ಬಾಧ್ಯತೆಗಳ ಬಗ್ಗೆ ಆಡಳಿತ ಪಕ್ಷದವರು ಅರ್ಥರಹಿತ ತರ್ಕದ ನಿಲುವನ್ನು ತಾಳದೇ ಇದ್ದಿದ್ದರೆ ಇವನ್ನು ಬಗೆಹರಿಸಬಹುದಾಗಿತ್ತು.

ಮಾನ್ಯ ಉಪ ಸಭಾಧ್ಯಕ್ಷರು ಚರ್ಚೆಯ ಮೊದಲ ದಿನವೇ ರೂಲಿಂಗ್ ನೀಡಿ, ಈ ಸದನದ ಸದಸ್ಯರಿಗೆ ಫರ್ಮುಗಳ ಹೆಸರೂ ಸೇರಿದಂತೆ ಕೆಲವು ಮಾಹಿತಿಗಳನ್ನು ಒದಗಿಸಲು ಆದೇಶಿಸಿದರು. ಆದರೆ, ಸರ್ಕಾರ ಅವರ ರೂಲಿಂಗನ್ನು ಕಡೆಗಣಿಸಿತು. ಮೇಲಾಗಿ, ಮಾನ್ಯ ಪ್ರಧಾನ ಮಂತ್ರಿಗಳು (ಪಂಡಿತ್ ನೆಹರು) ಹೇಳಿದರು: ಹಣಕಾಸು ಸಚಿವರು ಸಾಲಗಾರರಿಗೆ ಕೆಲವು ಭರವಸೆಗಳನ್ನು ನೀಡಿದ್ದು ಅವರು (ಶ್ರೀ ದೇಶಮುಖ) ಹೊರದೇಶಕ್ಕೆ ಹೋಗಿರುವುದರಿಂದ ಅವರು ಬರುವವರೆಗೆ ಏನನ್ನೂ ಮಾಡುವ ಹಾಗಿಲ್ಲ. ನಾನು ಆಡಳಿತ ಪಕ್ಷದವರಿಂದ ತಿಳಿದುಕೊಳ್ಳಬೇಕೆಂದಿರುವುದಿಷ್ಟೆ: ಮಾನ್ಯ ಹಣಕಾಸು ಸಚಿವರು (ಶ್ರೀ ದೇಶಮುಖ) ನೀಡಿದಂಥ ಭರವಸೆಯೇನಾದರೂ ಗೌಪ್ಯವೇ, ಮೌಖಿಕವೇ ಹಾಗೂ ದಾಖಲೆಯಲ್ಲಿ ಇಲ್ಲವೇ ಹೇಗೆ? ಇದೆಲ್ಲಕ್ಕಿಂತ ಮಿಗಿಲಾಗಿ ಇಂಥ ಗಹನವಾದ ವಿಧೇಯಕ್ಕೆ ಮಾನ್ಯ ಹಣಕಾಸು ಸಚಿವರಿಂದ ಮಾಹಿತಿ ಪಡೆಯಲು ಈ ಸದನ, ಅಂದರೆ ಈ ರಾಷ್ಟ್ರದ ಸಾರ್ವಭೌಮ ಸಂಸತ್ತು, ಸರ್ಕಾರದ ಒಬ್ಬ ಸಚಿವರು ಈ ರಾಷ್ಟ್ರಕ್ಕೆ ಹಿಂತಿರುಗಿ ಬಂದು, ಈ ಸದನದಲ್ಲಿ ಹೇಳಿಕೆ ನೀಡುವ ಅವರ ಅನುಕೂಲಕರ ಸಮಯಕ್ಕಾಗಿ ಕಾಯುತ್ತಿರಬೇಕೆ? ಈ ಸದನದ ಹಕ್ಕುಬಾಧ್ಯತೆಗಳನ್ನು ತಿರುಚಿ ಹಾಕುವಂಥ ಸರ್ಕಾರದ ದುರುದ್ದೇಶದ ಸನ್ನಾಹವನ್ನು ಪ್ರತಿಭಟಿಸುವ ಪರಮಾಧಿಕಾರ ಈ ರಾಷ್ಟ್ರಕ್ಕಿದೆ ಎನ್ನುವುದನ್ನು ತೋರಿಸಲು, ತಮ್ಮ ಅಪ್ಪಣೆಯ ಮೇರೆಗೆ "ದಿ ಹಿಂದೂ" ಪತ್ರಿಕೆಯ ಸಂಪಾದಕೀಯದ ಸ್ವಲ್ಪ ಭಾಗವನ್ನು ಇಲ್ಲಿ ಉದಾಹರಿಸುತ್ತೇನೆ. ತಮಗೆ ಗೊತ್ತಿರುವಂತೆ ಈ ಪತ್ರಿಕೆ ತನ್ನ ನಿಷ್ಪಕ್ಷಪಾತ ವರದಿಗಳಿಂದ ಮತ್ತು ಸಮನಾದ ನಿಲುವಿನಿಂದಾಗಿ ಸರ್ಕಾರದ ಹಿತೈಷಿ ಪತ್ರಿಕೆಯೆಂದೇ ಹೆಸರಾಗಿದೆ. ಈ ಸಂಪಾದಕೀಯ 1952ರ ನವೆಂಬರ್ 29 ರಂದು ಪ್ರಕಟವಾಗಿದ್ದು ಅದು ಈ ಕೆಳಕಂಡಂತಿದೆ:-

"ಸಾರ್ವಜನಿಕರಿಗೆ ಈ ವಿವರಗಳನ್ನು ನಿರಾಕರಿಸಬೇಕೆಂಬುದಕ್ಕೆ ಯಾವುದೇ ಕಾರಣಗಳು ಇಲ್ಲ. ತನ್ನ ಗ್ರಾಹಕನೊಂದಿಗಿನ ಬ್ಯಾಂಕುಗಳ ಸಂಬಂಧದ ಸಾಮ್ಯತೆ ಕೈಗಾರಿಕಾ

---

* ......... ಕೈಗಾರಿಕಾ ಹಣಕಾಸು ನಿಗಮ (ತಿದ್ದುಪಡಿ) ವಿಧೇಯಕದ ಮೇಲಿನ ಚರ್ಚೆ ಲೋಕಸಭೆ ದಿನಾಂಕ 2ನೇ ಡಿಸೆಂಬರ್, 1952, ಸಿಸಿ 14751484

ಹಣಕಾಸು ನಿಗಮಕ್ಕೆ ಅನ್ವಯವಾಗುವುದಿಲ್ಲ, ಏಕೆಂದರೆ ಅದು ಸಾರ್ವಜನಿಕ ಸಂಸ್ಥೆಯ ಸ್ವರೂಪದ್ದಾಗಿದ್ದು, ಆದರಿಂದ ಸಹಾಯ ಪಡೆಯುವವರು ಕೈಗಾರಿಕೆಗಳಿಗೆ ಸರ್ಕಾರದ ನೆರವು ಅಧಿನಿಯಮ'ದ ಅಡಿಯಲ್ಲಿ ನೆರವು ಪಡೆಯಲಿರುವ ಸಂಸ್ಥೆಗಳಿಗೆ ಸಮಾನರಾಗುತ್ತಾರೆ. ಬ್ರಿಟನ್ನಿನಲ್ಲಿ ಕೈಗಾರಿಕಾ ಹಣಕಾಸು ನಿಗಮದ ವ್ಯವಹಾರ ರಹಸ್ಯ ವಾಗಿರುವುದಿಲ್ಲ."

ಇದಲ್ಲದೆ, ಪತ್ರಿಕೆ ಮುಂದುವರಿಸುತ್ತದೆ:-

"ಕೈಗಾರಿಕಾ ಹಣಕಾಸು ನಿಗಮಕ್ಕೆ ವಿಶ್ವ ಬ್ಯಾಂಕ್ ನೀಡಲಿರುವ ಯಾವುದೇ ರೀತಿಯ ಹಣಕ್ಕೆ ಸರ್ಕಾರದ ಖಾತರಿ ಬೇಕಾಗುತ್ತದೆ. ಆದ್ದರಿಂದ, ನಿಗಮದ ಕಾರ್ಯ ಚಟುವಟಿಕೆಗಳಲ್ಲಿ ಯಾವುದೇ ಸಂಶಯದ ಗಾಳಿ ಬೀಸದಂತೆ ಸರ್ಕಾರ ನೋಡಿಕೊಳ್ಳಬೇಕಾಗುತ್ತದೆ".

ಕೈಗಾರಿಕಾ ಹಣಕಾಸು ನಿಗಮವು ಮಂಜೂರು ಮಾಡಿದಂಥ ಸಾಲಗಳು ಹಾಗೂ ಕಲ್ಪಿಸಿ ಕೊಡುವಂಥ ಸೌಲಭ್ಯಗಳನ್ನು ಪಡೆಯುವ ಸಾಲಗಾರರು ಕಡ್ಡಾಯವಾಗಿ ಸಾರ್ವಜನಿಕ ನಿಯಮಿತ ಕಂಪನಿಗಳಾಗಿರಬೇಕು ಹಾಗೂ ಈ ವಿವರಗಳನ್ನು ಸದರಿ ಕಂಪನಿಗಳು ತಮ್ಮ ಆಸ್ತಿ ಮತ್ತು ಪಟ್ಟಿಯಲ್ಲಿ ನಮೂದಿಸಬೇಕೆಂಬ ಮಾಹಿತಿಯನ್ನು, ಸ್ವತಃ ಕೈಗಾರಿಕಾ ಹಣಕಾಸು ನಿಗಮದ ಒಬ್ಬ ನಿರ್ದೇಶಕರಾದ ನನ್ನ ಸ್ನೇಹಿತ ಸನ್ಮಾನ್ಯ ಖಂಡೂಬಾಯಿ ದೇಸಾಯಿಯವರು ಈ ಸದನಕ್ಕೆ ತಿಳಿಸುತ್ತಾರೆಂದು ನಾನು ಭಾವಿಸಿದ್ದೆ. ಸ್ವಲ್ಪ ಶ್ರಮವಹಿಸಿ ಪ್ರಯತ್ನಪಟ್ಟಿದ್ದೇ ಆದಲ್ಲಿ ನಾವೇ ಪಡೆಯಲು ಸಾಧ್ಯವಿದ್ದ ಈ ಮಾಹಿತಿಯನ್ನು ನೀಡಲು ಭಾರತ ಸರ್ಕಾರ ವಿಶೇಷವಾಗಿ, ನನ್ನ ಮುಂದೆ ಉಪಸ್ಥಿತರಿರುವ ಮಾನ್ಯ ಹಣಕಾಸು ಸಚಿವರು ಹಿಂದೇಟು ಹಾಕುತ್ತಿರುವುದಕ್ಕೆ ಯಾವುದೇ ಕಾರಣಗಳು ನನಗೆ ಕಂಡುಬರುತ್ತಿಲ್ಲ. ಕಡೆಯಪಕ್ಷ ನನ್ನ ಸ್ನೇಹಿತ ಸನ್ಮಾನ್ಯ ಶ್ರೀ ಖಂಡೂಬಾಯಿ ದೇಸಾಯಿಯವರು ಸಾಲ ಮಂಜೂರು ಮಾಡಿಸಿಕೊಂಡಂಥ ಸಂಸ್ಥೆಗಳ ಹೆಸರನ್ನಾದರೂ ಹೇಳುತ್ತಾರೆಂದು ಭಾವಿಸಿದ್ದೆ. ಈ ಸಂಸ್ಥೆಯ ನಿರ್ದೇಶಕರುಗಳು ಒಂದಲ್ಲ ಒಂದು ರೀತಿಯಲ್ಲಿ ಕೈಗಾರಿಕಾ ಹಣಕಾಸು ನಿಗಮದೊಂದಿಗೆ ಸಂಬಂಧವಿರಿಸಿಕೊಂಡಿದ್ದಾರೆ. ತಿರಸ್ಕರಿಸಿದ ಸಾಲದ ಅರ್ಜಿಗಳ ಬಗ್ಗೆ ಮಾಹಿತಿ ನೀಡಿದ್ದಲ್ಲಿ ಸಾಲದ ಮನವಿದಾರರಿಗೆ ಹಾನಿಯನ್ನುಂಟು ಮಾಡಿದಂತಾಗುವುದೆಂದು ಹೇಳುತ್ತಾ ಶ್ರೀ ಕೆ.ಕೆ. ದೇಸಾಯಿಯವರು ಚರ್ಚೆಯ ದಿಕ್ಕನ್ನೇ ಬದಲಾಯಿಸಿದರು. ಅನ್ಯಥಾ ಭಾವಿಸದಿದ್ದಲ್ಲಿ ನಾನು ಹೇಳುವುದೇನೆಂದರೆ ಒಂದೇ ಒಂದು ಅತೀ ಸಾಮಾನ್ಯ ಅಂಶದ ಮೇಲೆ ಅಂದರೆ ಸ್ವಜನ ಪಕ್ಷಪಾತವೇನಾದರೂ ನಡೆದಿದೆಯೆ, ಏಕಸ್ವಾಮ್ಯತೆಯೇನಾದರೂ ಇದೆಯೇ ಅಥವಾ ಕೈಗಾರಿಕಾ ಹಣಕಾಸು ನಿಗಮದ ಹಣವನ್ನು ತಮ್ಮ ಸ್ವಂತ ಉಪಯೋಗಕ್ಕಾಗಿ ದುರುಪಯೋಗಪಡಿಸಿಕೊಳ್ಳುತ್ತಿರುವ ವ್ಯಾಪಾರಸ್ಥರ ಕೂಟವೇನಾದರೂ ಇದೆಯೇ ಎಂಬ ಅಂಶದ ಮೇಲೆ ಇಡೀ ರಾಷ್ಟ್ರ ಕಳವಳ ವ್ಯಕ್ತಪಡಿಸಿದೆ. ಕೈಗಾರಿಕಾ ಹಣಕಾಸು ನಿಗಮವು ಸುಮಾರು 116 ಲಕ್ಷ ರೂಪಾಯಿಗಳಿಗೂ ಹೆಚ್ಚು ಸಾಲ ಮಂಜೂರು ಮಾಡಿದ ಕನಿಷ್ಟ ಮೂರು ಸಾರ್ವಜನಿಕ ನಿಯಮಿತ ಸಂಸ್ಥೆಗಳ ಜೊತೆ ನಿಗಮದ ಪ್ರಮುಖ ವರಿಷ್ಠಾಧಿಕಾರಿಗಳಲ್ಲಿ ಒಬ್ಬರು ಅತ್ಯಂತ ನಿಕಟ ಸಂಪರ್ಕವಿಟ್ಟುಕೊಂಡಿದ್ದು ಅವುಗಳ ಅಧ್ಯಕ್ಷರಾಗಿರುತ್ತಾರೆ ಅಥವಾ

ನಿರ್ದೇಶಕರಾಗಿರುತ್ತಾರೆ ಅಥವಾ ಅವರ ಕುಟುಂಬ ವರ್ಗದವರು ಆ ಸಂಸ್ಥೆಗಳೊಂದಿಗೆ ಸಂಬಂಧವಿರಿಸಿಕೊಂಡಿದ್ದಾರೆಂದು ನಾನು ನಿರ್ಭಯವಾಗಿ ಆರೋಪಿಸುತ್ತೇನೆ, ಈ ನನ್ನ ಆರೋಪವನ್ನು ನನ್ನ ಸನ್ಮಾನ್ಯ ಸ್ನೇಹಿತರಾದ ರೆವಿನ್ಯೂ ಮಂತ್ರಿಗಳು ಅಲ್ಲಗಳೆಯಲೆಂದು ಕೇಳುತ್ತೇನೆ. ಅವುಗಳ ಹೆಸರುಗಳನ್ನು ನಾನು ಹೇಳಬಲ್ಲೆ, ಆದರೆ, ಒಂದು ಸದುದ್ದೇಶದಿಂದ ನಾನಿಲ್ಲಿ ಮಾತಾಡುತ್ತಿದ್ದೇನೆ ಹಾಗೆಯೇ ಈ ಸ್ವರೂಪದ ಮಾಹಿತಿಯನ್ನು ತಮ್ಮ ಮುಂದಿಡುವ ಪ್ರಯತ್ನ ಮಾಡಿದ್ದೇನೆ ಅಷ್ಟೇ. ಯಾವುದೇ ಒಂದು ನಿರ್ದಿಷ್ಟ ಸಂಸ್ಥೆಗೆ ಹಾನಿಯುಂಟು ಮಾಡುವುದು ನನ್ನ ಉದ್ದೇಶವಲ್ಲ. ನಾನು ನಿಮ್ಮ ಮುಂದಿಡಬೇಕೆಂದಿರುವ ಅಂಶ ಇದು. ಈ ನಿಗಮದ ಅಧ್ಯಕ್ಷರಿಂದ ಹಿಡಿದು ಕೆಳವರ್ಗದ ಅಧಿಕಾರಿಗಳು ತಮಗಾಗಿ, ತಮ್ಮ ಸ್ನೇಹಿತರಿಗಾಗಿ ಹಾಗೂ ತಮ್ಮ ವ್ಯವಹಾರಸ್ಥ ಕೂಟಗಳಿಗಾಗಿ ಸಾಲ ಸೌಲಭ್ಯಗಳನ್ನು ಏರ್ಪಾಟು ಮಾಡಿಕೊಂಡಿರುವುದನ್ನು ಈ ದುರ್ಭಾಗ್ಯ ರಾಷ್ಟ್ರ ನೋಡಿಕೊಂಡು ಅವರು ಸುಮ್ಮನಿರುವ ಸಂಗತಿ ನಿಜವೆ? ಅಥವಾ ಅಲ್ಲವೆ? ಸರ್ಕಾರದಿಂದ ಮಾಹಿತಿ ಪಡೆಯುವ ಹಕ್ಕು ಈ ಸದನಕ್ಕಿದೆ. ಇದುವರೆಗೆ ಲಾಭಾಂಶದ ಖಾತರಿಯಾಗಿ ರೂ. 26 ಲಕ್ಷ ತೆರಿಗೆದಾರರ ಹಣವನ್ನು ನೀಡಲಾಗಿದೆ. ಇದು 26 ಲಕ್ಷವಾಗಿರಬಹುದು ಅಥವಾ ಇನ್ನೂ ಸ್ವಲ್ಪ ಹೆಚ್ಚಿರಬಹುದು. ಇನ್ನೂ ಒಂದು ಅಂಶವನ್ನು ಸದನದ ಗಮನಕ್ಕೆ ತರುವುದಾದರೆ, ಇಷ್ಟರಲ್ಲಿಯೇ 50 ಲಕ್ಷ ರೂಪಾಯಿಗಳನ್ನು ವಿಶೇಷ ಮೀಸಲು ನಿಧಿಗೆ ತೊಡಗಿಸಲಾಗುತ್ತದೆ. ಈ ಒಂದು ನಿರ್ದಿಷ್ಟ ಕೈಗಾರಿಕಾ ಹಣಕಾಸು ನಿಗಮಕ್ಕೆ ಈಗಾಗಲೇ ಎರಡು ಕೋಟಿ ರೂಪಾಯಿಗಳಷ್ಟು ತೆರಿಗೆದಾರರ ಹಣ ಷೇರು ಬಂಡವಾಳ ರೂಪದಲ್ಲಿ ಹಾಗೂ ರಿಸರ್ವ್ ಬ್ಯಾಂಕಿನಿಂದ ಹೋಗಿಯಾಗಿದೆ. ಈ ಸದನಕ್ಕಿರುವ ವಿಶೇಷಾಧಿಕಾರ ಮತ್ತು ಹಕ್ಕುಗಳನ್ನು ಖಾತ್ರಿಪಡಿಸಿಕೊಳ್ಳುವುದು ಅತೀ ಅವಶ್ಯವಿದೆಯೆಂಬುದನ್ನು ಒತ್ತಿ ಹೇಳುತ್ತಾ, ಸನ್ಮಾನ್ಯ ಅಧ್ಯಕ್ಷರೆ, ತಮ್ಮ ಬಗ್ಗೆ ಅಪಾರ ಗೌರವ ಹೊಂದಿರುವ ನಾನು ಒಂದು ವಿಷಯವನ್ನು ತಮ್ಮ ಗಮನಕ್ಕೆ ತರುತ್ತಿದ್ದೇನೆ, ಅದೇ ನೆಂದರೆ ಸನ್ಮಾನ್ಯ ಉಪಾಧ್ಯಕ್ಷರು, ಚರ್ಚೆಯ ಮೊದಲನೆ ದಿನ ನೀಡಿದ ರೂಲಿಂಗ್‌ನ್ನು ಎದುರಿಗಿರುವ ನನ್ನ ಸ್ನೇಹಿತರು ತಮಗಿಷ್ಟ ಬಂದ ಹಾಗೆ ಕಡೆಗಣಿಸಬಾರದಿತ್ತು.

ಇಷ್ಟನ್ನು ಹೇಳಿದ ನಂತರ, ಈ ನಿಗಮದ ಸ್ವರೂಪ ಹಾಗೂ ಅದರಲ್ಲಿ ಅಡಕವಾಗಿರುವ ಪರಿಣಾಮಗಳ ಬಗ್ಗೆ ಸಂಕ್ಷಿಪ್ತವಾಗಿ ವಿವರಿಸುತ್ತೇನೆ. ವಿಶೇಷವಾಗಿ ಖಾಸಗಿ ವಲಯದಲ್ಲಿ ಆರ್ಥಿಕ ಅಭಿವೃದ್ಧಿ ಸಾಧಿಸುವಂಥ ಹಾಗೂ ರಾಷ್ಟ್ರದ ಪುನರ್ ನಿರ್ಮಾಣ ಮಾಡುವಂಥ ಗುರುತರ ಜವಾಬ್ದಾರಿಯನ್ನು ಪೂರೈಸಲು ಕೇಂದ್ರ ಮತ್ತು ರಾಜ್ಯಗಳಲ್ಲಿರುವ ಕೈಗಾರಿಕಾ ಹಣಕಾಸು ನಿಗಮಗಳು ಮುಂದಾಗಬೇಕೆಂದು ಯೋಚಿಸುವವರ ಗುಂಪಿಗೆ ಸೇರಿದವನು ನಾನು. ಹೀಗಾಗಿ, ಈ ವಿಧೇಯಕವನ್ನು ಮಂಡಿಸುವಾಗ ನನ್ನ ಸ್ನೇಹಿತ ಸನ್ಮಾನ್ಯ ಎಂ.ಸಿ. ಶಾಹರವರು ನೀಡಿದ ಹೇಳಿಕೆ ನನಗೆ ಮೆಚ್ಚುಗೆಯಾಯಿತು. ಅದರಲ್ಲಿನ ಒಂದು ಭಾಗ ಈ ಮುಂದಿನಂತಿದೆ:

"ಹಣದ ಮಾರುಕಟ್ಟೆಯಿಂದ ಲಭ್ಯವಾಗದ ಬಂಡವಾಳ ಅವಶ್ಯಕತೆಗಳನ್ನು ಪೂರೈಸುವುದಕ್ಕಾಗಿ"

ಇದೊಂದು ಬಹು ಮುಖ್ಯವಾದ ಹೇಳಿಕೆ. ಕೈಗಾರಿಕಾ ಖಾಸಗೀ ವಲಯದ ಅವಶ್ಯಕತೆಗಳನ್ನು ಪೂರೈಸಲು ಪ್ರಸ್ತುತ ಚಾಲ್ತಿಯಲ್ಲಿರುವಂತೆ ಈ ಒಂದು ಅತ್ಯಂತ ಸಣ್ಣ ಪ್ರಮಾಣದ ಕೈಗಾರಿಕಾ ಹಣಕಾಸು ನಿಗಮ ಸ್ವರ್ಗದ ಅಮೃತಧಾರೆಯನ್ನೆ ಧರೆಗಿಳಿಸುತ್ತಿದೆ ಎನ್ನುವಂತೆ ಈ ದಿನದ ಚರ್ಚೆಯೂ ಸೇರಿದಂತೆ ಕಳೆದ ಮೂರು ದಿನಗಳಿಂದ ಚರ್ಚಿಸಲಾಯಿತು ಎಂಬುದನ್ನು ನಾನು ನನ್ನ ಜವಾಬ್ದಾರಿಯರಿತು ಹೇಳುತ್ತಿದ್ದೇನೆ. ಆದರೂ, ಶ್ರೀ ಬನ್ಸಾಲ್‌ರವರು ಖಾಸಗೀ ವಲಯದ ಕೈಗಾರಿಕಾ ಕಾರ್ಯಚಟುವಟಿಕೆಗಳಿಗಾಗಿ ಪ್ರತಿ ವರ್ಷ 100 ಕೋಟಿ ರೂಪಾಯಿಗಳ ಅವಶ್ಯಕತೆ ಇದೆ ಎಂದು ಒಪ್ಪಿಕೊಂಡಿದ್ದಾರೆ. ಪ್ರಸ್ತುತ ರಾಷ್ಟ್ರದಲ್ಲಿನ ಖಾಸಗೀ ಕೈಗಾರಿಕಾ ವಲಯದ ಒಟ್ಟು ಬಂಡವಾಳಕ್ಕೆ ಯೋಜನಾ ಆಯೋಗವು 1500 ಕೋಟಿ ರೂಪಾಯಿಗಳನ್ನು ನಿಗದಿಪಡಿಸಿದೆ. ಇದರರ್ಥ, ಅಂತರಾಷ್ಟ್ರೀಯ ಹಣಕಾಸು ನಿಧಿಯಿಂದ ನಾಳೆ ನಮಗೆ ಇನ್ನೂ 8 ಕೋಟಿ ರೂಪಾಯಿಗಳು ಲಭ್ಯವಾಗುವುದೆಂದು ಭಾವಿಸಿಯೂ ಕೂಡ, ಕೈಗಾರಿಕಾ ಹಣಕಾಸು ನಿಗಮದ ವಿಲೇವಾರಿಯಲ್ಲಿರುವ ಸಂಪನ್ಮೂಲಗಳು ಅದರ ಒಟ್ಟು ಕಾರ್ಯ ಚಟುವಟಿಕೆಗಳ ಶೇ. 2 ರಷ್ಟಕ್ಕೂ ಸಮನಾಗುವುದಿಲ್ಲ. ಈ ಕೈಗಾರಿಕಾ ಹಣಕಾಸು ನಿಗಮದ ಅಸ್ತಿತ್ವವನ್ನು ನಾನು ಹಗುರವಾಗಿ ಕಾಣುತ್ತಿಲ್ಲವಾದರೂ ಅದರ ಪಾತ್ರದ ಮಹತ್ವದ ಬಗ್ಗೆ ಅವಶ್ಯಕತೆ ಮೀರಿ ಚರ್ಚೆಯಲ್ಲಿ ಉತ್ಪ್ರೇಕ್ಷೆ ಮಾಡಿದ ಕಾರಣದಿಂದ ನಾನು ಈ ಅಂಶವನ್ನು ಉಲ್ಲೇಖಿಸಬೇಕಾಯಿತು. ಅದರ ಕಾರ್ಯಚಟುವಟಿಕೆಗಳು ವಿಸ್ತಾರವಾಗಬೇಕೆಂಬುದೂ ನನ್ನ ಆಸೆ. ವಾಸ್ತವವಾಗಿ, ಈ ವಿಧೇಯಕದ ಕೆಲವು ಖಂಡಗಳನ್ನು ಅಂದರೆ 11,12 ಮತ್ತು 13ನೇ ಖಂಡಗಳನ್ನು ನಾನೂ ಬಲವಾಗಿ ಸಮರ್ಥಿಸುತ್ತೇನೆ. ಚರ್ಚೆಯ ಮಧ್ಯೆ ಪ್ರವೇಶಿಸಿದ ಈ ಕಡೆಯ ಕೆಲಮಿತ್ರರು ಕೈಗಾರಿಕಾ ಹಣಕಾಸು ನಿಗಮದ ಚುಕ್ಕಾಣಿ ಹಿಡಿದಿರುವ ಬಣದ ಆಪ್ತ ಸ್ನೇಹಿತರುಗಳಿಗೆ ಹಂಚಲು ನಿಗಮಕ್ಕೆ ಕಡೆಯಪಕ್ಷ 100 ಕೋಟಿ ರೂಪಾಯಿಗಳಾದರೂ ಬೇಕಾಗುವುದೆಂಬ ಸೂಚನೆ ಮಾಡಿದರು. ಅದಕ್ಕೆ ನನ್ನ ಸನ್ಮಾನ್ಯ ಸ್ನೇಹಿತರಾದ ಶ್ರೀ ಶಾಹಾರವರು "ಇಲ್ಲ" 'ಇಲ್ಲ' ಎಂದು ಉತ್ತರಿಸಿದರು. ಕೈಗಾರಿಕಾ ಹಣಕಾಸು ನಿಗಮದ ಈಗಿನ ಒಟ್ಟಾರೆ ಸಂಪನ್ಮೂಲಗಳನ್ನು ಹುಡುಕುವ ಪ್ರಯತ್ನ ಮಾಡಿದ್ದೇನೆ. ಎಲ್ಲಾ ಐದು ವರ್ಷಗಳ ಅವಧಿಯನ್ನು ಗಣನೆಗೆ ತೆಗೆದುಕೊಂಡಾಗಲೂ ಅವು 40 ಕೋಟಿ ರೂಪಾಯಿಗಳನ್ನು ಮೀರುವುದಿಲ್ಲ. ಅಂತಾರಾಷ್ಟ್ರೀಯ ಹಣಕಾಸು ನಿಧಿ ಸಂಸ್ಥೆಯೂ ಹಾಗೂ ಬ್ಯಾಂಕು, ನಾಳಿದ್ದೇ ಇಂತಿಷ್ಟು ಹಣ ನೀಡಲಿದೆ ಎಂದು ಭಾವಿಸಿದರೂ ಸಹ 50 ಕೋಟಿಗಳನ್ನು ಮೀರುವುದಿಲ್ಲ.

ವಿಧೇಯಕದ ಸ್ವರೂಪದ ಬಗ್ಗೆ ಈಗ ಪರಿಶೀಲಿಸೋಣ. ಇದುವರೆಗೂ ಈ ನಿಗಮದ ನಿರ್ವಹಣೆಯನ್ನು ಯಾವ ರೀತಿಯಲ್ಲಿ ಮಾಡಲಾಗಿದೆ ಎಂಬುದರ ತಳಹದಿಯ ಮೇಲೆ ಸಾಧ್ಯವಿದ್ದಷ್ಟೂ ಈ ವಿಧೇಯಕವನ್ನು ಪರಿಶೀಲಿಸುವ ಅವಕಾಶ ನನಗೆ ದೊರೆತಿರುವುದು

ಸಂತೋಷವನ್ನುಂಟು ಮಾಡಿದೆ. ನಿಗಮವು ತನ್ನ ಅಸ್ತಿತ್ವದ ಮೊದಲ ನಾಲ್ಕು ವರ್ಷಗಳ ಅವಧಿಯಲ್ಲಿ ಸ್ವೀಕರಿಸಲಾದ ಮನವಿಗಳು ಹಾಗೂ ಮಂಜೂರು ಮಾಡಿದ ಹಣ ಈ ಕೆಳಗಿನಂತಿವೆ:

| | ಸಂಖ್ಯೆ | ಮೊತ್ತ |
|---|---|---|
| 10 ಲಕ್ಷ ರೂ.ಗಳನ್ನು ಮೀರದ ಸಾಲಗಳು | 53 | ರೂ. 2.99 ಕೋಟಿ |
| 10 ಲಕ್ಷ ರೂ.ಗಳನ್ನು ಮೀರಿದ ಆದರೆ 20 ಲಕ್ಷ ರೂ.ಗಳನ್ನು ಮೀರದ ಸಾಲಗಳು | 21 | ರೂ. 3.21 ಕೋಟಿ |
| 20 ಲಕ್ಷ ರೂ.ಗಳನ್ನು ಮೀರಿದ ಆದರೆ 30 ಲಕ್ಷ ರೂ.ಗಳನ್ನು ಮೀರದ ಸಾಲಗಳು | 7 | ರೂ. 1.95 ಕೋಟಿ |
| 30 ಲಕ್ಷ ರೂ.ಗಳನ್ನು ಮೀರಿದ ಆದರೆ 40 ಲಕ್ಷ ರೂ.ಗಳನ್ನು ಮೀರದ ಸಾಲಗಳು | 5 | ರೂ. 1.95 ಕೋಟಿ |
| 40 ಲಕ್ಷ ರೂ.ಗಳನ್ನು ಮೀರಿದ ಆದರೆ 50 ಲಕ್ಷ ರೂ.ಗಳನ್ನು ಮೀರದ ಸಾಲಗಳು | 8 | ರೂ. 3.93 ಕೋಟಿ |

ಪ್ರಸ್ತುತ ತಿದ್ದುಪಡಿ ವಿಧೇಯಕದ 13ನೇ ಖಂಡಕ್ಕೆ ಸಂಬಂಧಪಡುವ ಒಂದು ಮಹತ್ವದ ಅಂಶವನ್ನು ನಾನು ಇಲ್ಲಿ ಪ್ರಸ್ತಾಪಿಸುತ್ತಿದ್ದೇನೆ. ಅದೇನೆಂದರೆ, ಒಂದು ವರ್ಷದಲ್ಲಿ 5.00 ಕೋಟಿ ರೂಪಾಯಿಗಳಿಗಿಂತಲೂ ಕಡಿಮೆ ಸಾಲವನ್ನಷ್ಟೇ ನೀಡಲು ಶಕ್ತವಾಗಿರುವ ಈ ಒಂದು ಚಿಕ್ಕ ಹಾಗೂ ದುರ್ಬಲ ಕೈಗಾರಿಕಾ ಹಣಕಾಸು ನಿಗಮದ ಸಾಲ ಮಿತಿಯನ್ನು 50.00 ಲಕ್ಷ ರೂಪಾಯಿಗಳಿಂದ 1 ಕೋಟಿ ರೂಪಾಯಿಗಳಿಗೆ ಹೆಚ್ಚಿಸಿಕೊಳ್ಳುವ ಸಲುವಾಗಿ ಈ ತಿದ್ದುಪಡಿಯನ್ನು ತರಲಾಗಿದೆ. ಇದರ ಉದ್ದೇಶ, ಒಂದರ್ಥದಲ್ಲಿ ದೇಶದ ಕೆಲವೇ ಕೆಲವು ಘಟಕಗಳಿಗೆ ಮಾತ್ರವೇ ಸಾಲ ಸೌಲಭ್ಯದ ಅವಕಾಶ ಕಲ್ಪಿಸಿಕೊಡುವುದು ಹಾಗೂ ಇನ್ನೊಂದರ್ಥದಲ್ಲಿ ಈ ನಿಗಮದ ನಿರ್ವಹಣೆ ಚುಕ್ಕಾಣಿ ಹಿಡಿದ ಆಪ್ತೇಷ್ಟರು ನಿಗಮದ ಹಣ ಲಪಟಾಯಿಸಲು ಅನುಕೂಲ ಮಾಡಿಕೊಡುವುದೇ ಆಗಿದೆ. ಇದು ತೀರಾ ಖಂಡನೀಯ. ನಿಗಮದ 1951-52ನೇ ವರ್ಷದ ಆಸ್ತಿ ಮತ್ತು ಪಟ್ಟಿಯಲ್ಲಿನ ಅಂಕಿಅಂಶಗಳ ವಿಶ್ಲೇಷಣೆ ನನ್ನ ಬಳಿ ಇದೆ. ತೀರಾ ವಿವರಗಳಿಂದ ಈ ಸದನದ ತಾಳ್ಮೆಯನ್ನು ಪರೀಕ್ಷಿಸುವುದಿಲ್ಲ, ಆದರೆ ಈ ವಿಶ್ಲೇಷಣೆಯಿಂದ ನಮಗೆ ಗೊತ್ತಾಗುವುದೇನೆಂದರೆ ಕಾಗದದ ಕಾರ್ಖಾನೆ ರೂ. 71 ಲಕ್ಷ ಪಡೆದಿದೆ, ಜವಳಿ ಸುಮಾರು 43.75 ಲಕ್ಷ ರೂ.ಗಳನ್ನು ಪಡೆದಿದೆ ಹಾಗೂ ಸಕ್ಕರೆ 95 ಲಕ್ಷ ರೂ.ಗಳನ್ನು ಪಡೆದಿದೆ. ಯಾವ ಉದ್ದೇಶಕ್ಕಾಗಿ ಕಳೆದ ವರ್ಷ 95 ಲಕ್ಷ ರೂಪಾಯಿಗಳನ್ನು ಸಕ್ಕರೆ ಕೈಗಾರಿಕೆಗೆ ನೀಡಲಾಯಿತೆಂದು ನಾನು ಕೇಳುತ್ತೇನೆ. ಕಡೆಗಣಿಸಲ್ಪಟ್ಟ ಒಂದು ಹಳೆಯ ಉದ್ಯಮ ಇದಾಗಿದ್ದು, ಇಂದು ಏನಿಲ್ಲವೆಂದರೂ ಸುಮಾರು 4.00 ಲಕ್ಷ ಟನ್ ಅಧಿಕ

ಸಕ್ಕರೆ ನಮ್ಮಲ್ಲಿದೆ. ಹೊರದೇಶದಲ್ಲಿ ಇದಕ್ಕೆ ಮಾರುಕಟ್ಟೆಯೇ ಇಲ್ಲ. ಹೀಗಿರುವಾಗ ಅವರು ಇಷ್ಟೊಂದು ಹಣವನ್ನು ಯಾವ ರೀತಿಯಲ್ಲಿ ಹಿಂದಕ್ಕೆ ಪಡೆಯುತ್ತಾರೆ? ವಿಶ್ವ ವಾಣಿಜ್ಯದ ಬಗೆಗೆ ಅಲ್ಪಸ್ವಲ್ಪ ಜ್ಞಾನವುಳ್ಳ ನಾನು, ನನ್ನ ಜವಾಬ್ದಾರಿಯನ್ನು ಅರಿತು ಆರೋಪಿಸುವುದೇನೆಂದರೆ, ಈ ಕೈಗಾರಿಕಾ ಹಣಕಾಸು ನಿಗಮದ ಮೂಲ ಉದ್ದೇಶದ ಪ್ರಯೋಜನವನ್ನು ಕೇವಲ ಸ್ವಂತ ಉಪಯೋಗಕ್ಕಾಗಿ ದುರುಪಯೋಗಪಡಿಸಿಕೊಳ್ಳುತ್ತಿರುವ ಕೆಲವೇ ಕೆಲವು ವ್ಯಾಪಾರಸ್ಥರ ಕೂಟಕ್ಕಾಗಿ ಇಷ್ಟೆಲ್ಲಾ ಮಾಡಲಾಗುತ್ತಿದೆ. ಈ ದೇಶ, ವಿಶೇಷವಾಗಿ ಈ ಕೈಗಾರಿಕಾ ಹಣಕಾಸು ನಿಗಮ ತನ್ನ ಕಾರ್ಯ ಚಟುವಟಿಕೆಗಳನ್ನು ಜಪಾನೀ ಮಾದರಿಯಲ್ಲಿ ವೈವಿಧ್ಯಮಯಗಳಿಸಿಕೊಳ್ಳಬೇಕೆಂಬುದು ನನ್ನ ಇಚ್ಛೆಯಾಗಿದೆ. ಈ ನಾಲ್ಕುವರೆ ವರ್ಷದಲ್ಲಿ ಕೈಗಾರಿಕಾ ಹಣಕಾಸು ನಿಗಮವು ಕೈಗಾರಿಕಾ ಅಭಿವೃದ್ಧಿಗಾಗಿ ತನ್ನ ದೃಷ್ಟಿಕೋನವನ್ನು ಸ್ವಲ್ಪ ಸ್ವಲ್ಪವೇ ವೈವಿಧ್ಯಮಯಗೊಳಿಸಿಕೊಂಡಿದೆ ಎನ್ನುವುದಾದರೆ ಅದನ್ನು ಒಪ್ಪಿಕೊಳ್ಳಲು ನನಗೇನೂ ಸಂಕೋಚವಾಗುವುದಿಲ್ಲ. ಆದರೆ ಅದು ಎಲ್ಲೂ ಕಂಡುಬರುತ್ತಿಲ್ಲ ಹೇಳಬೇಕೆಂದರೆ ಸಮುದ್ರದಲ್ಲಿನ ಒಂದು ಹನಿಯಷ್ಟೂ ಸಹ ಇಲ್ಲ. ನಾನೀಗಾಗಲೇ ಹೇಳಿದಂತೆ ನಿಗಮದ ರಚನಾತ್ಮಕ ಕಾರ್ಯಗಳ ಬಗ್ಗೆ ಗಮನಹರಿಸಲು ನನ್ನದೇನೂ ತಕರಾರಿಲ್ಲ. ಆದರೆ, ನಿಗಮವನ್ನು ಗುತ್ತಿಗೆಯನ್ನಾಗಿ ಮಾಡಿಕೊಳ್ಳುವ ಏಕಾಧಿಕಾರದ ಮನೋಭಾವ ಹಾಗೂ ಬೇರೆಯವರನ್ನು ಬದಿಗೊತ್ತಿ ಕೆಲವೇ ಕೆಲವು ವ್ಯಕ್ತಿಗಳ ಮತ್ತು ಕೆಲವೇ ಕೆಲವು ವ್ಯಕ್ತಿಗಳ ಕೂಟಗಳ ಸ್ವಂತ ಉಪಯೋಗಕ್ಕಾಗಿ ನಿಗಮದ ನಿಧಿಯನ್ನು ದುರುಪಯೋಗ ಮಾಡಿಕೊಳ್ಳುವ ಮನೋಧರ್ಮಕ್ಕೆ ಕೊನೆಹಾಡಲೇಬೇಕು ಹಾಗೂ ಅದು ಈಗ ಸಕಾಲಿಕವೂ ಆಗಿದೆ ಎಂಬುದನ್ನು ಇಲ್ಲಿ ಸ್ಪಷ್ಟಪಡಿಸಲು ಇಚ್ಛಿಸುತ್ತೇನೆ.

ನನಗೆ ಕ್ರೋಢೀಕರಿಸಲು ಸಾಧ್ಯವಾದ ಅಂಕಿಅಂಶಗಳ ಆಧಾರದ ಮೇಲೆ ನಾನು ಮಾಡಲಾದ ವಿಶ್ಲೇಷಣೆ ನನ್ನ ಬಳಿ ಇದೆ. ನಿಗಮದ ಮೊದಲನೇ ನಾಲ್ಕು ವರ್ಷಗಳಲ್ಲಿ ನೀಡಬಹುದಾದ ಸಾಲದ ಒಟ್ಟು ಹಣದಲ್ಲಿ 1/3 ಭಾಗವು ಅಂದರೆ 12.59 ಕೋಟಿ ರೂಪಾಯಿಗಳಲ್ಲಿ 3.93 ಕೋಟಿ ರೂಪಾಯಿಗಳಷ್ಟು ಹಣ ದೊಡ್ಡ ಕೈಗಾರಿಕೆಗಳಿಗೆ, ಹಳೇ ಕೈಗಾರಿಕೆಗಳಿಗೆ ಮತ್ತು ನಿರ್ಲಕ್ಷಿಸಲಾದ ಕೆಲವು ಕೈಗಾರಿಕೆಗಳಿಗೆ ಹೋಗಿದೆ. ಒಂದು ವೇಳೆ ನಾವು ಜಪಾನೀ ವೈವಿಧ್ಯತಾ ಮಾದರಿಯನ್ನು ಅಳವಡಿಸಿಕೊಂಡರೆ, ವಿವಿಧ ರೀತಿಯಲ್ಲಿ ಕೈಗಾರಿಕೆಯನ್ನು ಅಭಿವೃದ್ಧಿಪಡಿಸಲು ಹಾಗೂ ಹಣಕಾಸು ನೆರವು ನೀಡಲು ಅವಕಾಶದೊರೆಯುವುದರ ಜೊತೆಗೆ ನನ್ನ ಸ್ನೇಹಿತರಾದ ಮಾನ್ಯ ಶ್ರೀ ಶಾಹಾ ರವರು ಹೇಳಿದಂತೆ ಹಣದ ಮಾರುಕಟ್ಟೆಯಲ್ಲಿ ಲಭ್ಯವಾಗದ ಬಂಡವಾಳ ಅವಶ್ಯಕತೆಗಳನ್ನು ಅಗತ್ಯವಿರುವ ಹೊಸ ಕೈಗಾರಿಕೆಗಳಿಗೆ ಪೂರೈಸಬಹುದಾಗಿದೆ. ಈ ನಿಟ್ಟಿನಲ್ಲಿ ನಾಲ್ಕು ವಿಧದಲ್ಲಿ ನನ್ನ ವಿಚಾರಸರಣಿಯನ್ನು ಮಂಡಿಸುತ್ತೇನೆ. ಮೊದಲನೆಯದಾಗಿ ಕೆಲವೇ ಕೆಲವು ಹಳೇ ಮಾದರಿಯ ದೊಡ್ಡ ಕೈಗಾರಿಕೆಗಳಿಗೆ ಹಣದ ವ್ಯವಸ್ಥೆ ಮಾಡುವುದಕ್ಕಿಂತಲೂ ಮಧ್ಯಮ ಮತ್ತು ಸಣ್ಣ ಕೈಗಾರಿಕೆಗಳ ಅಭಿವೃದ್ಧಿಗೆ ಮತ್ತು ಕೊಡುವುದು ಅತೀ ಮುಖ್ಯವಾದುದು. ಎರಡನೆಯದಾಗಿ ದೊಡ್ಡ ಕೈಗಾರಿಕೆಗಳು ತಮ್ಮ ಅವಶ್ಯಕತೆಗಳನ್ನು ತಾವೇ ನೋಡಿಕೊಳ್ಳಬಲ್ಲವು.

ಸಾಲಗಳನ್ನು ನೀಡುವ ಪೂರ್ವದಲ್ಲಿ ಸಾಲ ಪಡೆಯುವವರಿಂದ ಸಹಭಪತ್ರತೆಗಳನ್ನು ಕೇಳಿ ಪಡೆಯಲಾಗುತ್ತಿದೆ ಎಂಬ ಶ್ರೀ ಖಂಡೂಭಾಯಿ ದೇಸಾಯಿಯವರ ಹೇಳಿಕೆ ನನ್ನ ಗಮನ ಸೆಳೆಯಿತು. ಈ ಬಗ್ಗೆ ಮಾಡಲಾದ ಒಂದು ವಿಶ್ಲೇಷಣೆಯೂ ನನ್ನ ಬಳಿ ಇದೆ. ಈ ವಿಶ್ಲೇಷಣಾ ಪತ್ರವನ್ನು ಈ ಸದನದ ಮುಂದೆ ಮಂಡಿಸಲು ಅಥವಾ ಶ್ರೀ ಶಾಹೂರವರಿಗಾಗಲೀ ಅಥವಾ ಶ್ರೀ ತ್ಯಾಗಿಯವರಿಗಾಗಲೀ, ಅಥವಾ ಶ್ರೀ ನೆಹರೂರವರಿಗಾಗಲೀ ನೀಡಲು ನಾನು ಸಿದ್ಧನಿದ್ದೇನೆ. ವಿಷಯ ಈ ರೀತಿಯಿದೆ: ಕೇವಲ 15 ಲಕ್ಷ ರೂಪಾಯಿಗಳ ಷೇರು ಬಂಡವಾಳ ಹೊಂದಿದಂಥ ಒಂದು ನಿರ್ದಿಷ್ಟ ಕುಂಪನಿಗೆ 50 ಲಕ್ಷ ರೂಪಾಯಿಗಳ ಸೌಲಭ್ಯವನ್ನು ಒದಗಿಸಿ ಕೊಡಲಾಗಿದೆ. ಈ ಪ್ರಕರಣದಲ್ಲಿ ಭದ್ರತೆ ಎಲ್ಲಿದೆ? ಬಂಡವಾಳ ಆಸ್ತಿಗಳ ಮೇಲೆ ಹಣವನ್ನು ಇಡಿಯಾಗಿ ನೀಡಲಾಗಿದೆ ಎಂದು ಶ್ರೀ ಶಾಹರವರು ತಮ್ಮ ಭಾಷಣದಲ್ಲಿ ಹೇಳಿದರು (ಗದ್ದಲ). ತಮ್ಮ ಪ್ರಾರಂಭಿಕ ಭಾಷಣದಲ್ಲಿ ಸ್ವತಃ ಶ್ರೀ ಶಹಾರವರೇ ಹೇಳಿರುವ ಮಾತುಗಳನ್ನು, ಅವು ದಾಖಲೆಗೆ ಸೇರಿವೆ, ನಾನಿಲ್ಲಿ ಉದಾಹರಿಸುತ್ತಿದ್ದು, ಆ ಬಗ್ಗೆ ಉತ್ತರಿಸುವುದು ಅವರಿಗೆ ಬಿಟ್ಟಿದೆ. ಮೂರನೆಯದಾಗಿ ಕೈಗಾರಿಕಾ ಹಣಕಾಸು ನಿಗಮವು ದೊಡ್ಡ ಪ್ರಮಾಣದ ಘಟಕಗಳಿಗೆ ನೆರವು ನೀಡುವುದಕ್ಕೆ ಸಂಪನ್ಮೂಲವನ್ನು ಪಡೆದಿರುವುದಿಲ್ಲ. ತಮ್ಮ ಅವಶ್ಯಕತೆಗಳನ್ನು ತಾವೇ ಪೂರೈಸಿಕೊಳ್ಳುವ ಶಕ್ತಿ ಅವುಗಳಿಗೆ ಇದೆ. ಅಂತಿಮವಾಗಿ, ಯೋಜನಾ ಆಯೋಗವೂ ಸಹ ಇದೆ. ಮಿಶ್ರ ಅರ್ಥ ವ್ಯವಸ್ಥೆಯ ಬಗ್ಗೆ ಕೆಲವು ಸದಸ್ಯರು ಮಾತನಾಡಿದರು. ಆದರೆ ಬೃಹತ್ ಪ್ರಮಾಣದ ಹಣಕಾಸು ವ್ಯವಸ್ಥೆಯ ಜವಾಬ್ದಾರಿ ಯೋಜನಾ ಆಯೋಗಕ್ಕೆ ಬಿಟ್ಟಿದ್ದು. ನಾನು ಈ ಮೊದಲೇ ಹೇಳಿದಂತೆ ಈ ರಾಷ್ಟ್ರದ ಖಾಸಗೀ ವಲಯದ ಒಟ್ಟಾರೆ ಅವಶ್ಯಕತೆಗಳ ಶೇ. 1 ರಷ್ಟು ಬಂಡವಾಳವನ್ನು ಹೊಂದಿರದ ಈ ಒಂದು ಕೇಂದ್ರ ಕೈಗಾರಿಕಾ ಹಣಕಾಸು ನಿಗಮದಿಂದ ಏನನ್ನೂ ಸಾಧಿಸಲಾಗುವುದಿಲ್ಲ.

ದುರಾದೃಷ್ಟವಶಾತ್ ಇದುವರೆಗೆ ಯಾರೂ ಪ್ರಸ್ತಾಪಿಸದ ಅಂಶವನ್ನು, ಅಂದರೆ ಈ ಕೈಗಾರಿಕಾ ಹಣಕಾಸು ನಿಗಮವು ನೀಡಲಿರುವಸಾಲದ ಮೇಲಿನ ಬಡ್ಡಿ ದರದ ಬಗ್ಗೆ ಈ ಸದನದ ಗಮನವನ್ನು ಸೆಳೆಯಲು ಇಚ್ಛಿಸುತ್ತೇನೆ. ಶೇ. 2 1/4 ರಷ್ಟು ಲಾಭಾಂಶಕ್ಕೆ ಸರ್ಕಾರ ಖಾತರಿ ನೀಡಿದೆ ಎಂದು ಹೇಳಲಾಗಿದೆ. ಈ ಖಾತರಿಯನ್ನು ಪೂರೈಸುವುದಕ್ಕಾಗಿ ನಿಗಮದ ಅಸ್ತಿತ್ವದ ಮೊದಲ ನಾಲ್ಕು ವರ್ಷಗಳಲ್ಲಿ ಸುಮಾರು 26.00 ಲಕ್ಷ ರೂಪಾಯಿಗಳ ತೆರಿಗೆದಾರರ ಹಣವನ್ನು ವ್ಯಯ ಮಾಡಲಾಗಿದೆ. 1950-51 ರಲ್ಲಿದ್ದಂಥ ನಿಗಮದ ಗಳಿಕೆಗೆ ಹೋಲಿಸಿ ನೋಡಿದಾಗ ನಿಗಮವು 1951-52 ರಲ್ಲಿ ಗಳಿಕೆಯನ್ನು ಹೆಚ್ಚಿಸಿಕೊಂಡಿರುವುದು ಕಂಡುಬರುತ್ತದೆ. ಲಾಭಾಂಶದ ಖಾತರಿಯನ್ನು ಪೂರೈಸಲು ವಿನಿಯೋಗಿಸಬೇಕಾಗಿರುವ ತೆರಿಗೆದಾರರ ಹಣ ಸ್ವಲ್ಪ ಸ್ವಲ್ಪವೇ ಕಡಿಮೆಯಾಗುತ್ತಿದೆ. ಒಟ್ಟಾರೆ, ಸಮಸ್ಯೆಯ ಸ್ವರೂಪದ ಬಗ್ಗೆ ಗಮನಹರಿಸಬೇಕು. ಪ್ರಸ್ತುತ, ನಿಗಮದ ಸಾಲ ನೀಡಿಕೆಯ ಬಡ್ಡಿ ದರ ಶೇ. 5 1/2 ರಷ್ಟಿದ್ದು ಅದನ್ನು ಕಳೆದ ವರ್ಷ ಶೇ. 6ಕ್ಕೆ ಹೆಚ್ಚಿಸಲಾಗಿದೆ, ಜೊತೆಗೆ ಅಸಲು ಮತ್ತು ಬಡ್ಡಿಯ ಕಂತುಗಳನ್ನು ತಪ್ಪದೇ ನಿಯತವಾಗಿ ಪಾವತಿಸುವವರಿಗೆ ಇನ್ನೂ ಹೆಚ್ಚಿನ ಶೇ 1/2 ರಷ್ಟು

ಬಡ್ಡಿಯನ್ನು ಮನ್ನಾ ಮಾಡುವುದಾಗಿ ಭರವಸೆಯನ್ನು ನೀಡಲಾಗಿದೆ. ಅಂತರಾಷ್ಟ್ರೀಯ ಹಣಕಾಸು ನಿಧಿಯಿಂದ ಸರ್ಕಾರ ಯಾವ ದರದಲ್ಲಿ ಸಾಲಗಳನ್ನು ಪಡೆಯಲಾಗುತ್ತಿದೆ. ಎನ್ನುವುದನ್ನು ಶ್ರೀ ಶಾಹಾರವರು ಚರ್ಚೆಗೆ ಉತ್ತರ ನೀಡುವಾಗ ಸ್ಪಷ್ಟಪಡಿಸಬೇಕೆಂದು ಇಚ್ಛಿಸುತ್ತೇನೆ. (ನನ್ನ ಮಾಹಿತಿ ಪ್ರಕಾರ) ಬಡ್ಡಿ ದರ ಸುಮಾರು ಶೇ. 4 ರಷ್ಟಿದ್ದು (ನನ್ನ ಗೌರವಾನ್ವಿತ ಸ್ನೇಹಿತರು) ಶ್ರೀ ಬನ್ಸಾಲ್‌ರವರು ಅದು ಸುಮಾರು ಶೇ. 5 ರಷ್ಟಿದೆ ಎಂದು ಹೇಳಿದರು.

ನನಗೆ ದರದ ಬಗ್ಗೆ ಗೊತ್ತಿಲ್ಲ. ಇದನ್ನು ತಿಳಿಸುವುದು ಸರ್ಕಾರಕ್ಕೆ ಬಿಟ್ಟಿದ್ದು. ಪ್ರಶ್ನೆಯೆಂದರೆ, ಪ್ರಸ್ತುತ, ಈ ರಾಷ್ಟ್ರದ ಕೈಗಾರಿಕಾ ಅಭಿವೃದ್ಧಿಯನ್ನು ದೃಷ್ಟಿಯಲ್ಲಿಟ್ಟುಕೊಂಡು ಸಾಲ ನೀಡಿಕೆ ಬಡ್ಡಿ ದರವನ್ನು ಲೆಕ್ಕಹಾಕಲಾಗಿದೆಯೇ ಅದು ಸಮರ್ಪಕ ದರವೆ? ಕೈಗಾರಿಕೆಗಳ ಸೌಲಭ್ಯಗಳನ್ನು ಉಪಯೋಗಿಸಿಕೊಳ್ಳಲು ಮುಂದೆ ಬರುವಂತೆ ನಿಜವಾಗಿಯೂ ನೀವು ಸಹಾಯ ಮಾಡುತ್ತಿದ್ದೀರಾ? ಭಾರತದ ಯಾವ ಜಂಟಿ ಸ್ಟಾಕ್ ಬ್ಯಾಂಕು ಅಥವಾ ಅನುಸೂಚಿತ ಬ್ಯಾಂಕುಗಳು ಈ ಶೇ. $5^1/_2$ ದರದಲ್ಲಿ ಸಾಲವನ್ನು ನೀಡಲು ತಯಾರಿವೆ ಎನ್ನುವುದನ್ನು (ಮಾನ್ಯ ಸ್ನೇಹಿತರು) ಶ್ರೀ ಶಾಹಾರವರು ಹೇಳಬಲ್ಲರೆ? ನನ್ನ ಪ್ರಶ್ನೆಯಿಷ್ಟೆ ಕೈಗಾರಿಕಾ ವಿಸ್ತರಣೆಯ ನಿಟ್ಟಿನಲ್ಲಿ ಒಂದು ಸಕಾರಾತ್ಮಕ ನಿರ್ದೇಶಕತ್ವದ ಕಾರ್ಯನೀತಿ ಹಾಗೂ ಈ ವಿಧೇಯಕದ ಜವಾಬ್ದಾರಿ ಹೊತ್ತಂಥ ಮಾನ್ಯ ಸಚಿವರು ತಮ್ಮ ಪ್ರಾರಂಭದ ಭಾಷಣದಲ್ಲೇ ಹೇಳಿದಂತೆ ಹಣಕಾಸು ಮಾರುಕಟ್ಟೆಯಲ್ಲಿ ಹಣವನ್ನು ಪಡೆಯಲು ಸಾಧ್ಯವಾಗದಂಥ ಅವಶ್ಯಕತೆಯುಳ್ಳ ಚಿಕ್ಕಪುಟ್ಟ ಘಟಕಗಳಿಗೆ ಕಡಿಮೆ ದರದಲ್ಲಿ ಹಣಕಾಸು ವ್ಯವಸ್ಥೆ ಮಾಡುವ ಕ್ರಮಗಳೇನಾದರೂ ಇದೆಯೇ ನಾನೀಗಾಗಲೇ ಹೇಳಿದ ಹೇಳಿಕೆಗೆ ಸಂಬಂಧಪಟ್ಟಂತೆ ಈ ಪ್ರಶ್ನೆಯನ್ನು ಎತ್ತಿದ್ದೇನೆ, ಪುನಃ ಈಗ ಪುನರುಚ್ಚಿಸುತ್ತಿದ್ದೇನೆ, ಅದೇನೆಂದರೆ, ಈ ರಾಷ್ಟ್ರದಲ್ಲಿ ಅನುಸರಿಸಬೇಕಾಗಿರುವುದು ಜಪಾನೀ ಮಾದರೀ ವ್ಯವಸ್ಥೆಯನ್ನೇ ಹೊರತು ಶ್ರೀ ಬನ್ಸಾಲ್‌ರವರು ಪ್ರಸ್ತಾಪಿಸಿದಂತೆ ಕೇವಲ ವಾಣಿಜ್ಯಾಧಾರಿತ ದೃಷ್ಟಿಕೋನವನ್ನಲ್ಲ.

ಕೈಗಾರಿಕೆಯ ವೈವಿಧ್ಯತೆ, ಸಕಾರಾತ್ಮಕ ಕೈಗಾರಿಕಾ ನೀತಿ ಹಾಗೂ ಕಡಿಮೆ ದರದಲ್ಲಿ ಹಣ ನೀಡುವ ವ್ಯವಸ್ಥೆ ಆಗದ ಹೊರತು ಈ ರಾಷ್ಟ್ರ ಮುಂದುಬರಲು ಸಾಧ್ಯವಾಗುವುದಿಲ್ಲವೆಂದು ನಾನು ಮನಗಂಡಿದ್ದೇನೆ.

ನಾನು ಬಹಳ ಸಂಕ್ಷಿಪ್ತವಾಗಿ ಹೇಳುತ್ತೇನೆ. ತಿದ್ದುಪಡಿ ವಿಧೇಯಕದ ಅತ್ಯಂತ ಮುಖ್ಯ ಖಂಡಗಳಾದ 11 ಮತ್ತು 12ನೇ ಖಂಡಗಳ ಕಡೆ ಬರುತ್ತಿದ್ದೇನೆ. ಭದ್ರತೆಗಳ ಮಾರಾಟವನ್ನು ತಪ್ಪಿಸುವ ದೃಷ್ಟಿಯಿಂದ 90 ದಿನಗಳ ಒಳಗೆ ಹಿಂತಿರುಗಿಸಬಹುದಾದ ಸಾಲವನ್ನು ರಿಸರ್ವ್ ಬ್ಯಾಂಕಿನಿಂದ ಪಡೆಯಲು ಕಂಡಿಕೆ 11ರ ಅಡಿಯಲ್ಲಿ ಉದ್ದೇಶಿಸಲಾಗಿದೆ. ನಿಗಮ ಬಾಂಡುಗಳ ಮತ್ತು ಡಿಬೆಂಚರುಗಳ ಏರಿಳಿತಗಳ ಕಾಲದಲ್ಲಿ ರಿಸರ್ವ್ ಬ್ಯಾಂಕಿನಿಂದ 18 ತಿಂಗಳ ಅವಧಿಗೆ ಸಾಲವನ್ನು ಪಡೆಯಬಹುದಾಗಿದೆ. ಇದರಿಂದಾಗಿ ತೆಗೆದುಕೊಳ್ಳುವ ಸಾಲದ ಗರಿಷ್ಠ ಮೊತ್ತ 3 ಕೋಟಿ ರೂ.ಗಳಿಗೆ ಸೀಮಿತಗೊಳ್ಳುತ್ತದೆ. ವಿಧೇಯಕದಲ್ಲಿ ಪ್ರಸ್ತುತಪಡಿಸಿರುವ ಹಣದ

ಎರಡುಪಟ್ಟು ಹೆಚ್ಚು ಹಣವಾಗಬೇಕೆಂಬುದು ನನ್ನ ಇಚ್ಛೆ. ಕೈಗಾರಿಕಾ ಹಣಕಾಸು ನಿಗಮದ ಸಂಪನ್ಮೂಲವನ್ನು ಕಡೆಯಪಕ್ಷ ನಾಲ್ಕು ಅಥವಾ ಐದು ಪಟ್ಟು ಹೆಚ್ಚಿಸದಿದ್ದಲ್ಲಿ ನಾವು ಅದರಿಂದ ನಿರೀಕ್ಷಿಸುತ್ತಿರುವ ಉದ್ದೇಶವೇ ಈಡೇರುವುದಿಲ್ಲವೆಂಬುದು ನನ್ನ ಅನಿಸಿಕೆ. ಸಾಲ ತೀರಾ ಅನಿವಾರ್ಯವಾಗಿದ್ದು, ಅದಕ್ಕಾಗಿ ಅನೇಕ ಒತ್ತಡಗಳು ಬಂದಿರುವ ಕಾರಣ, ವಿಧೇಯಕವನ್ನು ಸದನದ ಸಲಹಾ ಸಮಿತಿಯ ಮುಂದೆಯೂ ತರದೇ, ಮೇಲಾಗಿ ಈ ಸದನಗಳ ನಿಯಮಗಳು ಮತ್ತು ವಿಶೇಷಾಧಿಕಾರಗಳ ಮೇರೆಗೆ ನಾನು ಮತ್ತು ತಾವೆಲ್ಲರೂ ಮಾಹಿತಿ ಹೊಂದುವ ಹಕ್ಕುಳ್ಳವರಾಗಿದ್ದಾಗ್ಯೂ ಕೂಡ ಮಾಹಿತಿಯನ್ನು ಒದಗಿಸಿಕೊಡುವ ಜವಾಬ್ದಾರಿಯನ್ನೂ ನಿಭಾಯಿಸದೇ, ಈ ನಿಟ್ಟಿನಲ್ಲಿ ಮುಂದುವರೆಯಬೇಕಾಯಿತೆಂಬ ಉನ್ನತಮಟ್ಟದ ಹೇಳಿಕೆಯನ್ನು ಕೇಳಿ ನನಗೆ ಆಶ್ಚರ್ಯವಾದರೂ ಖಂಡ 12ನ್ನು ಸ್ವಾಗತಿಸುತ್ತೇನೆ. ನಾವು ಆತುರರಾಗಿದ್ದುದರಿಂದ ಆತುರವಾಗಿ ಮುಂದುವರಿಯಬೇಕಾಯಿತೆಂಬ ಹೇಳಿಕೆ ನನ್ನ ಕಿವಿಗೆ ಬಿದ್ದಿತು. ಅಂತೆಯೇ, ಈ ವಿಷಯದಲ್ಲಿ ನನಗೆ ಯಾವುದೇ ಕಹಿ ಭಾವನೆಯೂ ಇಲ್ಲ. ಶ್ರೀ ಬನ್ಸಾಲ್‌ರವರು ಹೇಳಿದ ಹಾಗೆ ಅಂತಾರಾಷ್ಟ್ರೀಯ ಹಣಕಾಸು ನಿಧಿಯಿಂದ ಅಥವಾ ಅಂತಾರಾಷ್ಟ್ರೀಯ ಬ್ಯಾಂಕುಗಳಿಂದ ಭಾರತಕ್ಕೆ ಮಂಜೂರಾಗುವ ಸೌಲಭ್ಯಗಳನ್ನು ರಾಜಕೀಯ ದೃಷ್ಟಿಯಿಂದ ನೋಡಬಾರದು, ವಿಶ್ವ ಸಂಸ್ಥೆಯ ಯೋಜನೆಗೆ ನಮ್ಮ ಕೊಡುಗೆಯ ಮಟ್ಟವನ್ನು ಗಮನಿಸಿದಾಗ ನಾವು ಆ ಯೋಜನೆಯ ಸಹಾಯಕ್ಕೆ ಸರ್ವ ರೀತಿಯಲ್ಲೂ ಬದ್ಧರಾಗಿದ್ದೇವೆಂಬುದು ನನ್ನ ಅನಿಸಿಕೆ. ಅಂತಾರಾಷ್ಟ್ರೀಯ ಹಣಕಾಸು ನಿಧಿ ಮತ್ತು ಬ್ಯಾಂಕುಗಳಿಗೆ ಭಾರತ ನೀಡಿರುವ 400 ಮಿಲಿಯನ್ ಡಾಲರ್‌ಗಳ ಕೊಡುಗೆಯನ್ನು ತಾವು ಜ್ಞಾಪಿಸಿಕೊಳ್ಳಬೇಕು. ನಿಧಿಗೆ ನಾವು ನೀಡಿರಬಹುದಾದ ಅಥವಾ ಇನ್ನೂ ನೀಡಲು ಬದ್ಧವಿರುವ ಹಣದ 1/4 ಭಾಗದಷ್ಟು ಹಣವನ್ನು ನಾವು ಇದುವರೆಗೂ ಪಡೆದಿರುವುದಿಲ್ಲ. ಇದರರ್ಥ ವಿಶ್ವದ ಅಭಿವೃದ್ಧಿಗಾಗಿ, ವಿಶ್ವ ಸಮುದಾಯಕ್ಕೆ ಸ್ವಲ್ಪ ಸಮಯದಲ್ಲಿಯೇ ಅಧಿಕ ಹಣವನ್ನು ನಾವು ನೀಡಿದ್ದೇವೆ .

ನಾನು ಈ ಮೊದಲೇ ಪ್ರಸ್ತಾಪಿಸಿದಂತೆ ಖಂಡ 13 ಅನ್ನು ವಿರೋಧಿಸುತ್ತೇನೆ. ( ಈ ಬಗ್ಗೆ ವಿವರವಾಗಿ ಚರ್ಚಿಸಲು ನನಗೆ ಇನ್ನೊಂದು ಅವಕಾಶ ಲಭಿಸುವುದೆಂದು ಭಾವಿಸುತ್ತೇನೆ.) ಹಣ ತೀರಾ ಅತ್ಯಲ್ಪವೆಂಬ ನೆಪಒಡ್ಡಿ ಸಾಲದ ಮಿತಿಯನ್ನು 50 ಲಕ್ಷದಿಂದ 1 ಕೋಟಿ ರೂಪಾಯಿಗಳಿಗೆ ಹೆಚ್ಚಿಸುತ್ತಿರುವುದರಿಂದ, ನಾನು ಈ ಮೊದಲೇ ಹೇಳಿದ ಹಾಗೆ, ನೀಡಲಿರುವ ಸಾಲದ ಹಣವನ್ನು ತಮ್ಮದೇ ಗುತ್ತಿಗೆಯನ್ನಾಗಿ ಮಾಡಿಕೊಳ್ಳುವ ಅಪಾಯಕರ ದೃಷ್ಟಿಕೋನ ಹೆಚ್ಚಾಗಿದ್ದು ಪ್ರಸ್ತುತ ವಿಧೇಯಕದ ಉದ್ದೇಶಿತ ಉಪಬಂಧಗಳನ್ನು ದುರುಪಯೋಗಪಡಿಸಿಕೊಳ್ಳಬಹುದಾದ ಸಾಧ್ಯತೆಗಳ ಬಗ್ಗೆ (ಇಲ್ಲಿರುವ ನನ್ನ ಮಾನ್ಯ ಸ್ನೇಹಿತರು) ಈ ಸದನ ಎಚ್ಚರವಹಿಸುವುದೆಂದು ನಾನು ನಂಬುತ್ತೇನೆ.

ಇಷ್ಟನ್ನು ಹೇಳುತ್ತಾ ತಮ್ಮಲ್ಲಿ ಇನ್ನೊಮ್ಮೆ ಮನವಿ ಮಾಡುತ್ತಾ ನಾನು ಮುಕ್ತಾಯ ಮಾಡಲು ಇಚ್ಛಿಸುತ್ತೇನೆ. ಭಾರತ ಸರ್ಕಾರ ನಡವಳಿಕೆಗಳು ಈ ಸದನದ ಹಕ್ಕು ಮತ್ತು ವಿಶೇಷಾಧಿಕಾರಗಳನ್ನು ತಿರುಚಿ ಹಾಕಿದೆ. ತೆರಿಗೆದಾರರ ಅಗಾಧ ಪ್ರಮಾಣದ ಹಣವನ್ನು

ಒಳಗೊಂಡಿರುವ ಇದು ಬಹುತೇಕ ಒಂದು ಹಣಕಾಸು ವಿಧೇಯಕ. ಈ ಸದನ ಮಾಹಿತಿಯನ್ನು ಪಡೆಯುವ ಹಕ್ಕನ್ನು ಹೊಂದಿದೆ. ಈ ಕುರಿತು ಮಾನ್ಯ ಉಪ ಸಭಾಧ್ಯಕ್ಷರು ಮೊದಲನೇ ದಿನವೇ ರೂಲಿಂಗ್ ನೀಡಿದ್ದಾರೆ. ನನಗೆ ಗೊತ್ತಿರುವ ಹಾಗೆ ಹಿಂದಿನ ಅಧಿವೇಶನದಲ್ಲಿ ಮಾನ್ಯ ವಾರ್ತಾ ಮತ್ತು ಪ್ರಸಾರ ಸಚಿವರು, ಆಕಾಶವಾಣಿಯು ಯಾರೋ ಒಬ್ಬರಿಗೆ ನೀಡಿದ ಯಾವುದೋ ಗುತ್ತಿಗೆಯ ಬಗ್ಗೆ ಮಾಹಿತಿಯನ್ನು ನೀಡಲು ನಿರಾಕರಿಸಿದಾಗ ಸಬಾಧ್ಯಕ್ಷರು ಆ ಮಾಹಿತಿಯನ್ನು ಸದನದ ಮುಂದೆ ಮಂಡಿಸುವಂತೆ ರೂಲಿಂಗ್ ನೀಡಿದ್ದರು. ಸರ್ಕಾರ, ಉನ್ನತ ಸ್ಥಾನದಲ್ಲಿರುವ ಒಂದೆರಡು ವ್ಯಕ್ತಿಗಳ ಹಿತಾಸಕ್ತಿಗಳನ್ನು ಕಾಪಾಡಲು ಪ್ರಯತ್ನಿಸುತ್ತಿದೆ ಎಂಬ ಏಕೈಕ ಕಾರಣದಿಂದ ಪ್ರಸ್ತುತ ಪ್ರಕರಣದಲ್ಲಿ ಈ ಸದನವನ್ನು ನಡೆಸಿಕೊಂಡು ಬಂದ ರೀತಿಯ ಬಗ್ಗೆ ನನ್ನ ಸಹೋದ್ಯೋಗಿಗಳು ಅವರು ಯಾವುದೇ ಪಕ್ಷದವರಿರಲಿ, ಹಗುರವಾಗಿ ನೋಡುವುದಿಲ್ಲವೆಂದು ಭಾವಿಸುತ್ತೇನೆ. ಇದು ಸಾರ್ವಭೌಮ ಸಂಸತ್ತೆಂದು ನಾನು ಪ್ರತಿಪಾದಿಸುತ್ತೇನೆ. ಯಾರನ್ನೂ ಇಲ್ಲಿ ರಕ್ಷಣೆ ಮಾಡುವ ಹಾಗಿಲ್ಲ. ಇವರೆಲ್ಲರಿಗಿಂತಲೂ ನಮ್ಮ ದೇಶ ಹೆಚ್ಚು, ನನ್ನ ಈ ಮನವಿ ನಿರುಪಯುಕ್ತವಾಗುವುದಿಲ್ಲವೆಂದು ನಾನು ಬಾವಿಸುತ್ತೇನೆ.

## ಸರ್ಕಾರಿ ಹಣಕಾಸು ನಿಗಮಗಳು II *

ಕಳೆದ ವಾರ, ಅಂದರೆ 1956ರ ಆಗಸ್ಟ್‌ನಲ್ಲಿ ಈ ಚರ್ಚೆಯ ಮೇಲೆ ನಿಲುವಳಿ ಮಂಡಿಸುವ ಅವಕಾಶ ನನಗೆ ದೊರೆತಿದ್ದಾಗ, ನಾನು ನಿರೀಕ್ಷಿಸಿದ್ದೇನೆಂದರೆ, ಈ ಸದನದ ಸರ್ವಾನುಮತದ ಇಚ್ಛೆಯಂತೆ, ಸರ್ಕಾರಿ ಹಣಕಾಸು ನಿಗಮಗಳ ಕಾರ್ಯನಿರ್ವಹಣೆಯ ಫಲಿತಾಂಶಗಳನ್ನು ಈ ಸದನದ ಗ್ರಂಥಾಲಯದಲ್ಲಿಡಲು ಶ್ರೀ ಗುಹಾರವರು ಕೆಲವು ಪ್ರತಿಗಳನ್ನಾದರೂ ಒದಗಿಸುತ್ತಿದ್ದರು ಎಂದು. ಸ್ವಲ್ಪ ಸಮಯದ ಹಿಂದಷ್ಟೇ ನಾನು ಲಾಬಿಯಲ್ಲಿ ಮಾನ್ಯ ಸ್ನೇಹಿತರ ಜೊತೆ ಮಾತನಾಡುತ್ತಿದ್ದಾಗ ಅವರು ನನಗೆ ಹೇಳಬೇಕಾಗಿ ಬಂದಂಥ ಒಂದು ಅಂಶವನ್ನು ಬಹಿರಂಗಗೊಳಿಸಬೇಕಾಗಿದೆ. (ಅವರ ಅಸಹಾಯಕತೆಯನ್ನು ಒಪ್ಪಿಕೊಳ್ಳಲು ನನಗೆ ಸಾಧ್ಯವಾಗುತ್ತಿಲ್ಲ). ಅದೇನೆಂದರೆ, ಈ ಸದನದಲ್ಲಿ ಮಂಡಿಸಬೇಕಾದ ಸರ್ಕಾರಿ ಕೈಗಾರಿಕಾ ಹಣಕಾಸು ನಿಗಮಗಳ ವಾರ್ಷಿಕ ವರದಿಯ ಪ್ರತಿಗಳನ್ನು ಪಡೆದುಕೊಳ್ಳಲು ಅವರಿಗೇ ಸಾಧ್ಯವಾಗಲಿಲ್ಲವೆಂಬುದು. ಈ ಸಂಸತ್ತು ಒಪ್ಪಿಗೆ ನೀಡಿರುವ ಕಾನೂನುಗಳ ಮೇರೆಗೆ ಸ್ಥಾಪಿತವಾಗಿರುವ, ಸಾರ್ವಜನಿಕ ನಿಗಮಗಳು ಈ ಸದನದ ಪರಿಶೀಲನೆಗೆ ಒಳಗಾಗಲು ತೋರುತ್ತಿರುವ ಅವಿಧೇಯತೆ ಬಗ್ಗೆ ಸದನ ಅನೇಕ ಬಾರಿ ತೀವ್ರ ಗಂಭೀರವಾಗಿ ಪರಿಗಣಿಸಿರುವುದನ್ನು, ತಾವು, ಮಾನ್ಯ ಸಭಾಧ್ಯಕ್ಷರು ನೆನಪಿಸಿಕೊಳ್ಳಬೇಕು. ಸಾರ್ವಜನಿಕ ನಿಗಮ ಹಾಗೂ ಕೈಗಾರಿಕಾ ಹಣಕಾಸು ನಿಗಮಗಳ ಮೇಲಿನ ಸಂಸದೀಯ ನಿಯಂತ್ರಣ ಕುರಿತಂತೆ ಚರ್ಚೆಯನ್ನು ಪ್ರಾರಂಭಿಸುವ ಸದವಕಾಶ ಕನಿಷ್ಠ ಎರಡು ಬಾರಿ ನನಗೆ ಒದಗಿಬಂದಿತು. ಅಧಿಕಾರ ಸ್ಥಾನದಲ್ಲಿರುವವರು ಸಂಶಯಾತೀತವಾಗಿರಬೇಕು ಎನ್ನುವುದನ್ನು ಖಚಿತ ಪಡಿಸಿಕೊಳ್ಳುವ ನಿಟ್ಟಿನಲ್ಲಿ, ಅಂದರೆ ಕೈಗಾರಿಕಾ ಹಣಕಾಸು ನಿಗಮದ ಕಾರ್ಯ ಚಟುವಟಿಕೆಗಳು ಸಂಶಯಾತೀತವಾಗಿರಬೇಕು ಎನ್ನುವುದನ್ನು ಪ್ರತಿಪಾದಿಸುವ ನನ್ನ ವಾದಕ್ಕೆ ಆ ಸಮಯದಲ್ಲಿ ಶ್ರೀ ಗುಹಾರವರು ನನಗೆ ಅಪಾರ ಬೆಂಬಲ ವ್ಯಕ್ತಪಡಿಸಿದ್ದರೆನ್ನುವುದನ್ನು ಮರೆತಿಲ್ಲ. ಶ್ರೀ ಗುಹಾರವರು ಅತ್ತ ಕಡೆ ಹೋಗಿ, ಆಡಳಿತ ಪಕ್ಷದಲ್ಲಿ ಒಂದು ಸ್ಥಾನ ಪಡೆದು ಕೈಗಾರಿಕಾ ಹಣಕಾಸು ನಿಗಮಗಳನ್ನು ಒಂದು ಗಟ್ಟಿಯಾದ ನೆಲೆಯಲ್ಲಿ ನಿಲ್ಲಿಸಲು ಶ್ರಮವಹಿಸಿರುವುದು ನನಗೆ ಸಂತಸ ತಂದಿದೆ.

ಶ್ರೀ ಗುಹಾರವರಿಗೆ ಸಚಿವರಾಗಿ ಬಡ್ತಿ ದೊರೆತಾಗಿನಿಂದಲೂ ಯಾವುದೇ ಪ್ರಚಾರವನ್ನು ಬಯಸದೆ ಎಲೆಮರೆಯಕಾಯಿಯಾಗಿ, ಆದರೆ ಸ್ಥಿರತೆಯಿಂದ ಕಾರ್ಯ ನಿರ್ವಹಿಸುತ್ತಿರುವುದಕ್ಕೆ ಅವರನ್ನು ನಾನು ಅಭಿನಂದಿಸುತ್ತೇನೆ.

ಮಾನ್ಯ ಸಭಾಧ್ಯಕ್ಷರೆ, ಒಂದು ಅಂಶದ ಮೇಲೆ ತಮ್ಮ ವೈಯಕ್ತಿಕ ಗಮನವನ್ನು ಸೆಳೆಯಬಯಸುತ್ತೇನೆ. ಸರ್ಕಾರದ ಪರವಾಗಿ ಪ್ರತಿಬಾರಿಯೂ ಅದೇ ಸಬೂಬನ್ನು ಹೇಳಿಕೊಂಡು ಬರಲಾಗುತ್ತಿದೆ. "ಓಹ್ ಈ ನಿಗಮಗಳು ಸ್ವಾಯತ್ತ ಸಂಸ್ಥೆಗಳು, ಕೇವಲ

* ಸರ್ಕಾರಿ ಹಣಕಾಸು ನಿಗಮಗಳ (ತಿದ್ದುಪಡಿ) ವಿದೇಯಕದ ಮೇಲಿನ ಚರ್ಚೆಯಿಂದ, ಲೋಕಸಭಾ 30ನೇ ಆಗಸ್ಟ್ 1956. ಸಿ.ಸಿ. 4909-4921.

ನಿಗಮಗಳಷ್ಟೆ, ಇವುಗಳ ದಿನನಿತ್ಯದ ಕಾರ್ಯ ಚಟುವಟಿಕೆಗಳಲ್ಲಿ ಭಾಗವಹಿಸಲು ನಮಗೆ ಸಾಧ್ಯವಾಗಲಾರದು ಇತ್ಯಾದಿ, ಇತ್ಯಾದಿ." ಆದರೆ, ನನಗೆ ಅನಿಸಿದಂತೆ ಇದೊಂದು ಬಹು ಮುಖ್ಯವಾದ ಪ್ರಶ್ನೆ. ಕಳೆದ $4^1/_2$ ವರ್ಷಗಳಿಂದಲೂ ಈ ಒಂದು ನಿರ್ದಿಷ್ಟ ಪ್ರತಿಪಾದನೆಯನ್ನು ಸದನ ಗಮನಿಸುತ್ತಲೇ ಬಂದಿದೆ. ಅಂದರೆ ಈ ನಿಗಮಗಳನ್ನು ಸ್ಥಾಪಿಸುವ ಉದ್ದೇಶದಿಂದ ಮಾತ್ರ ಈ ಸದನದಲ್ಲಿ ಕಾನೂನುಗಳು ಪಾಸಾಗುತ್ತವೆ. ಸ್ಥಾಪನೆಯಾದ ಕೂಡಲೇ ಅವು ನಮ್ಮಿಂದ ಕಣ್ಮರೆಯಾಗುತ್ತವೆ. ಎಲ್ಲೆಯನ್ನು ದಾಟುತ್ತವೆ, ಆಗ ಹೇಳಲಾಗುತ್ತದೆ, ಇದು ನಿಷಿದ್ಧ ಪ್ರದೇಶ, ಅತ್ತ ಕಡೆ ನೀವು ದೃಷ್ಟಿ ಹಾಯಿಸುವ ಹಾಗಿಲ್ಲ ಕರ್ತವ್ಯಗಳನ್ನು ನಿರ್ವಹಿಸಿಕೊಂಡು ಹೋಗುವ ಜನ ಅಲ್ಲಿದ್ದಾರೆ ಇತ್ಯಾದಿ., ಇತ್ಯಾದಿ., ಎಂದು.

ದಾಮೋದರ್ ಕಣಿವೆ ನಿಗಮವೇ ಆಗಲಿ, ಅಥವಾ ಕೈಗಾರಿಕಾ ಹಣಕಾಸು ನಿಗಮವೇ ಇರಲಿ, ಅಥವಾ ಸಿಂಧ್ರಿ ಅಥವಾ ಷಿಪ್‌ಯಾರ್ಡ್ ಅಥವಾ ಹಣಕಾಸು ನಿಗಮವೇ ಇರಲಿ, ಅವುಗಳ ಸಂಬಂಧದಲ್ಲಿ ತರಲಾದ ಈ ವಿಧೇಯಕದಲ್ಲಿ ಅದೇ ಪ್ರತಿಪಾದನೆ ಪುನಃ ನಮ್ಮ ಮುಂದಿದೆ. ಈ ಸದನ ಹೆಚ್ಚೂ ಕಡಿಮೆ ತನ್ನ ಅವಧಿಯನ್ನು ಪೂರೈಸಿದ್ದು ಹೊಸ ಚುನಾವಣೆಗಳು ಹತ್ತಿರ ಬರುತ್ತಿರುವುದರಿಂದ, ಈ ಸಂಸತ್ತು ಪಾಸು ಮಾಡಿದ ಕಾನೂನುಗಳ ಅಡಿಯಲ್ಲಿ ಸ್ಥಾಪಿತವಾಗುವ ನಿಗಮಗಳ ಕಾರ್ಯ ಚಟುವಟಿಕೆಗಳಿಗೆ ಸಂಬಂಧಪಟ್ಟಂತೆ ಸಂಶಯದ ನೆರಳೂ ಸುಳಿಯದಂತೆ ನೋಡಿಕೊಳ್ಳಲು ಈ ಸದನಕ್ಕಿರಬೇಕಾದ ಹಕ್ಕು ಮತ್ತು ವಿಶೇಷಾಧಿಕಾರಿಗಳನ್ನು ಪ್ರಪ್ರಥಮವಾಗಿ ನಿಗದಿಪಡಿಸಿಬೇಕೆಂದು ನಾನು ವಿನಂತಿಸುತ್ತೇನೆ. ವಿವಿಧ ರಾಜ್ಯಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಈ ಕೈಗಾರಿಕಾ ಹಣಕಾಸು ನಿಗಮಗಳ, (15 ನಿಗಮಗಳು) ಕಾರ್ಯ ನಿರ್ವಹಣೆಯ ಫಲಿತಾಂಶಗಳನ್ನು ಗಮನಿಸುವ ಮುಕ್ತ ಅವಕಾಶವನ್ನು ಪಡೆಯದೇ ಅವುಗಳ ಕಾರ್ಯ ವೈಖರಿಯನ್ನು ಕುರಿತು ಈ ಸದನದಲ್ಲಿ ಚರ್ಚೆ ಮಾಡುವುದರಲ್ಲಿ ಯಾವುದೇ ಅರ್ಥವಿಲ್ಲ. ಕಳೆದವಾರ ಈ ಸದನದಲ್ಲಿ ವ್ಯಕ್ತವಾದ ಸರ್ವಾನುಮತ ಇಚ್ಛೆಯ ಹಿನ್ನೆಲೆಯಲ್ಲೂ ಈ ಕೈಗಾರಿಕಾ ನಿಗಮಗಳ ವರದಿಗಳನ್ನು ನೋಡಲು ಶ್ರೀ ಗುಹಾರವರಿಗೆ ಆಸ್ಪದವಾಗಿಲ್ಲದಿರುವುದು ಹಾಗೂ ಅವುಗಳನ್ನು ಒದಗಿಸಿಕೊಡುವುದೂ ಸಾಧ್ಯವಾಗದಿರುವುದು ಶೋಚನೀಯ ಸಂಗತಿ. ಮಾನ್ಯ ಸಭಾಧ್ಯಕ್ಷರು ಈ ವಿಷಯವನ್ನು ಒಂದು ನೀತಿಯ ವಿಷಯವನ್ನಾಗಿ ಪರಿಗಣಿಸಬೇಕು.

ಇದೊಂದು ಸರ್ಕಾರದ ಹೊಣೆಯಾಗಿರುವುದರಿಂದ, ಸರ್ಕಾರ ಇದನ್ನು ಕಟ್ಟುನಿಟ್ಟಾಗಿ ಜಾರಿಗೆ ತರಬೇಕು. ಅಂದರೆ ಸಾಕಷ್ಟು ಮಾಹಿತಿಯನ್ನು ಮುಂಚಿತವಾಗಿಯೇ ಒದಗಿಸಬೇಕು ಇಲ್ಲದಿದ್ದಲ್ಲಿ ಇಂಥ ವಿಷಯಗಳ ಮೇಲಿನ ಚರ್ಚೆಯನ್ನು ಮುಂದಕ್ಕೆ ಹಾಕಲು ಅಗತ್ಯ ವ್ಯವಸ್ಥೆ ಮಾಡಬೇಕು. ಚರ್ಚೆಯನ್ನು ಮುಂದಕ್ಕೆ ಹಾಕಲು ಈ ಸದನ ಒಪ್ಪುತ್ತದೆ. ಇಂಥ ಪ್ರಸಕ್ತ ಸಂದರ್ಭದಲ್ಲಿ, ನಮಗೊದಗಿಸಿದ ಅಪೂರ್ಣ ಮತ್ತು ದೋಷಪೂರಿತ ಮಾಹಿತಿಯ ಮೇಲೆ ಅಥವಾ ನಮ್ಮ ಸ್ವಪ್ರಯತ್ನದಿಂದ ಪಡೆಯಲು ಸಾಧ್ಯವಾದ ಮಾಹಿತಿಯ ಆಧಾರದ ಮೇಲೆ ಸಾಧ್ಯವಿದ್ದಷ್ಟು ನಮ್ಮ ಕರ್ತವ್ಯವನ್ನು ಸಮರ್ಪಕವಾಗಿ ನಿರ್ವಹಿಸಬೇಕಾಗಿದೆ.

ಇದೊಂದು ಅಧಿಕಾರದ ಕ್ರಮವಾಗಿರುವುದರಿಂದ ನಾನಿದನ್ನು ಹೃತ್ಪೂರ್ವಕವಾಗಿ ಸ್ವಾಗತಿಸುತ್ತೇನೆ. 1951ರ ಮುಂಚಿನ ಅಧಿನಿಯಮವನ್ನು ತಿದ್ದುಪಡಿ ಮಾಡುವ ಪ್ರಯತ್ನದ ಕ್ರಮ ಇದಾಗಿದೆ. ಅಧಿಕಾರದ ಕ್ರಮ ಇದಾಗಿರುವುದರಿಂದ, ಈ ವಿಧೇಯುಕ ಅಧಿನಿಯಮವಾಗುವ ಪೂರ್ವದಲ್ಲಿ ವಿಧೇಯಕದ ಪರಧಿಯೊಳಗೆ ಸ್ಥಾಪಿಸಲು ಉದ್ದೇಶಿಸಿರುವ ನಿಗಮಗಳು ಸಮರ್ಪಕವಾಗಿ ಕಾರ್ಯನಿರ್ವಹಿಸುವುದನ್ನು ಖಚಿತಪಡಿಸಿಕೊಳ್ಳಲು ಸರ್ಕಾರಕ್ಕೆ ತನ್ನದೇ ಆದ ಸಾಧನೋಪಾಯಗಳು ಇರಬೇಕು. ಹಾಗೆಯೇ ಆ ನಿಟ್ಟಿನಲ್ಲಿ ನಿರ್ಣಯ ತೆಗೆದುಕೊಳ್ಳುವ ಅಧಿಕಾರ ಸರ್ಕಾರಕ್ಕೆ ಇರಬೇಕೆಂದು ನಾನು ಬಲವಾಗಿ ಪ್ರತಿಪಾದಿಸುತ್ತೇನೆ. ಆದರೆ ಈ ನಿಗಮಗಳನ್ನು ಸರಿಯಾದ ರೀತಿಯಲ್ಲಿ ನಡೆಸಿಕೊಂಡು ಬರುತ್ತಿಲ್ಲ. ನನ್ನ ಹೇಳಿಕೆಯಲ್ಲಿ ವ್ಯತ್ಯಾಸವೇನಾದರೂ ಇದ್ದಲ್ಲಿ ನನ್ನ ಸ್ನೇಹಿತರಾದ ಶ್ರೀ ಗುಹಾರವರು ಈ ಸದನಕ್ಕೆ ರುಜುವಾತುಪಡಿಸಲಿ. ಮತ್ತೊಂದು ಕಡೆ, ಅಂದರೆ ಈ ಸದನದ ಸಮಿತಿಗಳೊಂದರಲ್ಲಿ ಕಾರ್ಯನಿರ್ವಹಿಸುವ ಅವಕಾಶ ನನಗೆ ದೊರೆತಿದ್ದಾಗ, ಕಳೆದ ತಿಂಗಳಷ್ಟೇ ಈ ಪ್ರಶ್ನೆ ಚರ್ಚೆಗೆ ಬಂದಿತು. ಸದನದ ಆ ಸಮಿತಿಯಲ್ಲಿ ನಾವು ಪಡೆಯಲು ಸಾಧ್ಯವಾದಂಥ ಮಾಹಿತಿಯ ವಿಮರ್ಶೆಯನ್ನು ಈಗ ಮಾಡಲು ಪ್ರಯತ್ನಿಸುತ್ತೇನೆ. ಏಕೆಂದರೆ, ಈ ಹಿಂದೆ ನಮಗೆ ನೀಡಲು ಉದ್ದೇಶಿಸಿದ ರೀತಿಯಲ್ಲಿ, ಈ ಮಾಹಿತಿಯು, ಈ 110 ಪುಟಗಳ ದಾಖಲೆಯಿಂದ ಲಭ್ಯವಾಗುವುದಿಲ್ಲವೆಂದು ನನ್ನ ಅನಿಸಿಕೆ.

ಈ ನಿಗಮಗಳ ಬಂಡವಾಳ ವಲಯದ ಬಗ್ಗೆ ಈ ಸದನದ ಗಮನ ಸೆಳೆಯ ಬಯಸುತ್ತೇನೆ. 11 ನಿಗಮಗಳ ಮಾಹಿತಿ ನನ್ನ ಬಳಿ ಇದೆ. ಆದರೆ, ಪ್ರಸಕ್ತ ಒಟ್ಟು 13 ನಿಗಮಗಳು ಇವೆಯೆಂದು ನನಗೆ ತಿಳಿದುಬಂದಿದೆ. ಅಸ್ಸಾಂಗೆ ಸಂಬಂಧಪಟ್ಟಂತೆ ಅಧಿಕೃತ ಬಂಡವಾಳ ರೂ. 2-00 ಕೋಟಿ. ಹೊರಡಿಸಲಾದ ಬಂಡವಾಳ ರೂ. 1 ಕೋಟಿ. ರಾಜ್ಯ ಸರ್ಕಾರದ ಷೇರು ರೂ.ಗಳು 50 ಲಕ್ಷ, ರಿಜರ್ವ್ ಬ್ಯಾಂಕ್‌ನ ಷೇರು ರೂ.ಗಳು 15.00 ಲಕ್ಷ ಹಾಗೂ ಬ್ಯಾಂಕು ಮತ್ತು ವಿಮಾ ಸಂಸ್ಥೆಗಳಂಥ ಹಣಕಾಸು ಸಂಸ್ಥೆಗಳ ಷೇರು ರೂ.ಗಳು 30.00 ಲಕ್ಷ.

ಕೆಲವು ದಿನಗಳ ಹಿಂದಷ್ಟೇ ಈ ದಾಖಲೆಯನ್ನು ನಮಗೆ ಒದಗಿಸಲಾಯಿತು. ಸ್ಟೇಟ್ ಬ್ಯಾಂಕ್ ಪಾತ್ರವನ್ನು ಇಲ್ಲಿ ತರುವ ಬಗ್ಗೆ ನನ್ನ ಸ್ನೇಹಿತರಾದ ಬನ್ಸಾಲ್‌ರವರು ಮಾಡಿದ ಸೂಚನೆಗಾಗಿ ಅವರ ಜೊತೆ ಜಗಳವಾಡಬೇಕಾಗಿದೆ. ನಿಗಮದ ಬಂಡವಾಳ ವಲಯ ಒಂದು ನಿಯಮಕ್ಕೆ ಬದ್ಧವಾಗಿರಬೇಕು. ಅಂದರೆ ಬಂಡವಾಳ ವಲಯಕ್ಕೆ ವಿಶಾಲ ವ್ಯಾಪ್ತಿಯನ್ನು ಒದಗಿಸುವುದು ಹಾಗೂ ಬಂಡವಾಳದ ಜವಾಬ್ದಾರಿಯನ್ನು ವಿವಿಧ ಸಂಸ್ಥೆಗಳಿಗೂ ವಿಧಿಸುವುದು. ನನ್ನ ಸ್ನೇಹಿತರೂ ಇದರಿಂದ ಹೊರತಾಗಿರಕೂಡದು. ಈ ಕಾರಣದಿಂದಾಗಿ ನಾನು ಬಂಡವಾಳ ವಲಯದ ಬಗ್ಗೆ ಇಲ್ಲಿ ಹೇಳುತ್ತಿದ್ದೆ. ಪುನಃ ಅಸ್ಸಾಂ ಅನ್ನು ತೆಗೆದುಕೊಂಡಲ್ಲಿ ಇತರೆ ಬಂಡವಾಳ ಹೂಡಿಕೆದಾರರ ಷೇರುಗಳಿರುವುದು ಕಂಡುಬರುತ್ತದೆ. ಈ ಬಂಡವಾಳ ಹೂಡಿಕೆದಾರರನ್ನು ಖಾಸಗೀ ಬಂಡವಾಳ ಹೂಡಿಕೆದಾರವೆಂದು ನಾನು ಪರಿಗಣಿಸುತ್ತೇನೆ. ಅವರ ಷೇರು ರೂ.ಗಳು

5.00 ಲಕ್ಷ. ಉತ್ತರ ಪ್ರದೇಶ ಕುರಿತಂತೆ, ಅಧಿಕೃತ ಬಂಡವಾಳ ರೂ.ಗಳು 3.00 ಕೋಟಿ, ಹೊರಡಿಸಲಾದ ಬಂಡವಾಳ ರೂ.ಗಳು 50 ಲಕ್ಷ. ರಾಜ್ಯದ ಷೇರು, ರೂ.ಗಳು 18.00 ಲಕ್ಷ, ರಿಜರ್ವ್ ಬ್ಯಾಂಕ್ ಆಫ್ ಇಂಡಿಯಾ ಷೇರು, ರೂ.ಗಳು 7.5 ಲಕ್ಷ, ಹಣಕಾಸು ಸಂಸ್ಥೆಗಳ ಷೇರು ರೂ.ಗಳು 19.5 ಲಕ್ಷ ಹಾಗೂ ಇತರೆ ಷೇರುದಾರರ ಅಂದರೆ ಖಾಸಗೀ ಷೇರು ರೂ.ಗಳು 5 ಲಕ್ಷ , ಬಿಹಾರಕ್ಕೆ ಸಂಬಂಧಪಟ್ಟಂತೆ ಹೇಳುವುದಾದರೆ, ಅಧಿಕೃತ ಬಂಡವಾಳ ರೂ.ಗಳು 2.00 ಕೋಟಿ, ಹೊರಡಿಸಲಾದ 'ಬಂಡವಾಳ ರೂ. 50 ಲಕ್ಷಗಳು, ರಾಜ್ಯದ ಷೇರು ರೂ.ಗಳು 20.00 ಲಕ್ಷ, ರಿಜರ್ವ್ ಬ್ಯಾಂಕ್ ಆಫ್ ಇಂಡಿಯಾ ಷೇರು ರೂ.ಗಳು. 7.5 ಲಕ್ಷ. ಹಣಕಾಸು ಸಂಸ್ಥೆಗಳ ಷೇರು, ರೂ.ಗಳು 175 ಲಕ್ಷ, ನಂತರ ಖಾಸಗೀ ಷೇರುದಾರರು ರೂ.ಗಳು 5.00 ಲಕ್ಷ.

ಮರು ಹೊಂದಾಣಿಕೆ ಕ್ರಮಗಳು ಹಾಗೂ ಸಂಯೋಜನೆಗಳು ಇಲ್ಲಿವೆ. ನಿಜ. ಆದರೂ, 1953 ರಿಂದ ಸ್ಥಾಪಿಸಲು ಉದ್ದೇಶಿಸಲಾದ ಬಹಳಷ್ಟು ಹಣಕಾಸು ನಿಗಮಗಳ ಬಂಡವಾಳ ವಲಯದಿಂದ ತಿಳಿದುಬರುವ ಬಹುಮುಖ್ಯವಾದ ಅಂಶ 'ಬದ್ಧತೆ' ಯ ಬಗ್ಗೆ ಈ ಸದನದ ಗಮನ ಸೆಳೆಯಬಯಸುತ್ತೇನೆ. ಅದಾವುದೆಂದರೆ ವಿವಿಧ ನಿಗಮಗಳ ಬಂಡವಾಳಕ್ಕೆ ಒಂದು ವಿಸ್ತೃತ ವ್ಯಾಪ್ತಿಯನ್ನು ಕಲಿಸುವ ಹಾಗೂ ಅವುಗಳಿಗೆ ಬಂಡವಾಳವನು ಹುಡುಕುವ ಜವಾಬ್ದಾರಿಯ ಬದ್ಧತೆ.

ಉತ್ತರ ಪ್ರದೇಶ ಮತ್ತು ಬಿಹಾರ ರಾಜ್ಯಗಳು ರಾಷ್ಟ್ರದ ದೊಡ್ಡ ರಾಜ್ಯಗಳಾಗಿರುವುದರಿಂದ ಅವುಗಳ ವಸ್ತುಸ್ಥಿತಿಯನ್ನು ಉದ್ದೇಶಪೂರ್ವಕವಾಗಿ ನಾನಿಲ್ಲಿ ಆಯ್ಕೆ ಮಾಡಿಕೊಂಡಿದ್ದೇನೆ. ಆದರೆ, ನಮಗಿಲ್ಲಿ ಕಂಡುಬರುವುದೇನೆಂದರೆ, ಬಹುತೇಕ ಪ್ರತಿಯೊಂದು ಸರ್ಕಾರಿ ನಿಗಮದ ಷೇರು ಬಂಡವಾಳ ಸಾಮಾನ್ಯವಾಗಿ ರೂ.2.00 ಕೋಟಿಗಳ ಅಧಿಕೃತ ಬಂಡವಾಳವಾಗಿರುವುದು. ನಮಗೊದಗಿಸಿರುವ ಅಧಿಕೃತ ಅಂಕಿಅಂಶಗಳ ಪ್ರಕಾರ, ಈ 2 ಕೋಟಿ ರೂ.ಗಳಲ್ಲಿ, ರೂ.ಗಳು 17.5 ಲಕ್ಷಗಳಿಂದ ರೂ.ಗಳು 54.00 ಲಕ್ಷಗಳವರೆಗಿನ ವ್ಯತ್ಯಾಸವಷ್ಟೇ ಇಲ್ಲಿ ಕಂಡುಬರುತ್ತದೆ; ಅಂದರೆ ಒಂದು ರೂಪಾಯಿಯಲ್ಲಿ ನಾಲ್ಕಾಣೆಯಷ್ಟು.

ರಾಜ್ಯ ಸರ್ಕಾರ ಮತ್ತು ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾ ಇವುಗಳನ್ನು ಹೊರತುಪಡಿಸಿ, ಬ್ಯಾಂಕು ಮತ್ತು ವಿಮಾ ಕಂಪನಿಗಳಂಥ ಸಾಂಸ್ಥಿಕ ಬಂಡವಾಳ ಹೂಡಿಕೆದಾರರ ಹಾಗೂ ಖಾಸಗೀ ಷೇರುದಾರ ವಂತಿಗೆಯನ್ನು ಒಟ್ಟುಗೂಡಿಸಿದ್ದಾಗ್ಯೂ ಈ ಸಂಸ್ಥೆಗಳು ಮತ್ತು ವ್ಯಕ್ತಿಗಳಿಂದ ಸರಬರಾಜಾಗುವ ವಂತಿಗೆ ಹೆಚ್ಚೆಂದರೂ ರೂಪಾಯಿಯ ಐದು ಆಣೆಗಳಷ್ಟಾಗುವುದೆಂದು ನಾನು ಪರಿಗಣಿಸುತ್ತೇನೆ. ಆದ್ದರಿಂದ ಯಾವುದೇ ಕೈಗಾರಿಕಾ ಹಣಕಾಸು ನಿಗಮದ ಷೇರು ಬಂಡವಾಳವನ್ನು ಸಂಗ್ರಹಿಸಲು ಇದು ಅತ್ಯಂತ ಸೂಕ್ಷ್ಮ ಹಾಗೂ ಸಮರ್ಪಕ ರೀತಿ ಎನ್ನುವ ನನ್ನ ವಾದಕ್ಕೆ ಶ್ರೀ ಎ.ಸಿ. ಗುಹಾರವರು ವಿರೋಧ ವ್ಯಕ್ತಪಡಿಸುವುದಿಲ್ಲ ಎಂಬ ಭಾವನೆ ನನಗಿದೆ.

ಪರಿಸ್ಥಿತಿ ಹೀಗಿರುವಾಗ, ಈ ಸಂಸ್ಥೆಗಳು ಸಮರ್ಪಕವಾಗಿ ಕಾರ್ಯ ನಿರ್ವಹಿಸುತ್ತಿವೆಯೋ ಹೇಗೆ ಎಂಬುದನ್ನು ಗಮನಿಸುವ ಹೊಣೆಗಾರಿಕೆ ಈ ಸದನದ ಸದಸ್ಯರಾದ ನಮಗಿದೆ. ಕಾನೂನನ್ನು ಪಾಸು ಮಾಡುವವರು ಹಾಗೂ ಹಣಕಾಸು ನಿಗಮಗಳನ್ನು ಸ್ಥಾಪಿಸುವಂಥ ಅಧಿಕಾರಗಳನ್ನು ನೀಡುವವರು ನಾವಾಗಿರುವ ಕಾರಣ ಈ ಹೊಣೆಗಾರಿಕೆ ನಮ್ಮ ಮೇಲಿದೆ.

ಈ ವಿಧೇಯಕದ ದೃಷ್ಟಿಕೋನ ಕುರಿತಂತೆ ನನ್ನ ಸ್ನೇಹಿತ ಶ್ರೀ ಬನ್ಸಾಲ್‌ರವರು ವ್ಯಕ್ತಪಡಿಸಿದ ಕೆಲವು ಅಭಿಪ್ರಾಯಗಳು ನನ್ನಲ್ಲಿ ತೀವ್ರ ಕುತೂಹಲವನ್ನುಂಟು ಮಾಡಿದವು. ಅದಕ್ಕೆ ಶ್ರೀಯುತರು ಏನು ಆಯ್ಕೆ ಮಾಡಿಕೊಂಡಿದ್ದರೋ ಆ ದಿಕ್ಕಿಗಿಂತ ಸ್ವಲ್ಪ ಭಿನ್ನವಾದ ದಿಕ್ಕಿನಿಂದ ಸಮಸ್ಯೆಯ ಸನಿಹಕ್ಕೆ ನಾನು ಬರುತ್ತಿದ್ದೇನೆ.

ಆರ್ಥಿಕ ಸಹಾಯಗಳನ್ನು ಕುರಿತು ಹೇಳುವಾಗ (ಲಾಭಾಂಶಗಳ ಖಾತರಿಯಿಂದ ಇದು ಉಂಟಾಗುತ್ತದೆ) ಶ್ರೀ ಗುಹಾರವರು ಉಪಯೋಗಿಸಿದಂಥ ಪದಪ್ರಯೋಗ ನಮಗೆ ಒದಗಿಸಲಾದ ತಃಖ್ತೆಯಿಂದ ಕಂಡುಬರುತ್ತದೆ. ಅದೇನೆಂದರೆ:

"ಪಾವತಿಸಿದ ಶೇಕಡವಾರು ಲಾಭಾಂಶಗಳ ಅರ್ಥಿಕ ಸಹಾಯಗಳು"

ಯಾರು ಇವುಗಳನ್ನು ಪಾವತಿಸಿದರು? ಪ್ರಾಯಶಃ ರಾಜ್ಯ ಸರ್ಕಾರವೇ ಇವುಗಳನ್ನು ಪಾವತಿಸಿರಬೇಕು. ಒಂದು ವೇಳೆ ರಾಜ್ಯ ಸರ್ಕಾರಗಳು ಪಾವತಿಸದಿದ್ದಲ್ಲಿ, ಯಾವುದೇ ಪರಿಸ್ಥಿತಿಯಲ್ಲಿ, ಅವುಗಳನ್ನು ರಾಜ್ಯ ಸರ್ಕಾರಗಳು ಕ್ರೋಢೀಕರಿಸಿದ ನಿಧಿಗಳಿಂದ ಪಾವತಿಸಿರಲೇಬೇಕು.

ಕೆಲವು ಅಂಕಿಸಂಖ್ಯೆಗಳನ್ನು ಇಲ್ಲಿ ಓದುತ್ತೇನೆ. ಇಲ್ಲದ ಕಾರ್ಯಚಟುವಟಿಕೆಗಳಿಗಾಗಿ ಸರ್ಕಾರದಿಂದ ಲಾಭಾಂಶಗಳ ಖಾತರಿಯನ್ನು ಪಡೆಯಲು ಉದ್ದೇಶಿಸಿದ ರೀತಿ ನಿಜವಾಗಿಯೂ ಆಶ್ಚರ್ಯ ಉಂಟು ಮಾಡುತ್ತದೆ.

ಕಾರ್ಯ ಚಟುವಟಿಕೆಗಳೇ ಇಲ್ಲವೆಂದು ನಾನು ಹೇಳಿದ ರೀತಿಯಿಂದಾಗಿ ನನ್ನ ಸ್ನೇಹಿತರಿಗೆ ಸ್ವಲ್ಪಮಟ್ಟಿನ ಆಶ್ಚರ್ಯ ಉಂಟಾಗಿರುವುದು ನನಗೆ ಕಂಡು ಬರುತ್ತಿದ್ದು ಅದನ್ನು ನಿವಾರಿಸಲು ಒಂದು ನಿಮಿಷದಲ್ಲಿ ಮೇಲಿನ ವಿಷಯವನ್ನು ಸ್ಪಷ್ಟಪಡಿಸಲು ಪ್ರಯತ್ನಿಸುತ್ತೇನೆ.

ಪಂಜಾಬಿಗೆ ಸಂಬಂಧಪಟ್ಟಂತೆ, ಮೊದಲನೇ ವರ್ಷದಲ್ಲಿ ನೀಡಲಾದ ಆರ್ಥಿಕ ಸಹಾಯಗಳು, ಪಾವತಿಸಲಾದ ಲಾಭಾಂಶಗಳ ಶೇ. 93.3 ರಷ್ಟಾಗುತ್ತದೆ. ಎರಡನೇ ವರ್ಷದಲ್ಲಿ ಅದು ಶೇ. 53.7 ಶೇ ಆಗುತ್ತದೆ ಮತ್ತು ಮೂರನೇ ವರ್ಷದಲ್ಲಿ ಅಂದರೆ ಕೊನೆಯ ವರ್ಷದಲ್ಲಿ ಅದು ಶೇ 47.7 ಆಗುತ್ತದೆ. ಸೌರಾಷ್ಟ್ರಕ್ಕೆ ಸಂಬಂಧಪಟ್ಟಂತೆ ನಾನೀಗ ಹೇಳುತ್ತಿದ್ದೇನೆ. ಮೂರು ವರ್ಷಗಳ ಅವಧಿಯಲ್ಲಿ, ಸರ್ಕಾರದಿಂದ ಹಣಕಾಸು ನಿಗಮಕ್ಕೆ ನೀಡಲಾದಂಥ ಆರ್ಥಿಕ ಸಹಾಯಗಳು ಶೇ. 80.1 ರಿಂದ ಶೇ. 46.6ರ ವರೆಗೆ ಇರುತ್ತವೆ. ಬೊಂಬಾಯಿಗೆ ಸಂಬಂಧಪಟ್ಟಂತೆ ಇದು ಶೇ. 92 ರಿಂದ ಶೇ. 69.4 ರವರೆಗೆ ಮತ್ತು ಶೇ. 54ರ ವರೆಗೆ

ವ್ಯತ್ಯಾಸವಾಗುತ್ತಾ ಹೋಗುತ್ತದೆ. ಹೀಗೆ ಮುಂದುವರೆಯುತ್ತದೆ. ಮಧ್ಯ ಭಾರತದಲ್ಲಿ ಶೇ. ನೂರರಷ್ಟು ಆರ್ಥಿಕ ಸಹಾಯವನ್ನು ನೀಡಿರುವ ಉದಾಹರಣೆ ನನ್ನಲ್ಲಿದೆ.

ಇಷ್ಟನ್ನು ಹೇಳುತ್ತಾ ನನ್ನ ಸ್ನೇಹಿತರಾದ ಶ್ರೀ ಬನ್ಸಾಲ್‌ರವರು "ವೆಚ್ಚ ಅನುಪಾತ"ವೆಂದು ಏನು ಹೇಳಿದರೋ ಅದನ್ನು ಅವರು ಪರಿಶೀಲಿಸಿದ ರೀತಿಗಿಂತ ಭಿನ್ನವಾದ ಮತ್ತೊಂದು ದೃಷ್ಟಿ ಕೋನದಿಂದ ನಾನು ಪರಿಶೀಲಿಸಲು ಇಚ್ಛಿಸುತ್ತೇನೆ.

ಅಂಕಿಸಂಖ್ಯೆಗಳನ್ನು ನನ್ನ ಸ್ನೇಹಿತರು ನೀಡಿದ್ದು, ಅವುಗಳನ್ನು ಪ್ರಪ್ರಥಮವಾಗಿ ಯು.ಕೆ.ಯ ಒಟ್ಟಾರೆ ವೆಚ್ಚ ಅನುಪಾತಗಳ ಅಂಕಿಸಂಖ್ಯೆಗಳಿಗೆ ಹೋಲಿಸಿ ತದನಂತರ ಕೈಗಾರಿಕಾ ಹಣಕಾಸು ನಿಗಮಕ್ಕೆ ಸಂಬಂಧಪಟ್ಟಂತೆ ಹೋಲಿಸಿರುತ್ತಾರೆ.

ಶ್ರೀ ಗುಹಾರವರು ನಮಗೆ ನೀಡಿದ ಹೇಳಿಕೆಯ ಪ್ರತಿ ಇಲ್ಲಿದೆ. ಸಂಕ್ಷಿಪ್ತವಾಗಿ ಅದನ್ನು ಇಲ್ಲಿ ಉದಾಹರಿಸಲು ಇಚ್ಛಿಸುತ್ತೇನೆ. ಆಡಳಿತ ವೆಚ್ಚಗಳಿಗೆ ಸಂಬಂಧಿಸಿದಂತೆ ಒಟ್ಟು ವರಮಾನದ ಶೇಕಡಾವಾರು ಅಂಕಿ ಸಂಖ್ಯೆಗಳು ಇವು ಮೂರು ವರ್ಷಗಳ ಅವಧಿಯಲ್ಲಿ ಇವುಗಳನ್ನು ಪರಿಶೀಲಿಸಿದಾಗ, ಪಂಜಾಬಿಗೆ ಸಂಬಂಧಪಟ್ಟಂತೆ, ವ್ಯಾತ್ಯಾಸ ಶೇ. 72.8 ರಿಂದ 315ರ ವರೆಗೆ ಇದೆ. ಸೌರಾಷ್ಟ್ರಕ್ಕೆ ಸಂಬಂಧಿಸಿದಂತೆ ಕಂಡುಬರುವ ವ್ಯತ್ಯಾಸ ಶೇ. 41 ರಿಂದ ಶೇ. 16.3 ರಷ್ಟು. ಮುಂಬಯಿಯಲ್ಲಿ ಅದು ಶೇ. 63.4 ರಿಂದ ಶೇ. 23.5. ಅದು ಇಳಿಮುಖವಾಗುತ್ತಿದೆಯೆಂಬ ಅಂಶವನ್ನು ನಾನು ಒಪ್ಪುತ್ತೇನೆ. ಮೊದಲನೇ ವರ್ಷದಲ್ಲಿ ಅಥವಾ ಎರಡನೇ ವರ್ಷದಲ್ಲಿ ಅಥವಾ ಮೂರನೇ ವರ್ಷದಲ್ಲಿನ ವೆಚ್ಚವು, ತದನಂತರದ ವರ್ಷಗಳಲ್ಲಿ ಪ್ರಮಾಣಾನುಸಾರ ಹೆಚ್ಚಾಗಿದೆ. ಸರ್ಕಾರೀ ಹಣಕಾಸು ನಿಗಮದ ಆದರ್ಶ ಉದಾಹರಣೆಯಾಗಿ ಪ್ರತಿಬಿಂಬಿಸಿರುವ ತಿರುವಾಂಕೂರು - ಕೊಚ್ಚಿನ್‌ಗಳಿಗೆ ಸಂಬಂಧಿಸಿದಂತೆ ವ್ಯತ್ಯಾಸ ಶೇ. 34.8 ರಿಂದ ಶೇ. 12.2ರ ವರೆಗಿದೆ. ಒಂದು ಅಸಾಧಾರಣ ಉದಾಹರಣೆ ಇಲ್ಲಿದೆ. ಮಧ್ಯ ಭಾರತಕ್ಕೆ ಸಂಬಂಧಪಟ್ಟಂತೆ ತನ್ನ ಮೊದಲನೇ ವರ್ಷದಲ್ಲಿಯೇ ಅದು ಶೇ. 133.3 ರಷ್ಟಿದೆ. ಬಂಡವಾಳ ವಲಯವನ್ನೇ ಆಗಲೀ ಅಥವಾ ಪಾವತಿಸಲಾದ ಲಾಭಾಂಶಗಳ ಆರ್ಥಿಕ ಸಹಾಯ ಅಥವಾ ಸಹಾಯ ಧನಗಳನ್ನೇ ಗಣನೆಗೆ ತೆಗೆದುಕೊಂಡಾಗಲೂ ಕೂಡ, ಈ ಸಂಸ್ಥೆಗಳ ಕಾರ್ಯ ಚಟುವಟಿಕೆಯು, ಅವುಗಳಲ್ಲಿ ಅಡಕವಾಗಿರುವ ಕಾರ್ಯ ನೀತಿಗಳನ್ನು ಪರಿಗಣಿಸಿದಲ್ಲಿ, ತಕ್ಷಣವೇ ಅಥವಾ ಸಮೀಪದಲ್ಲಿಯೇ ನಮಗೆ ಭರವಸೆಯನ್ನು ಮೂಡಿಸುವುದಿಲ್ಲ. ನನ್ನ ಸ್ನೇಹಿತರಾದ ಶ್ರೀ ಬನ್ಸಾಲ್ ಸ್ವಲ್ಪ ಸಮಯದ ಹಿಂದಷ್ಟೇ ಮಾತನಾಡಿದಂತೆ ಈ ಕಾರ್ಯನೀತಿಗಳ ಬಗ್ಗೆ ಸಮರ್ಪಕವಾಗಿ ತಮ್ಮ ಗಮನಹರಿಸದಿದ್ದಕ್ಕೆ ನನಗೆ ವಿಷಾದವಾಗುತ್ತಿದೆ. ಈ ಪರಿಣಾಮದಿಂದಾಗಿ ಕೈಗಾರಿಕಾ ಹಣಕಾಸು ನಿಗಮವೇ ಆಗಿರಲಿ ಅಥವಾ ಸರ್ಕಾರಿ ಹಣಕಾಸು ನಿಗಮಗಳೇ ಆಗಿರಲೀ, ಅವುಗಳ ಕಾರ್ಯ ನಿರ್ವಹಣೆಯ ಬಗ್ಗೆ ಕಾಳಜಿ ಹೊಂದಿರುವ ಈ ಸದನದ ಸದಸ್ಯರು ಅವುಗಳ ಮಾಹಿತಿ ಪಡೆಯಲು ಉತ್ಸುಕರಾಗಿದ್ದಾರೆ. ಸದರಿ ಮಾಹಿತಿ ಪಡೆಯುವ ಹಕ್ಕುಳ್ಳ ನಮಗೆ ಮಾಹಿತಿ ಒದಗಿಸಿಕೊಡಲು ಶ್ರೀ ಗುಹಾರವರು

ಅಸಮರ್ಥರಾಗಿದ್ದಾರೆಂದು ಹೇಳುವುದಕ್ಕಿಂತಲೂ ಅಸಹಾಯಕರಾಗಿದ್ದಾರೆಂದು ಅಂತಿಮವಾಗಿ ಹೇಳಲು ನನಗೆ ವಿಷಾದವಾಗುತ್ತಿದೆ. ಸ್ವಲ್ಪ ಸಮಯದ ಹಿಂದೆ ಅವರು ನೀಡಿದ ಆಶ್ವಾಸನೆಯಂತೆ ಇನ್ನು ಮುಂದೆ ಇಂಥ ಲೋಪ ದೋಷಗಳು ಇರುವುದಿಲ್ಲವೆಂದು ನಾನು ಭಾವಿಸುತ್ತೇನೆ.

ಉದ್ದೇಶಗಳು ಮತ್ತು ಕಾರಣಗಳ ವಿವರಣೆಯನ್ನು ಈ ಸದನ ಗಮನಿಸಿದಲ್ಲಿ ಅತಿ ಮುಖ್ಯವಾದ ಎರಡು ಹೇಳಿಕೆಗಳು ಸದನಕ್ಕೆ ವೇದ್ಯವಾಗುತ್ತವೆ. ಏತಕ್ಕಾಗಿ ಈ ವಿಧೇಯಕವನ್ನು ತರಲಾಗುತ್ತಿದೆ ಎಂಬ ಉದ್ದೇಶ ಪ್ಯಾರಾ 2 ರಿಂದ ನಮಗೆ ಗೊತ್ತಾಗುತ್ತದೆ. ಅದೇನೆಂದರೆ ಕೆಲವು ರಾಜ್ಯಗಳು ಪ್ರತ್ಯೇಕ ಹಣಕಾಸು ನಿಗಮಗಳನ್ನು ಸ್ಥಾಪಿಸುವುದಕ್ಕೆ ಸಂಬಂಧಪಟ್ಟಂತೆ ಎದುರಾಗುವ ಸಮಸ್ಯೆಗಳನ್ನು ನಿವಾರಿಸುವ ಉದ್ದೇಶದಿಂದ ಇದನ್ನು ತರಲಾಗಿದೆ. ಇದೊಂದು ತೀರಾ ಸಾಮಾನ್ಯ ಅಂಶ. ತದನಂತರ, 2ನೇ ಪ್ಯಾರಾದ ಕೆಳಗೆ ನಾವು ನೋಡುವುದೇನೆಂದು

"ಅಧಿನಿಯಮದ 25ನೇ ಪ್ರಕರಣವನ್ನು ಕೂಡ ತಿದ್ದುಪಡಿ ಮಾಡಲು ಉದ್ದೇಶಿಸಲಾಗಿದ್ದು, ಇದರಿಂದ ಸಾಕಷ್ಟು ಚರಾಸ್ತಿಗಳನ್ನು ಹೊಂದಿರುವ ಸಣ್ಣ ಕೈಗಾರಿಕೆ ಮತ್ತು ಗುಡಿ ಕೈಗಾರಿಕೆಗಳಲ್ಲಿ ತೊಡಗಿರುವ ಕೈಗಾರಿಕಾ ಸಂಸ್ಥೆಗಳು ರಾಜ್ಯ ಹಣಕಾಸು ನಿಗಮದಿಂದ ಹಣಕಾಸು ಸೌಲಭ್ಯಗಳನ್ನು ಪಡೆಯಬಹುದಾಗಿದೆ"

ಈ ಒಂದು ಪ್ರಾಮುಖ್ಯ ಅಂಶವನ್ನು ದೃಷ್ಟಿಯಲ್ಲಿರಿಸಿಕೊಂಡು ಈ ತಿದ್ದುಪಡಿ ವಿಧೇಯಕವನ್ನು ಈ ಸದನದ ಮುಂದೆ ತರಲಾಗಿದೆ ಎಂಬುದು ನನ್ನ ಊಹೆ. ಇದು ಸರಿಯೇ ಅಥವಾ ಇಲ್ಲವೇ ಎಂದು ನನ್ನ ಸ್ನೇಹಿತರನ್ನು ಕೇಳುತ್ತೇನೆ. ಒಂದು ವೇಳೆ ನನ್ನ ಊಹೆ ತಪ್ಪಾಗಿದ್ದಲ್ಲಿ ನನ್ನ ಸ್ನೇಹಿತರಿಗೆ ತಲೆಬಾಗಲು ಸಿದ್ಧನಿದ್ದೇನೆ. ನಾನಿದನ್ನು ಸಕಾರಾತ್ಮಕ ರೀತಿಯಲ್ಲಿ ಹೇಳಲು ಇಚ್ಛಿಸುತ್ತೇನೆ. ಏನೆಂದರೆ ಸಣ್ಣ ಪ್ರಮಾಣದ ಕೈಗಾರಿಕೆಗಳು ಮತ್ತು ಗುಡಿ ಕೈಗಾರಿಕೆಗಳಿಗೆ ನೆರವು ನೀಡುವ ಕಾರಣಗಳನ್ನೊಡ್ಡಿ ಪ್ರತಿಯೊಂದು ರಾಜ್ಯಗಳೂ ತಮ್ಮದ್ದೇ ಆದ ಅಥವಾ ತಮ್ಮ ನೆರೆಯ ರಾಜ್ಯಗಳ ಸಹಾಯದಿಂದ ಹಣಕಾಸು ನಿಗಮಗಳನ್ನು ಸ್ಥಾಪಿಸಲು ತಮ್ಮ ಪ್ರಸ್ತಾವಗಳನ್ನು ಕಾರ್ಯಗತಗೊಳಿಸಲು ಸಾಧ್ಯವಾಗುವಂತೆ ಈ ವಿಧೇಯಕವನ್ನು ಈಗ ಪ್ರಾಯೋಜಿಸಲಾಗಿದೆ ಅಥವಾ ಇನ್ನೊಂದು ರೀತಿಯಲ್ಲಿ ಇದನ್ನು ಹೇಳುವುದಾದರೆ, ಪಂಚವಾರ್ಷಿಕ ಯೋಜನೆಗಳ ಅದರಲ್ಲೂ ವಿಶೇಷವಾಗಿ ಎರಡನೇ ಪಂಚವಾರ್ಷಿಕ ಯೋಜನೆಗಳ ಮೂಲಕ ಸಣ್ಣ ಪ್ರಮಾಣದ ಕೈಗಾರಿಕೆಗಳು ಮತ್ತು ಗುಡಿ ಕೈಗಾರಿಕೆಗಳನ್ನು ಪೋಷಿಸಿ ಬೆಳೆಸಬೇಕೆಂಬ ಭಾರತ ಸರ್ಕಾರದ ಸರ್ವ ಶ್ರೇಷ್ಠ ಹೊಣೆಗಾರಿಕೆಯನ್ನು ಸಾಕಾರಗೊಳಿಸಲು ಈ ಅಧಿಕಾರ ಯುಕ್ತ ಕ್ರಮದಿಂದ ಸಾಧ್ಯವಾಗುತ್ತದೆ.

ಪರಿಸ್ಥಿತಿ ಹೀಗಿದ್ದಾಗ, ಈ ಸರ್ಕಾರಿ ಹಣಕಾಸು ನಿಗಮಗಳ ಕಾರ್ಯ ಸಾಧನೆಗಳಾದರೂ ಏನು? ಅವುಗಳು ಸಾಲವನ್ನು ಹೇಗೆ ನೀಡುತ್ತವೆ? ಯಾವ ನಿಬಂಧನೆಗಳ ಮೇಲೆ ಸಾಲಗಳನ್ನು ನೀಡಲಾಗುತ್ತದೆ? ಈ ಸಾಲಗಳ ಪ್ರಯೋಜನಗಳೇನು? ಇವುಗಳನ್ನು ಯಾವ ರೀತಿಯಲ್ಲಿ ವಸೂಲು ಮಾಡಲಾಗುತ್ತದೆ? ಈ ಮೂರ್ನಾಲ್ಕು ಅಂಶಗಳ ಬಗ್ಗೆ ತಮ್ಮ ಅನುಮತಿಯೊಂದಿಗೆ ಸಂಕ್ಷಿಪ್ತವಾಗಿ ಚರ್ಚಿಸಲು ಇಚ್ಛಿಸುತ್ತೇನೆ.

ಶ್ರೀ ಗುಹಾರವರು ನಮ್ಮಲ್ಲಿನ ಕೆಲವರಿಗೆ ನೀಡಿರುವ ದಾಖಲೆಯ 6ನೇ ಪುಟದಲ್ಲಿ ಬರೀ ಬುಡಬುಡಕೆ ಕಥೆ ಕಂಡುಬರುತ್ತದೆ.

ಈ ಒಂದು ಅತ್ಯಂತ ಪ್ರಮುಖ ವಿಷಯುವನ್ನು ಪ್ರಸ್ತಾಪಿಸಲು ತಮ್ಮ ಅನುಮತಿಯೊಂದಿಗೆ ಈ ಅವಕಾಶವನ್ನು ತೆಗೆದುಕೊಳ್ಳಲು ಇಚ್ಛಿಸುತ್ತೇನೆ. ಉದ್ದೇಶಗಳು ಮತ್ತು ಕಾರಣಗಳ ವಿವರಣೆಯಲ್ಲಿ ತಿಳಿಸಿರುವಂತೆ, ಸರ್ಕಾರಿ ಹಣಕಾಸು ನಿಗಮಗಳನ್ನು ಸ್ಥಾಪಿಸಲು ಮತ್ತು ಅವುಗಳು ವಿಧೇಯಕದ ಎಲ್ಲೆಯೊಳಗೆ ಕಾರ್ಯ ನಿರ್ವಹಿಸಲು ಅವಕಾಶ ಮಾಡಿಕೊಟ್ಟಿರುವ ಈ ವಿಧೇಯಕ, ಈ ಹಣಕಾಸು ನಿಗಮಗಳ ವಿವೇಚನಾರಹಿತ ಬಡ್ಡಿ ದರಗಳ ಕಾರಣದಿಂದ ಮಧ್ಯಮ ಮತ್ತು ಗುಡಿ ಕೈಗಾರಿಕೆಗಳಿಗೆ ಯಾವ ರೀತಿಯಿಂದಲೂ ಸಹಾಯವಾಗುವುದಿಲ್ಲವೆಂದು ಹೇಳಲು ನಾನು ಪಶ್ಚಾತ್ತಾಪ ಪಡುತ್ತಿಲ್ಲ. ವಿವಿಧ ಸರ್ಕಾರಿ ಹಣಕಾಸು ನಿಗಮಗಳ ಉದ್ದೇಶ ಬಡ್ಡಿ ಸಂಗ್ರಹಣೆ. ಇದು ನಿಜವಾಗಿಯೂ ನನಗೆ ಆಶ್ಚರ್ಯವುಂಟು ಮಾಡಿದೆ. ನಾನು ಹೇಳುವುದರಲ್ಲಿ ವ್ಯತ್ಯಾಸ ಏನಾದರೂ ಇದ್ದರೆ, ನಾನದನ್ನು ಸರಿಪಡಿಸಿಕೊಳ್ಳಲು ಸಿದ್ಧನಿದ್ದೇನೆ." ಸ್ವತಃ ಆರ್ಥಿಕ ಮಂತ್ರಾಲಯ ಪರಿಶೀಲಿಸುವ ಷರತ್ತಿಗೊಳಪಟ್ಟು" ಎಂಬ ಟಿಪ್ಪಣಿಯನ್ನು ನೀಡಿರುವುದರಿಂದ, ನಾನಿದನ್ನು ಹೇಳಬೇಕಾಗಿದೆ.

ಶ್ರೀ ಎ.ಸಿ. ಗುಹಾರವರು ನೀಡಿದ 110 ಪುಟಗಳ ಟಿಪ್ಪಣಿಯ 6ನೇ ಪುಟದಲ್ಲಿ ತಿಳಿಸಿರುವ ಬಡ್ಡಿ ದರಗಳು ಮೂಲಭೂತವಾಗಿ ಸರಿಯಿಲ್ಲ ಎನ್ನುವುದರಲ್ಲಿ ಯಾವುದೇ ವಿವಾದವಿಲ್ಲ ಎನ್ನುವುದನ್ನು ಈ ಸದನ ಅರ್ಥ ಮಾಡಿಕೊಳ್ಳುವುದೆಂಬ ಭರವಸೆ ನನಗಿದೆ. ಪಂಜಾಬಿಗೆ ಸಂಬಂಧಪಟ್ಟಂತೆ ಬಡ್ಡಿ ದರ ವಾರ್ಷಿಕ ಶೇ. 6 1/2 ಯಷ್ಟಿದೆ. ಸೌರಾಷ್ಟ್ರಕ್ಕೆ ಸಂಬಂಧಿಸಿದಂತೆ ಇದು ಶೇ. 6 ರಷ್ಟಿದೆ. ಮುಂಬಯಿ ಶೇ.6. ತಿರುವಾಂಕೂರು - ಕೊಚ್ಚಿನ್ ಶೇ. 6 1/2. ಹೈದ್ರಾಬಾದ್ ಶೇ.6. ಪಶ್ಚಿಮ ಬಂಗಾಳ ಶೇ.6. ಅಸ್ಸಾಂ ಶೇ. 6 ರಿಂದ ಶೇ. 7, ಬಿಹಾರ್ ಶೇ. 6, ಯು.ಪಿ, ಶೇ. 5 1/2 ರಾಜಾಸ್ತಾನ ಶೇ.6, ಮಧ್ಯ ಭಾರತ ಶೇ. 6 ಮತ್ತು ಆಂಧ್ರ ಶೇ.6.

ನನ್ನ ಪ್ರಪ್ರಥಮ ಪ್ರಶ್ನೆಯೇ ಇದು: ಈ ಶಾಸನವನ್ನು ಅಂಗೀಕರಿಸುತ್ತಿರುವ ಈ ಸದನ, ರಾಷ್ಟ್ರವ್ಯಾಪಿ ಏಕರೂಪ ಬಡ್ಡಿಯನ್ನು ಏಕೆ ಜಾರಿಗೆ ತರಬಾರದು? ಸರ್ಕಾರೀ ಹಣಕಾಸು ನಿಗಮಗಳು ಕಾರ್ಯ ನಿರ್ವಹಿಸುತ್ತಿರುವ ಈ ರಾಷ್ಟ್ರದ ಪ್ರತಿಯೊಂದು ಭಾಗದಲ್ಲೂ ಏಕರೂಪ ಬಡ್ಡಿದರ ಜಾರಿಯಲ್ಲಿರುವಂತೆ ಖಚಿತಪಡಿಸಿಕೊಳ್ಳಲು ಹಣಕಾಸು ಮಂತ್ರಾಲಯವಾಗಲೀ ಅಥವಾ ರಿಸರ್ವ್‌ಬ್ಯಾಂಕ್ ಆಫ್ ಇಂಡಿಯಾ ಆಗಲೀ ಏಕೆ ತಮ್ಮ ಪ್ರಭಾವವನ್ನು ಬೀರಬಾರದು? ಸದನ ಇದಕ್ಕೆ ಉತ್ತರ ನೀಡಲೇಬೇಕೆಂಬುದು ನನ್ನ ಅನಿಸಿಕೆ. ಮಾನ್ಯ ಸಚಿವರು ಚರ್ಚೆಗೆ ಉತ್ತರಿಸುವಾಗ ಈ ಪ್ರಶ್ನೆಗೆ ಉತ್ತರ ನೀಡುವರೆಂದು ಭಾವಿಸುತ್ತೇನೆ.

ದೊಡ್ಡ ಸಮಸ್ಯೆಗಳಿಗೆ ಹೋಲೀಸಿದಾಗ ಇದೊಂದು ತೀರಾ ಸಣ್ಣ ಅಂಶ. ಆದರೂ, ಕಾಬೂಲಿ ಲೇವಾದೇವಿಗಾರರಂತೆ ಈ ಸರ್ಕಾರಿ ಹಣಕಾಸು ನಿಗಮಗಳು ಕಾರ್ಯ ನಿರ್ವಹಿಸಲು

ಏಕೆ ಪ್ರಯತ್ನಿಸಬೇಕು? ಬ್ಯಾಂಕಿನ ಬಡ್ಡಿ ದರವೆಷ್ಟು? ರಾಷ್ಟ್ರವು ಪೋಷಿಸಿಕೊಂಡು ಬರುತ್ತಿರುವ ಸರ್ಕಾರಿ ಹಣಕಾಸು ನಿಗಮಗಳ ಪ್ರಯೋಜನಕ್ಕಾಗಿಯೇ ಗುಡಿ ಮತ್ತು ಮಧ್ಯಮ ಪ್ರಮಾಣದ ಕೈಗಾರಿಕೆಗಳಿಂದ ವಸೂಲು ಮಾಡಲು ಉದ್ದೇಶಿಸಿರುವ ಬಡ್ಡಿ ದರಕ್ಕೂ ಮತ್ತು ಬ್ಯಾಂಕುಗಳ ಬಡ್ಡಿ ದರಕ್ಕೂ ಇರುವ ವ್ಯತ್ಯಾಸವೆಷ್ಟು? ಇಷ್ಟೊಂದು ಅಪರಿಮಿತ ಬಡ್ಡಿ ದರಗಳನ್ನು ನೀಡಲು ಈ ಗುಡಿ ಮತ್ತು ಮಧ್ಯಮ ಪ್ರಮಾಣದ ಕೈಗಾರಿಕೆಗಳು ಎಲ್ಲಿಂದ ಹಣವನ್ನು ಒದಗಿಸಿಕೊಳ್ಳುತ್ತವೆ? ಜರ್ಮನಿ ಮತ್ತು ಜಪಾನ್‌ನಂಥ ಕೆಲವು ರಾಷ್ಟ್ರಗಳಲ್ಲಿ ಹೆಚ್ಚಿನ ಬಡ್ಡಿ ದರಗಳನ್ನು ವಿಧಿಸಲು ಅಲ್ಲಿ ಅವಕಾಶವಿದೆ. ಇದು ನನಗೆ ಗೊತ್ತಿಲ್ಲವೆಂದಲ್ಲ. ಆದರೆ, ಈ ರಾಷ್ಟ್ರದ ಒಂದು ವಿಶಿಷ್ಟ ಆರ್ಥಿಕ ಮತ್ತು ಇನ್ನಿತರ ಸನ್ನಿವೇಶಗಳ ಹಿನ್ನೆಲೆಯಲ್ಲಿ ಶೇ. $5^1/_2$ ಯಿಂದ 7 ರ ವರೆಗಿನ ಬಡ್ಡಿ ದರಗಳ ಪಟ್ಟಿಯನ್ನು ಪರಿಗಣಿಸುವುದು, ನ್ಯಾಯವಂತೂ ಒತ್ತಟ್ಟಿಗಿರಲಿ, ನ್ಯಾಯೋಚಿತವೇ ಎಂಬುದನ್ನು ನಾನು ಹೇಳುತ್ತೇನೆ. ಇಷ್ಟೊಂದು ಬಡ್ಡಿ ದರಗಳ ಆಧಾರದ ಮೇಲೆ ಈ ದೇಶದ ಗುಡಿ ಮತ್ತು ಮಧ್ಯಮ ಪ್ರಮಾಣದ ಕೈಗಾರಿಕೆಗಳನ್ನು ಪೋಷಿಸಿಕೊಂಡು ಬರಲು ಸಾಧ್ಯವೇ ಎನ್ನುವುದನ್ನು ಮಾನ್ಯ ರೆವಿನ್ಯೂ ಸಚಿವರಾದ ಶ್ರೀ ಗುಹಾರವರು ಹೇಳುತ್ತಾರೆಯೇ? ಎಂದು ಅವರಲ್ಲಿ ಕೇಳುತ್ತೇನೆ. ಹಳ್ಳಿಗಾಡಿನ ಸಾಮಾನ್ಯ ಜನರ ಕೈಗೆಟಕಬಹುದಾದ ಹಾಗೂ ಸಮಂಜಸವಾದ ಪ್ರಮಾಣದಲ್ಲಿ ಈ ಬಡ್ಡಿ ದರಗಳು ಇಲ್ಲದಿದ್ದಲ್ಲಿ, ಸ್ವಲ್ಪ ಹೊತ್ತಿನ ಮುಂಚೆ ನಾನು ಉದಾಹರಿಸಿದಂಥ ಅಗಾಧ ಪ್ರಮಾಣದ ಆರ್ಥಿಕ ಸಹಾಯಗಳನ್ನು ಸರ್ಕಾರ ನೀಡುವುದರಲ್ಲಿ ಯಾವ ಅರ್ಥವಿದೆ? ಅತೀ ಅವಶ್ಯಕವಾದ ತತ್ವವನ್ನೊಳಗೊಂಡಂಥ ಪ್ರಶ್ನೆಗಳು ಇವು. ನಮ್ಮ ಮುಂದಿರುವ ದಾಖಲೆಯಲ್ಲಿ ಮಾನ್ಯ ಸಚಿವರು ಹೇಳಿದಂಥ, ಈ ವಿಧೇಯಕದ ಉದ್ದೇಶ ಮತ್ತು ಕಾರಣಗಳ ಚೌಕಟ್ಟಿನ ಒಳಗಡೆ ಚರ್ಚಿಸುವುದು ಮಾತ್ರವಲ್ಲದೇ ವಿಧೇಯಕದಲ್ಲಿರುವ ಮುಖ್ಯ ಖಂಡಗಳ ಆಂತರಿಕ ಪರಿಣಾಮಗಳನ್ನು ಕುರಿತಂತೆಯೂ ಚರ್ಚಿಸಬೇಕು.

ಈಗಾಗಲೇ ಚರ್ಚೆ ಪ್ರಾರಂಭವಾಗಿರುವುದರಿಂದ ಸರ್ಕಾರವು, ಈ ಬಡ್ಡಿ ದರಗಳನ್ನು ಸಂಪೂರ್ಣವಾಗಿ ಇಳಿಸಲು ಪ್ರಯತ್ನ ಮಾಡಬೇಕು, ಈ ದರಗಳು ವಿವೇಚನಾ ರಹಿತ ದರಗಳಾಗಬಾರದು. ಹಾಗೂ ಈ ಹಣಕಾಸು ನಿಗಮಗಳಿಂದ ಸಾಲಗಳನ್ನು ಪಡೆಯುವಂಥ ಮನವಿದಾರರು ತಾವು ಗಳಿಸಿದ ಲಾಭಾಂಶದಲ್ಲಿ ಆ ಸಾಲಗಳನ್ನು ಸೇವಾ ಮನೋಭಾವದಿಂದ ಹಿಂತಿರುಗಿಸಲು ಸಾಧ್ಯವಾಗುವಂಥ ಒಂದು ನ್ಯಾಯೋಚಿತ ಮಟ್ಟಕ್ಕೆ ಬಡ್ಡಿ ದರಗಳನ್ನು ಇಳಿಸಬೇಕು. ಬಡ್ಡಿ ದರಗಳ ಈ ಒಂದು ನಿರ್ದಿಷ್ಟ ಪ್ರಶ್ನೆಯನ್ನು ಸಮರ್ಪಕವಾಗಿ ನಿವಾರಿಸದ ಹೊರತು, ಈ ವಿಧೇಯಕದ ಉದ್ದೇಶ ಮತ್ತು ಕಾರಣಗಳ ಹೇಳಿಕೆಯ ಪ್ಯಾರಾ 2ರ ನಿಬಂಧನೆಗಳ ಅನುಸಾರ ಹಾಗೆಯೇ ಶ್ರೀ ಎ.ಸಿ. ಗುಹಾರವರು ಇಲ್ಲಿ ನೀಡಿದ ಹೇಳಿಕೆಯ ಅನುಸಾರ ಗುಡಿ ಮತ್ತು ಸಣ್ಣ ಕೈಗಾರಿಕೆಗಳನ್ನು ಬೆಳೆಸಿಕೊಂಡು ಬರುವಲ್ಲಿ ಈ ವಿಧೇಯಕವು ಯಾವ ರೀತಿಯಿಂದಲೂ ಸಹಾಯವಾಗುವುದಿಲ್ಲವೆಂದು ಹೇಳಲು ನನಗೆ ವಿಷಾದವೆನಿಸುತ್ತದೆ.

ಈ ಪ್ರಶ್ನೆಯಲ್ಲಿ ಒಂದು ಅಂಶ ಅಡಕವಾಗಿದ್ದು, ಆ ಬಗ್ಗೆಯೂ ನನ್ನ ಸ್ನೇಹಿತರಾದ ಮಾನ್ಯ ಸಚಿವರು ಪರಿಶೀಲಿಸಿ ನಮಗೆ ಮಾಹಿತಿ ನೀಡುವರೆಂದು ನಾನು ಇಚ್ಛಿಸುತ್ತೇನೆ. ಈ ನಿಟ್ಟಿನಲ್ಲಿ ತಮ್ಮ ಮಾರ್ಗದರ್ಶನವನ್ನು ನಾನು ಅಪೇಕ್ಷಿಸುತ್ತೇನೆ. ಏನೆಂದರೆ, ರಾಜ್ಯಗಳ ಪುನರ್‌ವಿಂಗಡನೆಯ ವಿಧೇಯಕದ ಜಂಟಿ ಸಮಿತಿಯ ಸಭೆಯಲ್ಲಿ, ಮುಂಬಯಿ ರಾಜ್ಯ ಹಣಕಾಸು ನಿಗಮದ ಆಸ್ತಿ ಮತ್ತು ಋಣಗಳ ವಿಭಜನೆಯ ಪ್ರಶ್ನೆ ಚರ್ಚೆಗೆ ಬಂದಾಗ ನಮ್ಮಲ್ಲಿನ ಕೆಲವರು ಈ ಸಮಸ್ಯೆಗಳನ್ನು ಎತ್ತಿದರು. ನಾವು ಮಾಹಿತಿಯನ್ನು ಪಡೆದು ನೋಡಿದಾಗ, ಬಹುತೇಕ ಶಿಥಿಲವಾದ ಹಾಗೂ ಕೇವಲ ಒಂದೇ ಒಂದು ಹಣಕಾಸು ನಿಗಮಕ್ಕೆ ಸೀಮಿತವಾದ ಈ ಮಾಹಿತಿಯನ್ನು ನಾನು ಈ ಸದನಕ್ಕೆ ಎಷ್ಟರಮಟ್ಟಿಗೆ ನೀಡಬಲ್ಲೆ ಎಂಬುದು ನನಗೆ ಗೊತ್ತಿಲ್ಲ. ಆದರೂ, ನಮಗೆ ಕಂಡುಬಂದಂತೆ ಆ ನಿಗಮವು ಇದುವರೆಗೆ ನೀಡಿದ ಸಾಲದ ಹೆಚ್ಚಿನ ಪ್ರಮಾಣದ ಮೊತ್ತವನ್ನು ಲೆಕ್ಕದಿಂದ ತೆಗೆದುಹಾಕಲಾಗಿದೆ, ಇಲ್ಲವೆ ತೀರಿಸಲಾರದ ಋಣವೆಂದು ಪರಿಗಣಿಸಲಾಗಿದೆ. ನನ್ನ ಸ್ನೇಹಿತರಾದ ರೆವಿನ್ಯೂ ಸಚಿವ ಶ್ರೀ ಗುಹಾರವರಲ್ಲಿ ಕೇಳುವುದೇನೆಂದರೆ ವಾಸ್ತವವಾಗಿ ಇದುವರೆಗೆ ನೀಡಲಾದ ಎಷ್ಟು ಮೊತ್ತದ ಹಣವನ್ನು ಯೋಗ್ಯ ಹೂಡಿಕೆ ಎಂದು ಪರಿಗಣಿಸಲಾಗಿದೆ? ಈ ಬಗ್ಗೆ ಅವರು ಸದನಕ್ಕೆ ಬೆಳಕು ಚೆಲ್ಲಬೇಕು. ಈ ಒಂದು ಹೊಣೆಗಾರಿಕೆಯನ್ನು ಅವರು ನಿರ್ವಹಿಸುವರೆಂಬ ನಂಬಿಕೆ ನನಗಿದೆ.

ಶ್ರೀ ಗುಹಾರವರು ನಮಗೆ ನೀಡಿರುವ ಟಿಪ್ಪಣಿಯ ವ್ಯಾಪ್ತಿಯಿಂದ ಹೊರಗೆ ಇತರೆ ಮೂಲಗಳಿಂದ ಸಂಗ್ರಹಿಸಲು ಸಾಧ್ಯವಾದಂಥ ಮಾಹಿತಿಯ ಪ್ರಕಾರ ಈ ಕೆಳಕಾಣಿಸಿದ ಅಂಕಿಸಂಖ್ಯೆಗಳು ನನ್ನಲ್ಲಿವೆ. 11 ನಿಗಮಗಳಿಗೆ ಸಂಬಂಧಪಟ್ಟಂತೆ ಮಾಹಿತಿ ನನ್ನ ಬಳಿ ಇದ್ದು, ಇವುಗಳ ಒಟ್ಟು ಅಧಿಕೃತ ಬಂಡವಾಳ ರೂ.ಗಳು 23 ಕೋಟಿ, ಹೊರಡಿಸಲಾದ ಬಂಡವಾಳ ರೂ.ಗಳು 10.5 ಕೋಟಿ, ರಾಜ್ಯ ಸರ್ಕಾರಗಳ ಷೇರು ರೂ.ಗಳು 34.7 ಲಕ್ಷ ರಿಸರ್ವ್ ಬ್ಯಾಂಕಿನ ಷೇರು ರೂ.ಗಳು 1.40 ಕೋಟಿ. ಹಣಕಾಸು ನಿಗಮಗಳ ಷೇರು ಸುಮಾರು ರೂ.ಗಳು 40 ಲಕ್ಷ ಹಾಗೂ ಇತರೆ ಬಂಡವಾಳ ಹೂಡಿಕೆದಾರರ ಷೇರು ರೂ.ಗಳು 60 ಲಕ್ಷ. ಬಂಡವಾಳ ಹೂಡಿಕೆಯ ರೂಪದಲ್ಲಿ ತೊಡಗಿಸಿದ ಒಟ್ಟು ಹಣವನ್ನು ನೀವು ಗಣನೆಗೆ ತೆಗೆದುಕೊಳ್ಳಬೇಕು. ಈಗಲಾದರೂ ನನ್ನ ಸ್ನೇಹಿತರಾದ ಶ್ರೀ ಗುಹಾರವರು ಈ ಬಗ್ಗೆ ತನಿಖೆ ನಡೆಸಲು ಹಿಂಜರಿಯುವುದಿಲ್ಲವೆಂಬ ಭಾವನೆ ನನಗಿದೆ. ಇದರಿಂದ ಅವರು ಚರ್ಚೆಗೆ ಉತ್ತರ ನೀಡುವಾಗ ಅಥವಾ ಈ ವಿಧೇಯಕವನ್ನು ಮೂರನೇ ಬಾರಿ ಪರಿಶೀಲಿಸುವಾಗ, ಅದಕ್ಕಿನ್ನು ಸಮಯಾವಕಾಶವಿದೆ, ಎಷ್ಟು ಹಣವನ್ನು ತಪ್ಪಾಗಿ ಬಂಡವಾಳದಲ್ಲಿ ತೊಡಗಿಸಲಾಗಿದೆ ಹಾಗೂ ಎಷ್ಟನ್ನು ವಸೂಲಾಗದ ಹಣವೆಂದು ತೀರ್ಮಾನಿಸಿ ಲೆಕ್ಕದಿಂದ ತೆಗೆದುಹಾಕಲಾಗಿದೆ ಎಂಬುದನ್ನು ತಿಳಿದುಕೊಳ್ಳಲು ಈ ಸದನಕ್ಕೆ ಸಾಧ್ಯವಾಗುತ್ತದೆ.

ಅಧಿಕೃತ ಮತ್ತು ಅನಧಿಕೃತವಾದ ನನ್ನ ಅಲ್ಪ ಸ್ವಲ್ಪ ತನಿಖೆಯಿಂದ ನನಗೆ ಗೊತ್ತಾದ ಪ್ರಕಾರ ಈಗಾಗಲೇ ನೀಡಲಾದ ಒಟ್ಟು ಹಣದಲ್ಲಿ ಶೇ. 50 ರಿಂದ 60 ರಷ್ಟು ಹಣವನ್ನು

ವಸೂಲಾಗದ ಹಣವೆಂದು ತೀರ್ಮಾನಿಸಿ ಲೆಕ್ಕದಿಂದ ತೆಗೆದುಹಾಕಬಹುದಾಗಿದೆ ಎನ್ನುವುದನ್ನು ನನ್ನ ಜವಾಬ್ದಾರಿ ಸ್ಥಾನವನ್ನರಿತು ಇಲ್ಲಿ ಹೇಳುತ್ತಿದ್ದೇನೆ. ನಾನು ತಪ್ಪಾಗಿ ಉಲ್ಲೇಖಿಸಿದ್ದಲ್ಲಿ, ನನ್ನ ಸ್ನೇಹಿತರಾದ ಶ್ರೀ ಎ.ಸಿ. ಗುಹಾರವರಿಂದ ಸರಿಪಡಿಸಿಕೊಳ್ಳಲು ನಾನು ಸಿದ್ಧನಿದ್ದೇನೆ. ಸರ್ಕಾರಿ ಹಣಕಾಸು ನಿಗಮಗಳ ವಸ್ತುಸ್ಥಿತಿ ಹೀಗಿರುವಾಗ, ಇನ್ನು ಮುಂದೆ ಅವುಗಳು ಕಾರ್ಯನಿರ್ವಹಿಸಲು ಕಾನೂನಿನಲ್ಲಿ ಅವಕಾಶ ಕಲ್ಪಿಸುವುದರಲ್ಲಿ ಹಾಗೂ ಅವುಗಳನ್ನು ಬಿಗಿಗೊಳಿಸಿ ನೋಡುವುದರಲ್ಲಿ ಈ ಸದನಕ್ಕಿರುವ ಕರ್ತವ್ಯ ಮತ್ತು ಹೊಣೆಗಾರಿಕೆಗಳಾದರೂ ಏನು ?

ಈ ಒಂದು ಸಂದರ್ಭದಲ್ಲಿ ರಾಜಕೀಯ ಭಾಷಣ ಮಾಡಲು ನಾನು ಇಷ್ಟ ಪಡುವುದಿಲ್ಲ. ಆದರೂ, ನಾನಿದನ್ನು ಹೇಳಲು ಇಚ್ಛಿಪಡುತ್ತೇನೆ. ಏನೆಂದರೆ, ವಿವಿಧ ಹಣಕಾಸು ನಿಗಮಗಳು ಮನವಿಗಳನ್ನು ಪರಿಷ್ಕರಿಸುತ್ತಿರುವ ರೀತಿಯ ಬಗ್ಗೆ ಕೂಡಲೇ ಕಣ್ಣು ಹಾಯಿಸಬೇಕಾಗಿದೆ. ಈ ಒಂದು ವಿಧೇಯಕದ ಅಡಿಯಲ್ಲಿ ಹಾಗೂ ಅಷ್ಟೇ ಅಲ್ಲದೆ 1951 ರ ಅಧಿನಿಯಮದ ಅಡಿಯಲ್ಲಿ ಭಾರತ ಸರ್ಕಾರವು ಅದಕ್ಕಿರುವ ವ್ಯಾಪಕ ಅಧಿಕಾರಗಳನ್ನು ಉಪಯೋಗಿಸಿ ಸಾಲ ನೀಡುವಲ್ಲಿ ಯಾವುದೇ ರೀತಿಯ ಸ್ವಜನ ಪಕ್ಷಪಾತಕ್ಕೆ ಅವಕಾಶವಿಲ್ಲದಂತೆ ನೋಡಿಕೊಳ್ಳಲು ರಾಜ್ಯ ಸರ್ಕಾರಗಳಿಗೆ ಸೂಚನೆ ನೀಡುವುದೆಂಬ ಭರವಸೆ ನನಗಿದೆ. ಸಾಲಗಳನ್ನು ಮಂಜೂರು ಮಾಡುವ ಬಗ್ಗೆ ಇದಕ್ಕಿಂತ ಹೆಚ್ಚಿನದನ್ನು ಹೇಳಲು ನಾನು ಇಷ್ಟಪಡುವುದಿಲ್ಲ.

ನನ್ನ ರಾಜ್ಯದ ಅನುಭವ ಸ್ವಲ್ಪಮಟ್ಟಿಗೆ ನನಗಿದೆ. 1953 ರಲ್ಲಿ ಅದು ಅಸ್ತಿತ್ವಕ್ಕೆ ಬಂದಿದ್ದರೂ, ಮೊದಲು ಅದು ಮದ್ರಾಸ್ ರಾಜ್ಯದ ಭಾಗವಾಗಿತ್ತು. ಸಾಲಕ್ಕಾಗಿ ಯಾವಾಗಲಾದರೂ ಅರ್ಜಿ ಸಲ್ಲಿಸಿದರೆ, ಆ ಅರ್ಜಿಯನ್ನು ಅನೇಕ ನಿರ್ಬಂಧಗಳನ್ನೊಡ್ಡಿ ತೂಗುಯ್ಯಾಲೆಯಾಡಿಸಲಾಗುತ್ತಿತ್ತು. ಈ ಶಬ್ದವನ್ನು ನಾನು ಉದ್ದೇಶಪೂರ್ವಕವಾಗಿ ಇಲ್ಲಿ ಬಳಸುತ್ತಿದ್ದೇನೆ. ಅನೇಕ ಜನರ ಮಧ್ಯಪ್ರವೇಶವಾಗಬೇಕಾಗುತ್ತಿತ್ತು. ಹಾಗೆಯೇ ಅನೇಕ ಮಧ್ಯವರ್ತಿಗಳು ಅದನ್ನು ದೃಢೀಕರಿಸಬೇಕಾಗುತ್ತಿತ್ತು. ಪರಿಣಾಮವಾಗಿ ಸಣ್ಣ ಮತ್ತು ಗುಡಿ ಕೈಗಾರಿಕೆಗಳನ್ನು ಸ್ಥಾಪಿಸುವಲ್ಲಿ ಸಹಾಯ ಮಾಡಬೇಕೆಂಬ ಪ್ರಾಮಾಣಿಕ ಉದ್ದೇಶವೇ, ಆ ವಿನಂತಿ ಎಷ್ಟೇ ಪ್ರಾಮಾಣಿಕವಾಗಿದ್ದರೂ, ಈಡೇರುತ್ತಿರಲಿಲ್ಲ.

ಆದ್ದರಿಂದ, ಈ ಸ್ವರೂಪದ ವಿಧೇಯಕವನ್ನು ಈ ಸದನ ಅಂಗೀಕರಿಸುವಾಗ, ಮಾನ್ಯ ಸಚಿವರು ಈ ಸದನಕ್ಕೆ ಆಶ್ವಾಸನೆ ನೀಡಬೇಕಾಗುತ್ತದೆ. ಭಾರತ ಸರ್ಕಾರ ಕೇವಲ ಈ ಕಾನೂನನ್ನು ಅಂಗೀಕರಿಸಿ ಕಾನೂನು ಪುಸ್ತಕದಲ್ಲಿ ಸೇರಿಸುವುದಿಲ್ಲ ಹಾಗೂ ಈ ಸರ್ಕಾರಿ ಹಣಕಾಸು ನಿಗಮಗಳು ತಮಗೆ ಇಚ್ಛೆಬಂದಂತೆ ಕಾರ್ಯ ನಿರ್ವಹಿಸಲು ಅವಕಾಶ ಕೊಡುವುದಿಲ್ಲ ಎಂದು ಆಶ್ವಾಸನೆ ಕೊಡಬೇಕಾಗುತ್ತದೆ. ಬೇರೆ ರೀತಿಯಲ್ಲಿ ಹೇಳುವುದಾದರೆ, ಇಲ್ಲಿ ಒಂದು ರೀತಿಯ ವ್ಯವಸ್ಥೆ ಇರಬೇಕಾಗುತ್ತದೆ, ಆ ವ್ಯವಸ್ಥೆಯಿಂದ (ಎ) ರಿಸರ್ವ್ ಬ್ಯಾಂಕ್ - ಈ

ಬಗ್ಗೆ ಕೆಲವು ಅವಕಾಶಗಳಿದ್ದರೂ ಅವು ಎಷ್ಟು ಪರಿಣಾಮಕಾರಿಯಾಗಿಲ್ಲವೆಂಬುದು ನನಗೆ ಗೊತ್ತಿದೆ, (ಬಿ) ಭಾರತ ಸರ್ಕಾರ - ಈ ಬಗ್ಗೆಯೂ ಕೂಡ ಕೆಲವು ಅವಕಾಶಗಳಿದ್ದೂ ಅವುಗಳು ಅಷ್ಟು ಪರಿಣಾಮಕಾರಿಯಾಗಿಲ್ಲ ಹಾಗೂ ಇವೆಲ್ಲವುಗಳಿಗಿಂತ ಮಿಗಿಲಾಗಿ (ಸಿ) ಈ ಸಂಸತ್ತು ಇವುಗಳಿಗೆ ಈ ಸರ್ಕಾರಿ ಹಣಕಾಸು ನಿಗಮಗಳ ಕಾರ್ಯ ನಿರ್ವಹಣಾ ರೀತಿಯ ಬಗ್ಗೆ ಸಾಕಷ್ಟು ಮಾಹಿತಿಯನ್ನು ಪಡೆಯುವ ಮುಕ್ತ ಅವಕಾಶವಿರಬೇಕು.

ಅಂತಿಮವಾಗಿ ನಾನು ಹೇಳುವುದೇನೆಂದರೆ, ಭಾರತ ಸರ್ಕಾರದ ಉದ್ದೇಶ ಸಣ್ಣ ಕೈಗಾರಿಕೆಗಳಿಗೆ ಸಹಾಯ ಮಾಡುವುದೇ ಆಗಿದ್ದರೆ ·ಇಡೀ ಸದನದ ಒಂದು ಧ್ವನಿಯೂ ಕೂಡ ಈ ಉದ್ದೇಶವನ್ನು ವಿರೋಧಿಸುವುದಿಲ್ಲವೆಂಬ ಭರವಸೆ ನನಗಿದೆ. ದಯಮಾಡಿ ಕೈಗಾರಿಕೆಗಳಿಗೆ ಕೈಗೆಟುಕುವಂತೆ ನಿರ್ಣಯ ಮಾಡಿ, ದಯಮಾಡಿ ಕಾಬೂಲಿ ಲೇವಾದೇವಿಗಾರರಾಗಬೇಡಿ ಹಾಗೂ ಈ ಹಣಕಾಸು ನಿಗಮಗಳು ಶೇ. $5^{1}/_{2}$ ಯಿಂದ ಶೇ. 7 ರಷ್ಟು ಬಡ್ಡಿಯನ್ನು ವಸೂಲಿ ಮಾಡಲು ಬಿಡಬೇಡಿ.

## 6. ಸಾರ್ವಜನಿಕ ನಿಗಮಗಳ ಮೇಲೆ ಸಂಸದೀಯ ನಿಯಂತ್ರಣ*

ಸಾರ್ವಜನಿಕ ನಿಗಮಗಳ ಸಂಸದೀಯ ನಿಯಂತ್ರಣದ ಜರೂರತೆಯನ್ನರಿತು, ಈ ಚರ್ಚೆಯನ್ನು ಪ್ರಾರಂಭಿಸುತ್ತಿದ್ದೇನೆ. ಈ ಚರ್ಚೆ ಶೈಕ್ಷಣಿಕವಾದ ಚರ್ಚೆಯಲ್ಲ. ಸುದೀರ್ಘವಾಗಿ ಮಾತನಾಡಬೇಕೆಂಬ ಚಪಲದಿಂದಾಗಲೀ ಅಥವಾ ಚರ್ಚಾಂಕಗಳನ್ನು ಗಳಿಸಬೇಕೆಂಬ ಆಸೆಯಿಂದಾಗಲೀ ನಾನಿಲ್ಲಿ ಮಾತನಾಡುತ್ತಿಲ್ಲ.

ನನ್ನ ಈ ಚರ್ಚೆಯ ಉದ್ದೇಶ ಮಂತ್ರಿಗಳ ಅರ್ಥಾತ್ ಇಲಾಖೆಗಳ ಕೈಬಲಪಡಿಸುವುದು ಮತ್ತು ಅದಕ್ಕಿಂತಲೂ ಮುಖ್ಯವಾಗಿ ಮಾನ್ಯರೆ, ಇತ್ತೀಚಿನ ವರ್ಷಗಳಲ್ಲಿ ಅಸ್ತಿತ್ವಕ್ಕೆ ಬಂದಿರುವ ಈ ಸಾರ್ವಜನಿಕ ನಿಗಮಗಳ ಕಾರ್ಯವೈಖರಿಯನ್ನು ತನಿಖೆ ಮಾಡುವ ಈ ಸದನದ ಸಕ್ಷಮತೆ ಬಗ್ಗೆ ಸಂಶಯದ ನೆರಳೂ ಬೀಳದಂತೆ ನೋಡಿಕೊಳ್ಳುವುದು. ಈ ಚರ್ಚೆ ಕೇವಲ ಒಂದು ಮಂತ್ರಾಲಯಕ್ಕೆ ಮಾತ್ರ ಸೀಮಿತವಾಗಿಲ್ಲ. ಈ ಚರ್ಚೆಯ ವಿಷಯಕ್ಕೆ ಸಂಬಂಧಪಟ್ಟಂತೆ ಹೆಚ್ಚೂ ಕಡಿಮೆ 9 ಮಂತ್ರಾಲಯಗಳನ್ನು ನಾನಿಲ್ಲಿ ಪಟ್ಟಿ ಮಾಡಿದ್ದೇನೆ. ಪ್ರಾಯಶಃ ಈ ಪಟ್ಟಿಗೆ ಇನ್ನೂ ಒಂದೆರಡು ಮಂತ್ರಾಲಯಗಳು ಸೇರಬಹುದು. ಉತ್ಪಾದನಾ ಮಂತ್ರಾಲಯ, ರಕ್ಷಣಾ ಮಂತ್ರಾಲಯ, ನೀರಾವರಿ ಮಂತ್ರಾಲಯ, ಸಾರಿಗೆ ಮಂತ್ರಾಲಯ, ದೂರಸಂಪರ್ಕ ಮಂತ್ರಾಲಯ, ನೈಸರ್ಗಿಕ ಸಂಪನ್ಮೂಲ ಮಂತ್ರಾಲಯ ಹಾಗೂ ವೈಜ್ಞಾನಿಕ ಸಂಶೋಧನಾ ಮಂತ್ರಾಲಯಗಳು. ಹಾಗೆಯೇ ಪುನರ್ವಸತಿ ಮಂತ್ರಾಲಯವೂ ಕೂಡ ಈ ಚರ್ಚೆಯಲ್ಲಿ ಒಳಗೊಳ್ಳುತ್ತಿವೆ. ಈ ಚರ್ಚೆಯ ಗಹನತೆಯನ್ನು ಈ ಸದನಕ್ಕೆ ಸ್ಪಷ್ಟಪಡಿಸುವ ಸಲುವಾಗಿ ವಿಶೇಷವಾಗಿ ಉತ್ಪಾದನಾ ಮಂತ್ರಾಲಯದ ಜವಾಬ್ದಾರಿಯಲ್ಲಿರುವ ನಿಗಮ ಮತ್ತು ಕಂಪನಿಗಳನ್ನು ಈ ಕೆಳಗೆ ಪಟ್ಟಿ ಮಾಡಿದ್ದೇನೆ:

ಸಿಂದ್ರಿ ರಸಗೊಬ್ಬರ ಮತ್ತು ರಾಸಾಯನಿಕಗಳು

ಪೆನ್ಸಿಲಿನ್ ಕಾರ್ಖಾನೆ

ಡಿ.ಡಿ.ಟಿ. ಕಾರ್ಖಾನೆ

ಡ್ರೈ ಕೋರ್ ಕೇಬಲ್ ಕಾರ್ಖಾನೆ

ಯಂತ್ರೋಪಕರಣಗಳ ಕಾರ್ಖಾನೆ, ಜಾಲಹಳ್ಳಿ

ಹಿಂದೂಸ್ತಾನ್ ಷಿಪ್‌ಯಾರ್ಡ್

ಈ ಚರ್ಚೆಯ ವ್ಯಾಪ್ತಿಯಲ್ಲಿ ಬರುವಂಥ ನಿಗಮ ಮತ್ತು ಕಂಪನಿಗಳ ಸಂಪೂರ್ಣ ಪಟ್ಟಿಯನ್ನು ನೀಡಬೇಕೆಂಬ ಇಚ್ಛೆ ನನಗಿಲ್ಲ. ಈ ಕಂಪನಿಗಳ ನಿರ್ವಹಣೆಯಲ್ಲಿ ತೊಡಗಿಸಲಾದ

* ............ ಸಾರ್ವಜನಿಕ ನಿಗಮಗಳ ಮೇಲೆ ಸಂಸದೀಯ ನಿಯಂತ್ರಣದ ಮೇಲಿನ ಚರ್ಚೆ., ಮೇಲೆ ಸಭೆ., ದಿನಾಂಕ 10ನೇ ಡಿಸೆಂಬರ್, 1953., ಸಿಸಿ 190419, 1925,1926, 1969

ಅಗಾಧ ಮೊತ್ತದ, ಅಂದರೆ ರಾಷ್ಟ್ರೀಯ ಸಂಪನ್ಮೂಲಗಳ ಪ್ರಾಮುಖ್ಯತೆಯನ್ನು ಎತ್ತಿ ತೋರಿಸುವ ದೃಷ್ಟಿಯಿಂದ ಕೆಲವನ್ನು ಮಾತ್ರವೇ ನಾನು ಹೆಸರಿಸಿದ್ದೇನೆ.

ರಾಷ್ಟ್ರೀಕರಣ ಮತ್ತು ಮಿಶ್ರ ಅರ್ಥ ವ್ಯವಸ್ಥೆಯನ್ನು ಭಾರತ ಘೋಷಿಸಿದಾಗಿನಿಂದ ಅನೇಕ ನಿಗಮ ಮತ್ತು ಕಂಪನಿಗಳು ಅಸ್ತಿತ್ವಕ್ಕೆ ಬಂದವು. ಪ್ರಥಮವಾಗಿ, ಸರ್ಕಾರವೇ ಪೂರ್ತಿ ಹಣವನ್ನು ಭರಿಸಿದಂಥ (ಈ ಹಣ ತೆರಿಗೆದಾರರ ಹಣ) ಒಂದು ವರ್ಗವಿದೆ. ಉದಾಹರಣೆಗೆ ದಾಮೋದರ ವ್ಯಾಲಿ ನಿಗಮ, ಹಿರಾಕುಡ್ ಸಿಂದ್ರಿ ರಸಗೊಬ್ಬರ ಹಿಂದೂಸ್ತಾನ್ ಕೇಬಲ್, ಹಿಂದೂಸ್ತಾನ್ ಏರ್‌ಕ್ರಾಫ್ಟ್ ಇತ್ಯಾದಿಗಳು. ಹಾಗೆಯೇ ಇನ್ನೊಂದು ವರ್ಗವಿದೆ, ಅದರಲ್ಲಿ ಸರ್ಕಾರದ ಹೂಡಿಕೆ (ಅಂದರೆ ತೆರಿಗೆದಾರರ ಹಣ) ಭಾಗಶಃವಿದ್ದರೆ, ಖಾಸಗಿ ಹೂಡಿಕೆಗಳು ಭಾಗಶಃ ಇರುತ್ತವೆ. ಈ ವರ್ಗದ ಎರಡು ಉದಾಹರಣೆಗಳು ನನ್ನ ಬಳಿ ಇವೆ. ಒಂದು ಹಿಂದೂಸ್ಥಾನ್ ಷಿಪ್‌ಯಾರ್ಡ್, ಮತ್ತೊಂದು ಟಾಟಾ ಲೋಕೋಮೋಟೀವ್ ಮತ್ತು ಇಂಜಿನೀಯರಿಂಗ್ ಸಂಸ್ಥೆ. ಕೊನೆಯದಾಗಿ ಮಾನ್ಯರೆ, ಮತ್ತೊಂದು ದೃಷ್ಟಿಕೋನದಿಂದ ನೋಡುವಂಥ ಮೂರನೆಯದಾದ ಇನ್ನೊಂದು ವರ್ಗವಿದೆ, ಅಂದರೆ, ಕಂಪನಿ ನಿಯಮಗಳ ಅಡಿಯಲ್ಲಿ ಸಾಮಾನ್ಯವಾಗಿ ನಿಗಮಿತವಾಗಬೇಕಾಗಿರುವಂಥ ಕಾರ್ಯ ಸಂಸ್ಥೆಗಳು ಇವು. ಉದಾಹರಣೆಗೆ, ಚಿತ್ತರಂಜನ್ ಲೋಕೋಮೋಟೀವ್ ವರ್ಕ್ಸ್ ಮತ್ತು ರಕ್ಷಣಾ ಮಂತ್ರಾಲಯದ ಆಯುಧ ಕಾರ್ಖಾನೆ. ಇವುಗಳು ಸಂಪೂರ್ಣವಾಗಿ ಇಲಾಖಾ ಕಾರ್ಯ ಸಂಸ್ಥೆಗಳಾಗಿದ್ದು, ಯಾವುದೇ ಸ್ವಾಯತ್ತತೆ ಇವುಗಳಿಗೆ ಇರುವುದಿಲ್ಲ. ಈ ಎಲ್ಲಾ ನಿಗಮಗಳಲ್ಲಿ ಹೂಡಿಕೆಗಳ ರೂಪದಲ್ಲಿ ತೊಡಗಿಸಿರುವ ಅಂದಾಜು ಸಾರ್ವಜನಿಕ ಹಣವನ್ನು ಲೆಕ್ಕಹಾಕುವ ಪ್ರಯತ್ನವನ್ನು ನಾನಿಲ್ಲಿ ಮಾಡಿದ್ದೇನೆ. ಆದರೆ, ಅಧಿಕೃತವಾದ ಅಂತಿಮ ಅಂಕಿಸಂಖ್ಯೆಗಳನ್ನು ಪಡೆಯಲು ನನಗೆ ಸಾಧ್ಯವಾಗದಿದ್ದಕ್ಕೆ ವಿಷಾದಿಸುತ್ತೇನೆ. ಕೆಲವಷ್ಟೇ ನಿಗಮಗಳಿಗೆ ಸಂಬಂಧಿಸಿದ ಕೆಲವು ಅಂಕಿಸಂಖ್ಯೆಗಳನ್ನು ನಾನು ಇಲ್ಲಿ ಉದಾಹರಿಸುತ್ತಿದ್ದು, ಅವುಗಳು ನಾನು ನಿರೂಪಿಸಿದ ಅಂಶಗಳ ಮೇಲೆ ಬೆಳಕು ಚೆಲ್ಲುತ್ತವೆ.

| | |
|---|---|
| ಭಾಕ್ರಾ - ನಂಗಲ್ | ರೂ. ಗಳು 51 ಕೋಟಿ |
| ದಾಮೋದರ್ ವ್ಯಾಲಿ ನಿಗಮ | ರೂ.ಗಳು 47.45 ಕೋಟಿ |
| ಹಿರಾಕುಡ್ (ಸೆಪ್ಟೆಂಬರ್ 1953) | ರೂ.ಗಳು 25.48 ಕೋಟಿ |
| ಹಿಂದೂಸ್ತಾನ್ ಷಿಪ್‌ಯಾರ್ಡ್ - | ಯೋಜನಾ ಆಯೋಗದ ಧನ ವಿನಿಯೋಗ ರೂ. 14.00 ಕೋಟಿಗಳಲ್ಲಿ, ರೂ. 3 ರಿಂದ 4 ಕೋಟಿಗಳನ್ನು ಖರ್ಚು ಮಾಡಲಾಗಿದೆ. |
| ಸಿಂದ್ರಿ ರಸಗೊಬ್ಬರ ಮತ್ತು ರಾಸಾಯನಿಕಗಳು | ರೂ.ಗಳು 27.00 ಕೋಟಿ |

ಸಧ್ಯದಲ್ಲಿಯೇ ಒಂದು ಉಕ್ಕಿನ ಕಾರ್ಖಾನೆ ಅಸ್ತಿತ್ವಕ್ಕೆ ಬರಲಿದ್ದು ಅದರ ಅಂದಾಜು ವೆಚ್ಚ ರೂ. 80.00 ಕೋಟಿಗಳೆಂದು ನಿರೀಕ್ಷಿಸಲಾಗಿದೆ.

ಅಂದರೆ ಈ ಸಂಸ್ಥೆಗಳ ಬಂಡವಾಳ ವಲಯದಲ್ಲಿ ಸುಮಾರು ರೂ. 400 ರಿಂದ 500 ಕೋಟಿಗಳಷ್ಟೆ ಸಾರ್ವಜನಿಕ ಹಣ ಒಳಗೊಳ್ಳುವುದೆಂದಾಗುತ್ತದೆ.

ಈ ಎಲ್ಲಾ ನಿಗಮ ಮತ್ತು ಮಂಡಲಿಗಳಿಗೆ ಏಕರೂಪದ ಪದ್ಧತಿ ಇಲ್ಲದಿರುವುದು ಕಂಡುಬರುತ್ತಿದ್ದು, ಈ ಸಮಸ್ಯೆಯ ಒಂದು ಸಾರ್ವತ್ರಿಕ ದೃಷ್ಟಿಕೋನದ ಬಗ್ಗೆ ಮಾತ್ರ ನಾನಿಲ್ಲಿ ಸ್ಪಷ್ಟಪಡಿಸುತ್ತಿದ್ದೇನೆ. ತಾವು ಹೇಳುವಂಥ ವಿಶೇಷ ಆಡಳಿತ ಮಂಡಲಿಗಳು, ಅನೇಕ ಪ್ರಾಂತೀಯ ಸರ್ಕಾರಗಳು ಕೆಲವು ವೇಳೆ ಭಾರತ ಸರ್ಕಾರವೂ ಈ ಯೋಜನೆಗಳಲ್ಲಿ ಬರುತ್ತವೆಯೆಂಬ ಅಂಶವನ್ನು ನಾನು ಒಪ್ಪುತ್ತೇನೆ.

ಈ ಸಮಸ್ಯೆಯ ಇನ್ನೊಂದು ಮುಖ್ಯ ಬಹು ಸ್ವಾರಸ್ಯವಾಗಿದೆ. ದಾಮೋದರ್ ವ್ಯಾಲಿ ನಿಗಮ ಮತ್ತು ಭಾಕ್ರಾ - ನಂಗಲ್ ಯೋಜನೆಗಳಲ್ಲಿ ಅಮೇರಿಕನ್ನರು ತಳ ಊರಿದ್ದಾರೆ. ಬ್ರಿಟೀಷರು ದೂರವಾಣಿ ಕಾರ್ಖಾನೆಯಲ್ಲಿದ್ದಾರೆ. ಜರ್ಮನ್ನರು ಉಕ್ಕು ಸ್ಥಾವರದಲ್ಲಿ, ಪಿಷ್‌ಯಾರ್ಡ್‌ನಲ್ಲಿ ಫ್ರೆಂಚರು, ಸ್ವಿಸ್‌ನವರು ಅಂಬರ್‌ನಾಥ್ ಯಂತ್ರೋಪಕರಣ ಕಾರ್ಖಾನೆಯೆಲ್ಲಿ ಇದ್ದಾರೆ.

ಈ ನಿಗಮ ಮತ್ತು ಕಂಪನಿಗಳನ್ನು ಯಾವ ರೀತಿಯಲ್ಲಿ ಮೊದಲು ಸ್ಥಾಪಿಸಲಾಯಿತು ಎನ್ನುವುದನ್ನು ಇಲ್ಲಿ ಸಂಕ್ಷಿಪ್ತವಾಗಿ ಹೇಳಲು ಇಚ್ಛಿಸುತ್ತೇನೆ.

ಭಾಕ್ರಾ ನಂಗಲ್ ಮತ್ತು ಹಿರಾಕುಡ್ ಯೋಜನೆಗಳು, ನಿಗಮಗಳು ಅಲ್ಲ ಅಥವಾ ಕಂಪನಿಗಳು ಅಲ್ಲ ಎಂದು ಅಭಿಪ್ರಾಯಪಟ್ಟು, ಮಾನ್ಯ ಅರ್ಥ ಸಚಿವರು ಸದಸ್ಯರು ಸದನಕ್ಕೆ ನೀಡಿದ ಅಂಕಿ ಅಂಶಗಳನ್ನು ಸರಿಪಡಿಸಿದರು. ಹಣವನ್ನು ಸಂಬಂಧಪಟ್ಟ ಸರ್ಕಾರ ಖರ್ಚು ಮಾಡಿದೆ, ಭಾಕ್ರಾ - ನಂಗಲ್‌ಗೆ ಸಂಬಂಧಿಸಿದಂತೆ ಪಂಜಾಬ್ ಸರ್ಕಾರ ಖರ್ಚು ಮಾಡಿದರೆ ಹಿರಾಕುಡ್ ಯೋಜನೆಗೆ ಒರಿಸ್ಸಾ ಸರ್ಕಾರ ಖರ್ಚು ಮಾಡಿದೆ. ಭಾಕ್ರಾ - ನಂಗಲ್‌ಗೆ ಸಂಬಂಧಪಟ್ಟಂತೆ ಆರ್ಥಿಕ ನಿಯಂತ್ರಣ ಹಾಗೂ ಅಲ್ಪ ಪ್ರಮಾಣದ ತಾಂತ್ರಿಕ ಮತ್ತು ಆಡಳಿತ ನಿಯಂತ್ರಣ, ರಾಜಸ್ಥಾನ, ಪಂಜಾಬ್ ಮತ್ತು ಪೆಪ್ಸುಗಳ ಜಂಟಿ ಮಂಡಲಿ ಮತ್ತು ಕೇಂದ್ರ ಸರ್ಕಾರಗಳ ಮೂಲಕ ನಡೆದಿದ್ದು, ಈ ರೀತಿಯ ನಿಯಂತ್ರಣ ಆಡಳಿತಾತ್ಮಕ ಉದ್ದೇಶಗಳಿಗಾಗಿ ಆಗಿದೆ. ಆದ್ದರಿಂದ, ಆ ಅಂಕಿಅಂಶಗಳನ್ನು ಒಟ್ಟು ಹಣದಲ್ಲಿ ಕಡಿತಗೊಳಿಸಬೇಕಾಗುತ್ತದೆ ಎಂದು ಮಾನ್ಯ ಸಚಿವರು ನೀಡಿದ ನಿವಾರಣೆ ಸನ್ಮಾನ್ಯ ಸದಸ್ಯರು ಒಪ್ಪಿಕೊಂಡರು.

ವಿವರವಾಗಿ ಹೇಳಲು ನನಗಿಲ್ಲಿ ಸಮಯವಿಲ್ಲ. ಆದರೆ, ಈ ಕಂಪನಿ ಮತ್ತು ನಿಗಮಗಳ ಪ್ರಾರಂಭಿಕ ರೂಪುರೇಷೆಗಳನ್ನು ರಚಿಸುವ ಮತ್ತು ಮಾತುಕತೆಗಳನ್ನು ನಡೆಸುವ ಜವಾಬ್ದಾರಿಯನ್ನು ಕೇಂದ್ರದ ಮತ್ತು ದೇಶದ ಇತರೆ ಸ್ಥಳಗಳಲ್ಲಿರುವ ಇಲಾಖಾ ಮುಖ್ಯಸ್ಥರಿಗೆ

ವಹಿಸಿರುವುದಂತೂ ಸ್ಪಷ್ಟ. ವಿದೇಶಿ ಮತ್ತಿತರ ಸಂಸ್ಥೆಗಳ ಜೊತೆ ಪ್ರಾರಂಭಿಕ ಕಾರ್ಯಕ್ರಮಗಳ ಜಾರಿ ವಿಷಯದ ಮತ್ತು ಈ ನಿಗಮಗಳು ಜನ್ಮತಾಳುವುದಕ್ಕಿಂತ ಮೊದಲೇ ವಿದೇಶೀ ಸಾಮಗ್ರಿಗಳನ್ನು ಖರೀದಿಸುವ ಸಂಬಂಧದಲ್ಲಿ ಸರ್ಕಾರಿ ಅಧಿಕಾರಿಗಳು ಪದೇ ಪದೇ ವಿದೇಶಗಳಿಗೆ ಹೋಗುತ್ತಿರುವ ಸಂಗತಿ ಇಡೀ ದೇಶಕ್ಕೆ ಗೊತ್ತಿದ್ದರೂ ಗುಲ್ಲೆಬ್ಬಿಸುವಂಥ ಈ ಹಗರಣಗಳ ಬಗ್ಗೆ ಪ್ರಸ್ತಾಪಿಸುವುದು ನನ್ನ ಉದ್ದೇಶವಲ್ಲ. ನಾನು ಪ್ರಸ್ತಾಪಿಸುವಂಥ ಅಂಶ ಇದು: ಸಾಮಾನ್ಯವಾಗಿ ಇಂಥ ವ್ಯಾಪಕ ಪ್ರಸ್ತಾವಗಳಲ್ಲಿ ಅಡಗಿರುವ ಪ್ರಮುಖ ಅಂಶಗಳನ್ನು ಕುರಿತು, ಇದಕ್ಕೆ ಅಪವಾದಗಳೂ ಉಂಟು, ಅಧ್ಯಕ್ಷರೆ, ಅವುಗಳ ವಿಚಾರ ವಿನಿಮಯಗಳಲ್ಲಿ ಪ್ರಾರಂಭದಿಂದಲೂ ಯಾವ ಮಂತ್ರಿಗಳ ಪಾತ್ರವೂ ಇಲ್ಲಿ ಕಂಡುಬರುತ್ತಿಲ್ಲ. ಈ ನೆಲದ ಕಾನೂನಿನ ಮೇರೆಗೆ ಅಥವಾ ಕಾರ್ಯಾಂಗ ಕ್ರಮದ ಮೇರೆಗೆ ಇವುಗಳನ್ನು ನಿಗಮಗಳನ್ನಾಗಿ ಮಾಡಿದರೆ ಅಥವಾ ಇವುಗಳನ್ನು ಅಸ್ತಿತ್ವಕ್ಕೆ ತಂದರೆ ಮುಗಿಯಿತು, ಈ ಅಧಿಕಾರಿಗಳು ಸಾರ್ವಜನಿಕ ನಿಯಂತ್ರಣಕ್ಕಾಗಲೀ ಅಥವಾ ಸಾರ್ವಜನಿಕ ಟೀಕೆಗಳಿಗಾಗಲೀ ಕಿವಿಗೊಡದಂಥ ಅಧಿಕಾರಿಗಳಾಗಿ ಬಿಡುತ್ತಾರೆ. ಇಂಥವರಿಗೆ ಹೊಣೆಗಾರಿಕೆಗಳನ್ನು ವಹಿಸಿಕೊಟ್ಟಿರುವ ರೀತಿ ಖಂಡಿತವಾಗಿಯೂ ಈ ಸದನಕ್ಕೆ ತೃಪ್ತಿಯನ್ನು ತಂದಿಲ್ಲವೆಂಬುದು ನನ್ನ ಅನಿಸಿಕೆ. ಆಹಾರ ಮಂತ್ರಾಲಯದ ಅತ್ಯಂತ ನಿಪುಣ ಐ.ಪಿ.ಎಸ್. ಅಧಿಕಾರಿಯೊಬ್ಬರು ಈಗ ಹಡಗುಗಳ ನಿರ್ಮಾಣದಲ್ಲಿ ತೊಡಗಿರುವಂಥ ಪ್ರಕರಣ ನನಗೆ ಗೊತ್ತಿದೆ. ನನಗೆ ಗೊತ್ತಿರುವ ಇಂಥವೇ ಇನ್ನೊಂದು ಪ್ರಕರಣದಲ್ಲಿ ಮತ್ತೊಬ್ಬರು ಇತ್ತೀಚಿನವರೆಗೂ ಸಿಂಧ್ರಿ ಕಾರ್ಖಾನೆಯ ಹೊಣೆ ಹೊತ್ತು, ನಂತರ ಸಚಿವಾಲಯಕ್ಕೆ ಬಂದು, ಈಗ ರಾಜ್ಯ ಸರ್ಕಾರ ಒಂದರಲ್ಲಿ ರಾಜಸ್ವ ಮಂಡಲಿಯ ಸದಸ್ಯರೆಂದು ಸುಮ್ಮನೆ ಹೊತ್ತು ಕಳೆಯುತ್ತಿದ್ದಾರೆ. ಒಂದು ವರ್ಷದ ಅವಧಿಯಲ್ಲಿ ಇಷ್ಟೆಲ್ಲಾ ನಡೆದಿದೆ. ವಿದೇಶೀ ವ್ಯವಹಾರಗಳ ಮಂತ್ರಾಲಯದ ಮಹಾಕಾರ್ಯದರ್ಶಿಯವರ ಪ್ರಕರಣವೂ ಇಂಥದೇ ಆಗಿದ್ದು, ಅವರು ಈಗ ಷಿಪ್‌ಯಾರ್ಡಿನ ಅಧ್ಯಕ್ಷರಾಗಿದ್ದಾರೆ. ಈ ನಿಗಮಗಳು ಜನ್ಮತಾಳಿದಾಗಿನಿಂದಲೂ, ಸರ್ಕಾರದ ಅಧಿಕಾರಿಗಳು ಇವುಗಳನ್ನು ಅಡ್ - ಹಾಕ್ ಮೇಲೆ ನಡೆಸುತ್ತಿದ್ದು, ಇವುಗಳ ಸ್ಪಷ್ಟ ಚಿತ್ರಣವೇನೆಂಬುದು ಈ ಮಂತ್ರಾಲಯಗಳಿಂದಾಗಲೀ ಅಥವಾ ಈ ಸದನಕ್ಕಾಗಲೀ ತಿಳಿದೇ ಇಲ್ಲ, ಹಾಗೆಯೇ ನಮಗೂ ಗೊತ್ತಿಲ್ಲ.

ದಕ್ಷತೆ ಮತ್ತು ಆರ್ಥಿಕ ಪ್ರಯೋಜನಗಳನ್ನು ಗಣನೆಗೆ ತೆಗೆದುಕೊಳ್ಳದೇ ಹಾಗೂ ವಾಣಿಜ್ಯ ನಿರ್ವಹಣೆಯ ಕಾರ್ಯತತ್ವಗಳಿಗೆ ಬೆಲೆ ಕೊಡದೇ ಈ ಕಂಪನಿ, ಇಲ್ಲಿ ಮುಖ್ಯವಾಗಿ ಪರಿಗಣಿಸಬೇಕಾಗಿರುವ ಅಂಶವೆಂದರೆ, ಕಂಪನಿಯ ಕಾರ್ಯ ಚಟುವಟಿಕೆಗಳಿಗೆ ಸಂಬಂಧಪಟ್ಟ ಮಾಹಿತಿಯನ್ನು ಷೇರುದಾರರಿಗೆ ಒದಗಿಸಲೇಬೇಕೆಂದ್ದರೂ ಕಂಪನಿಯ ಹಿತಾಸಕ್ತಿಗೆ ಧಕ್ಕೆಯನ್ನುಂಟು ಮಾಡಬಹುದಾದ ಮಾಹಿತಿಯನ್ನು ತಿಳಿಸುವಂತಿಲ್ಲ.

ಹಾಗಾದರೆ, ಸಿಂಧ್ರಿ ಕಾರ್ಖಾನೆಯಲ್ಲಿರುವ ನಮ್ಮ ಷೇರುದಾರರು ಯಾರು? ರಾಷ್ಟ್ರಪತಿಯವರು ಮುಖ್ಯ ಷೇರುದಾರರಾಗಿದ್ದು, ಕೇವಲ ಒಂದು ಷೇರನ್ನು ಮಾತ್ರ

ಸಂಬಂಧಪಟ್ಟ ಮಂತ್ರಾಲಯದ ಕಾರ್ಯದರ್ಶಿಯವರು ಹೊಂದಿದ್ದಾರೆ. ಈ ವಿಷಯದ ಬಗ್ಗೆ ಮಾನ್ಯ ಉತ್ಪಾದನಾ ಸಚಿವರನ್ನು ಪ್ರಶ್ನಿಸಿದಾಗ ಅವರು ಈ ಸದನಕ್ಕೆ ನೀಡಿದ ಉತ್ತರ ಇದು. ಆಗ ಮಾನ್ಯ ಪ್ರಧಾನ ಮಂತ್ರಿಗಳು ಮಧ್ಯೆ ಪ್ರವೇಶಿಸಿದರು.

ದಿನಾಂಕ ನವೆಂಬರ್ 16 ರಂದಿನ ಈ ಸದನದ ಚರ್ಚೆಗಳಲ್ಲಿರುವಂತೆ ಅವರ ಹೇಳಿಕೆಯನ್ನು ಇಲ್ಲಿ ಉದಾಹರಿಸುತ್ತಿದ್ದೇನೆ.

> "ಸರ್ಕಾರ ಇಂಥ ವಿಷಯಗಳಲ್ಲಿ ತಮ್ಮ ಮಾರ್ಗದರ್ಶನವನ್ನು ಬಯಸುತ್ತದೆ. ಸ್ವಾಯತ್ತ ಸಂಸ್ಥೆಗಳು, ಮತ್ತು ಕೇಂದ್ರ ಹಾಗೂ ರಾಜ್ಯ ಸಂಸ್ಥೆಗಳು ತಮ್ಮ ದಿನನಿತ್ಯದ ಕಾರ್ಯ ಚಟುವಟಿಕೆಗಳನ್ನು ನಿರ್ವಹಿಸುವಲ್ಲಿ ಒಪ್ಪಂದ ಮತ್ತು ಮುಚ್ಚಳಿಕೆಗಳನ್ನು ಮಾಡಿಕೊಳ್ಳುತ್ತವೆ. ಈ ಬಗ್ಗೆ ಸಾಮಾನ್ಯವಾಗಿ ಸರ್ಕಾರ ಮಧ್ಯ ಪ್ರವೇಶಿಸುವುದಿಲ್ಲ......
>
> ಇನ್ನೊಂದು ಸಂದರ್ಭದಲ್ಲಿ ಅವರು ಹೇಳುತ್ತಾರೆ:
>
> "ಯಾವುದೇ ವಿಷಯವಿರಲಿ ಈ ಸದನ ಯಾವಾಗಲೂ ಮಧ್ಯೆ ಪ್ರವೇಶಿಸಬಹುದು ಹಾಗೂ ಸದನದ ಈ ಹಕ್ಕನ್ನು ಯಾರೂ ಪ್ರಶ್ನಿಸಿಲ್ಲ. ಇದು ಔಚಿತ್ಯದ ವಿಷಯ. ಇಂಥ ಸಣ್ಣ ವಿಷಯಗಳ ಮೇಲೆ........

ಹಾಗಾದರೆ ಉಲ್ಲೇಖಿಸಿದಂಥ ವಿಷಯಗಳಾದರೂ ಯಾವುವು? ನಾನು ಅವುಗಳನ್ನು ಪಟ್ಟಿ ಮಾಡಿದ್ದೇನೆ. ಅವುಗಳೆಂದರೆ ಸಿಂದ್ರಿ ರಸಗೊಬ್ಬರ ಸಂಸ್ಥೆಯು, ಮೆ. ಕರ್ಲ್‌ಸ್ಟಿಲ್ ಸಂಸ್ಥೆಯ ಜೊತೆಗೆ, ಅಗಾಧ ಪ್ರಮಾಣದ ಮೊತ್ತವನ್ನು ಒಳಗೊಂಡಿರುವ ಕಲ್ಲಿದ್ದಲ ಭಟ್ಟಿ ಸ್ಥಾಪನೆಯ ಕುರಿತು ಮಾಡಿಕೊಂಡಿರುವ ಒಪ್ಪಂದ ಮತ್ತು ಎರಡನೆಯದಾಗಿ ಮೆ. ಅಸೋಸಿಯೇಟೆಡ್ ಸಿಮೆಂಟ್ಸ್ ಸಂಸ್ಥೆಯವರೊಂದಿಗೆ ಮಾಡಿಕೊಂಡಿರುವ ಅಗಾಧ ಪ್ರಮಾಣ ಮೊತ್ತದ ಸುತ್ತಿಗೆ ಮಾರಾಟದ ಒಪ್ಪಂದ. ಎರಡನೇ ಪ್ರಕರಣ ವರ್ಷ ವರ್ಷ ಮಾಡಿಕೊಳ್ಳುವ ಒಪ್ಪಂದ. ಮಾನ್ಯ ಅಧ್ಯಕ್ಷರೆ, ಈಗ, ಈ ಹಂತದಲ್ಲಿ ತಾವು ಮಧ್ಯ ಪ್ರವೇಶಿಸಿದಿರಿ. ಆದರೆ ಈ ಪ್ರಕರಣದಲ್ಲಿ ವಿವರವಾಗಿ ರೂಲಿಂಗ್ ನೀಡಲು ತಾವು ತಯಾರಿಲ್ಲ. ಈ ನಿಗಮಗಳ ಕಾರ್ಯ ಚಟುವಟಿಕೆಗಳೂ ಸೇರಿದಂತೆ ಸದನದಲ್ಲಿ ಅನುಸರಿಸುವ ಪ್ರಕ್ರಿಯೆಗಳ ಕುರಿತು ಈ ಸದನಕ್ಕಿರುವ ಹಕ್ಕು ಮತ್ತು ಸಕ್ಷಮತೆ ಹಾಗೂ ಅಪೇಕ್ಷೆಗಳಿಗೆ ಈ ಚರ್ಚೆ ಸುಸಂಬದ್ಧವಾಗೂ ಕ್ರಮಬದ್ಧವಾಗಿರುವುದರಿಂದ, ತಮ್ಮ ರೂಲಿಂಗ್ ಬಗ್ಗೆ ಪ್ರಸ್ತಾಪಿಸಿದ್ದೇನೆ.

ತಮ್ಮ ಹೇಳಿಕೆ ಇದು, ಅದನ್ನು ಇಲ್ಲಿ ಉದಾಹರಿಸುತ್ತೇನೆ:

> "ಆದರೆ, ನನ್ನ ಪ್ರತಿಕ್ರಿಯೆ ಏನೆಂದರೆ ಒಂದು ನಿರ್ದಿಷ್ಟ ಸ್ವಾಯತ್ತ ನಿಗಮದ ಆಡಳಿತವನ್ನು ಸಮರ್ಪಕವಾಗಿ

> ನಿರ್ವಹಿಸಿಕೊಂಡು ಹೋಗಲಾಗುತ್ತದೆಯೋ ಹೇಗೆ ಎಂಬುದನ್ನು ನಿರ್ಣಯಿಸಲು ಯುಕ್ತ ಹಾಗೂ ನ್ಯಾಯಯುತವಾಗಿ ಅವಶ್ಯವಾದ ಮಾಹಿತಿ ಪಡೆಯುವ ಹಕ್ಕು ಈ ಸದನಕ್ಕಿದೆ ಆದರೆ, ಒಂದು ನಿರ್ದಿಷ್ಟ ನಿಗಮದ ಸ್ವಾಯತ್ತತೆಗೆ ಧಕ್ಕೆ ಯಾಗದಂತೆ ನಿಗಮವು ನಿರ್ವಹಿಸುವ ದಿನಿತ್ಯದ ವಿವರಗಳ ಅಥವಾ ಅತೀ ಸಣ್ಣ ಪುಟ್ಟ ವಿವರಗಳ ವಿಷಯದಲ್ಲಿ ಮಧ್ಯೆ ಪ್ರವೇಶ ಮಾಡಬಾರದು"

ಈ ನಿಗಮಗಳ ದಿನನಿತ್ಯದ ಕಾರ್ಯನಿರ್ವಹಣೆ ಬಗ್ಗೆಯಾಗಲೀ ಅಥವಾ ಇನ್ನಾವುದೇ ಸಣ್ಣಪುಟ್ಟ ವಿವರಗಳ ಬಗ್ಗೆಯಾಗಲೀ ಖಂಡಿತವಾಗಿ ಯಾರಿಗೂ ಆಸಕ್ತಿ ಇಲ್ಲ ಎಂಬುದನ್ನು ಇಲ್ಲಿ ಸ್ಪಷ್ಟವಾಗಿ ಹೇಳುತ್ತೇನೆ. ಆದರೆ, ಪ್ರಶ್ನೆ ಏನೆಂದರೆ, ಹೊಣೆಗಾರಿಕೆಯ ಪ್ರಶ್ನೆ. ಕೇವಲ ತಾಂತ್ರಿಕ ಲೆಕ್ಕಚಾರದ ಹೊಣೆಗಾರಿಕೆ ಇದಾದರೆ ಸಾಲದು, ಈ ಹೊಣೆಗಾರಿಕೆ ರಾಜಕೀಯ ಹೊಣೆಗಾರಿಕೆಯಾಗಬೇಕು ಅಥವಾ ಸಂವಿಧಾನಾತ್ಮಕ ಹೊಣೆಗಾರಿಕೆಯಾಗಬೇಕು. ಇದು ಅತ್ಯಂತ ಪ್ರಮುಖವಾದ ವಿಷಯ.

ಇನ್ನು ಇವುಗಳ ಸಂವಿಧಾನಾತ್ಮಕ ಸ್ಥಾನಮಾನಗಳ ಬಗ್ಗೆ ಪರಿಶೀಲಿಸೋಣ. ಗೌರವಾನ್ವಿತ ಈ ಸದನ ಮತ್ತು ಸಾಮಾನ್ಯವಾಗಿ ಈ ಸಂಸತ್ತು ಅನುಮೋದಿಸಿದ ಕಾನೂನುಗಳ ಅಡಿಯಲ್ಲಿ ಸ್ಥಾಪಿತವಾದ ಕೆಲವೇ ಕೆಲವು ನಿಗಮಗಳನ್ನು ಹೊರತುಪಡಿಸಿ, ಉಳಿದಂಥ ಬಹುತೇಕ ಎಲ್ಲಾ ನಿಗಮಗಳು ಮಂತ್ರಿಮಂಡಲದ ನಿರ್ಣಯ ಮೇರೆಗೆ ಸ್ಥಾಪಿತವಾದಂಥವುಗಳೆಂಬುದು ನನ್ನ ಅಭಿಮತ. ಅಂದರೆ ಅವುಗಳು ಕೇವಲ ಕಾರ್ಯಾಂಗ ಕ್ರಮದಿಂದ ಸ್ಥಾಪಿತವಾದವುಗಳು. ಅಂದರೆ, ಸಂಸತ್ತಿನ ಅನುಮತಿಯಿಲ್ಲದೆ, ಕೇವಲ ಕಾರ್ಯಾಂಗ ಕ್ರಮದಿಂದ. ಮಾನ್ಯರೆ, ಈ ಚರ್ಚೆಗೆ ಸಂಬಂಧಿಸಿದಂಥ ಸಂವಿಧಾನದ ಅನುಚ್ಛೇದವನ್ನು ಇಲ್ಲಿ ಉಲ್ಲೇಖಿಸುತ್ತೇನೆ. ಅನುಚ್ಛೇದ 114 (3) ಹೇಳುತ್ತದೆ:

> "ಈ ಅನುಚ್ಛೇದದ ಉಪಬಂಧಗಳ ಪ್ರಕಾರ ಅಂಗೀಕರಿಸಿದ ಕಾನೂನಿನಂತೆ ಮಾಡಲಾದ ಧನವಿನಿಯೋಗದ ಮೇರೆಗೆ ಹಿಂತೆಗೆಯಬಹುದಾದ ಹಣವನ್ನು ಹೊರತುಪಡಿಸಿ, ಯಾವುದೇ ಹಣವನ್ನು ಭಾರತ ಸರ್ಕಾರದ ಸಂಚಿತ ನಿಧಿಯಿಂದ ಹಿಂತೆಗೆಯತಕ್ಕದ್ದಲ್ಲ".

ನಂತರ, ಅಧ್ಯಕ್ಷರೆ, ಅನುಚ್ಛೇದ 266 (3) ಹೇಳುತ್ತದೆ:-

> "ಸಂವಿಧಾನದಲ್ಲಿ ಉಪಬಂಧಿಸಿದ ರೀತಿಯಲ್ಲಿ ಮತ್ತು ಉದ್ದೇಶಗಳಿಗಾಗಿ ಕಾನೂನಿನ ಅನುಸಾರ ವಿನಿಯೋಗಿಸುವುದನ್ನು ಹೊರತುಪಡಿಸಿ, ಯಾವುದೇ

> ಹಣವನ್ನು ಭಾರತ ಸರ್ಕಾರದ ಸಂಚಿತ ನಿಧಿಯಿಂದಾಗಲೀ ಅಥವಾ ರಾಜ್ಯ ಸಂಚಿತ ನಿಧಿಯಿಂದಾಗಲ್ಲಿ ವಿನಿಯೋಗಿಸುವುಂತಿಲ್ಲ".

ಬಹುತೇಕ ನಿಗಮ ಮತ್ತು ಕಂಪನಿಗಳು ಈ ಎರಡು ಅನುಚ್ಛೇದಗಳನ್ನು ಪಾಲಿಸುತ್ತಿಲ್ಲವೆಂಬುದನ್ನು ಎತ್ತಿ ತೋರಿಸುವುದೇ ನನ್ನ ಈ ದಿನದ ಚರ್ಚೆಯ ಮುಖ್ಯ ಉದ್ದೇಶ. ನನ್ನ ಈ ಹೇಳಿಕೆ ಪಕ್ಷಪಾತವಿಲ್ಲದ್ದು. ನಾನು ಹೇಳಿಕೆಗೆ ಬದ್ಧನಾಗಿದ್ದೇನೆ.

ಮಾನ್ಯ ಅಧ್ಯಕ್ಷರೆ, ಅಂದಾಜು ಸಮಿತಿ ಮತ್ತು ಸಾರ್ವಜನಿಕ ಲೆಕ್ಕಪತ್ರಗಳ ಸಮಿತಿಯ ತನಿಖೆಗಳ ಸ್ಥಿತಿ ಏನು ಎಂಬುದನ್ನು ಈಗ ನೋಡೋಣ. ದಾಮೋದರ್ ವ್ಯಾಲಿ ನಿಗಮಕ್ಕೆ ಸಂಬಂಧಪಟ್ಟಂತೆ 1951-52ರ ಅಂದಾಜು ಸಮಿತಿಯ 5ನೇ ವರದಿಯಿಂದ ಉಲ್ಲೇಖಿಸುತ್ತಿದ್ದೇನೆ. ವರದಿಯ 4ನೇ ಪ್ಯಾರಾ ಹೇಳುತ್ತದೆ:

> "ನಿಗಮದ ಪ್ರಸಕ್ತ ಆಡಳಿತ ಮತ್ತು ಆರ್ಥಿಕ ವ್ಯವಸ್ಥೆ ತೀರಾ ಅಸಮರ್ಪಕವಾಗಿದೆ, ಅತಾರ್ಕಿಕವಾಗಿದೆ ಮತ್ತು ಟೀಕೆಗಳಿಗೆ ಒಳಗಾಗುವಂತಾಗಿದೆ ಎಂದು ಸಮಿತಿ ಅಭಿಪ್ರಾಯಪಡುತ್ತದೆ."

ನಂತರ ಸದರಿ ವರದಿಯ ಪ್ಯಾರಾ 105 ರಲ್ಲಿ ಸಮಿತಿಯು ಅಭಿಪ್ರಾಯ ಪಡುತ್ತದೆ:

> "ಇಡೀ ಪರಿಸ್ಥಿತಿಯೇ ತೀರಾ ಅತೃಪ್ತಿಕರವಾಗಿದೆ. ದಾಮೋದರ್ ವ್ಯಾಲಿ ನಿಗಮದ ಸ್ವಾಯತ್ತೆಯ ಸ್ವರೂಪವನ್ನು ಮಿತಿಮೀರಿ ಉಪಯೋಗಿಸಿಕೊಳ್ಳಲಾಗಿದೆ. ದಾಮೋದರ್ ವ್ಯಾಲಿ ನಿಗಮವು ತನ್ನ ಸ್ವಾಯತ್ತತೆ ಬಗ್ಗೆ ಅಸಂಬದ್ಧ ದೃಷ್ಟಿಕೋನವನ್ನು ಬೆಳೆಸಿಕೊಂಡಿದ್ದು ಸರ್ಕಾರದ ಸಲಹೆ ಸೂಚನೆ ಹಾಗೂ ಅದರ ಅಧಿಕಾರಗಳನ್ನು ಉಪೇಕ್ಷಿಸಲು ಪ್ರಯತ್ನ ಮಾಡಿದೆ. ಇದಕ್ಕೆ ಪ್ರತಿಯಾಗಿ ಸರ್ಕಾರ ತನಗೆ ಪ್ರದತ್ತವಾದ ಅಧಿಕಾರದಿಂದ ಇದನ್ನು ಹದ್ದುಬಸ್ತಿನಲ್ಲಿಡಲು ಶಕ್ತವಾದರೂ, ವಿಫಲವಾಗಿದೆ.

ಅಂದಾಜು ಸಮತಿಯು ವರದಿ ನೀಡಿದ ನಂತರ ಏನಾಯಿತು? ಸಂಬಂಧಪಟ್ಟ ಮಂತ್ರಾಲಯವು ಶ್ರೀ ಪಿ.ಎಸ್. ರಾವ್ ಅವರ ಅಧ್ಯಕ್ಷತೆಯಲ್ಲಿ ಒಂದು ಅಡ್‌ಹಾಕ್ ಸಮಿತಿಯನ್ನು ರಚಿಸಿತು. ಜುಲೈ 14 ರಂದು ಬಹುತೇಕ ವಾರ್ತಾಪತ್ರಿಕೆಗಳಲ್ಲಿ ಪ್ರಕಟವಾದ ಈ ಕುರಿತ ಹೇಳಿಕೆ ನನ್ನ ಬಳಿ ಇದೆ. ಆರ್ಥಿಕ ಶಿಸ್ತು ಮತ್ತು ದಕ್ಷತೆಯನ್ನು ಜಾರಿಗೊಳಿಸುವ ಹಾಗೂ ಆರ್ಥಿಕ ನಿಯಂತ್ರಣಗಳನ್ನು ಚಲಾಯಿಸುವಂಥ ಅಧಿಕಾರ ಪಡೆದಿರುವ ಸದನದ ಅಂದಾಜು ಸಮಿತಿಯು ಒಂದು ಅಂದಾಜು ಶಾಸನಾತ್ಮಕ ಅಂಗ. ಹೀಗಿದ್ದರೂ, ಈ ಗೌರವಾನ್ವಿತ

ಸದನಕ್ಕೆ ಅದು ವರದಿಯನ್ನು ಸಲ್ಲಿಸಿದ ನಂತರ ಅಧಿಕಾರಿಗಳ ಒಂದು ಸಣ್ಣ ಸಮಿತಿಯನ್ನು ರಚಿಸಲಾಯಿತು. ಈ ಅಡ್‌ಹಾಕ್ ಸಮಿತಿ ನೀಡಿದ ನಿರ್ಣಯ ಹಾಗೂ ಅದರ ಸವಾಲು ಹೀಗಿವೆ. ಅದನ್ನು ನಾನು ಉಲ್ಲೇಖಿಸುತ್ತಿದ್ದೇನೆ:

> "ನದೀ ಕಣಿವೆ ಯೋಜನೆಗಳ ಉಸ್ತುವಾರಿ ಹೊತ್ತಿರುವಂಥ ಶಾಸನಾತ್ಮಕ ನಿಗಮಗಳನ್ನು ಸಂಪೂರ್ಣವಾಗಿ ಸಂಸದೀಯ ನಿಯಂತ್ರಣಕ್ಕೊಳಪಡಿಸಿರುವುದು, ಸರ್ಕಾರಿ ಇಲಾಖೆಗಳು ಎಷ್ಟೋ ಮೇಲು ಇವು ಕೆಟ್ಟವು ಎನ್ನುವಂಥ ಭಾವನೆಗೆ ಆಸ್ಪದ ಕೊಟ್ಟಂತಾಗಿದೆ.

ಮಾನ್ಯ ಅಧ್ಯಕ್ಷರೆ, ಈ ದಿನದ ಚರ್ಚೆಗೆ ಅತೀ ಮುಖ್ಯವೆಂದು ನಾನು ಭಾವಿಸಿರುವ ಸಾರ್ವಜನಿಕ ಲೆಕ್ಕಪತ್ರ ಸಮಿತಿಯು ಗಮನಿಸಿದಂಥ ಮೂರು ಉದ್ಧೃತ ಭಾಗಗಳನ್ನು ತಮ್ಮ ಅನುಮತಿಯೊಂದಿಗೆ ಇಲ್ಲಿ ಓದುತ್ತೇನೆ. 1950-51ರ ಸಾರ್ವಜನಿಕ ಲೆಕ್ಕಪತ್ರ ಸಮಿತಿ ವರದಿಯ 7ನೇ ಪ್ಯಾರಾದಲ್ಲಿ ಹೇಳಿರುವುದನ್ನು ಉಲ್ಲೇಖಿಸುತ್ತೇನೆ:

> "ಸಾಕಷ್ಟು ಯೋಜನೆಯನ್ನು ರೂಪಿಸಿ ಅಥವಾ ಆಡಳಿತ ಅಥವಾ ಲೆಕ್ಕಪತ್ರಗಳ ನಿರ್ವಹಣೆಗೆ ಸಂಬಂಧಿಸಿದಂತೆ ಪ್ರಾರಂಭಿಕ ಅಥವಾ ಕ್ರಮಬದ್ಧವಾದ ತಾಂತ್ರಿಕ ಸಿಬ್ಬಂದಿಯನ್ನು ಒದಗಿಸದೆ ಎಲ್ಲಾ ರೀತಿಯ ಯೋಜನೆಗಳನ್ನು ಪ್ರಾರಂಭಿಸುವ ಪ್ರವೃತ್ತಿ ಸರ್ಕಾರಕ್ಕಿರುವುದನ್ನು ನಾವು ಗಮನಿಸಿದ್ದೇವೆ. ಈ ಪ್ರವೃತ್ತಿ ತದನಂತರ ಗೊಂದಲಕ್ಕೆ ಎಡೆ ಮಾಡಿಕೊಡುತ್ತದೆ. ವಾಣಿಜ್ಯ ಲೆಕ್ಕಪದ್ಧತಿ ನಿಯಮಗಳ ಬಗ್ಗೆ ಸರಿಯಾದ ಜ್ಞಾನ ಇಲ್ಲದಿರುವುದು ಈ ಗೊಂದಲವನ್ನು ಮತ್ತಷ್ಟು ಉಲ್ಬಣಗೊಳಿಸಿದೆ".

ಸದರಿ ವರದಿಯ 8ನೇ ಪ್ಯಾರಾದಲ್ಲಿ, ಸಾರ್ವಜನಿಕ ಲೆಕ್ಕಪತ್ರ ಸಮಿತಿಯು ನೀಡಿರುವ ಹೇಳಿಕೆಯನ್ನು ಇಲ್ಲಿ ಉಲ್ಲೇಖಿಸುತ್ತೇನೆ:

> "ನಿಗಮವನ್ನು ಸ್ಥಾಪಿಸಲು ಅವಕಾಶ ಮಾಡಿಕೊಡುವ ಶಾಸನದಲ್ಲಿಯೇ ಕಂಟ್ರೋಲರ್ ಮತ್ತು ಆಡಿಟರ್ ಜನರಲ್‌ರವರ ಕರ್ತವ್ಯಗಳು ಮತ್ತು ಜವಾಬ್ದಾರಿಗಳನ್ನು ಸ್ಪಷ್ಟವಾಗಿ ನಮೂದಿಸಬೇಕೆಂದು ಅಭಿಪ್ರಾಯ ಪಟ್ಟಿರುವ ಕಂಟ್ರೋಲರ್ ಮತ್ತು ಆಡಿಟರ್ ಜನರಲ್ ಅಭಿಪ್ರಾಯಕ್ಕೆ ನಮ್ಮ ಸಹಮತಿಯಿದೆ".

ನಂತರ, ಮಾನ್ಯ ಅಧ್ಯಕ್ಷರೆ, 1952-53ರ ಸಾರ್ವಜನಿಕ ಲೆಕ್ಕಪತ್ರ ಸಮಿತಿಯ ಮೂರನೇ ವರದಿಯು ಬರುತ್ತದೆ. ವಾಸ್ತವವಾಗಿ ಈ ವರದಿಯು ಉಪಸಮಿತಿಯ ವರದಿಯಾಗಿದ್ದು ಆ ಉಪ ಸಮಿತಿಗೆ ನನ್ನ ಸ್ನೇಹಿತರಾದ ಮಾನ್ಯ ಶ್ರೀ ಆಚಾರ್ಯ ಅಗರವಾಲ ಅವರು ಅಧ್ಯಕ್ಷರಾಗಿದ್ದಾರೆ. ಸದರಿ ವರದಿಯನ್ನು ಸಾರ್ವಜನಿಕ ಲೆಕ್ಕಪತ್ರ ಸಮಿತಿಯ ಅಧ್ಯಕ್ಷರು ಒಪ್ಪಿ ಬೆಂಬಲಿಸಿದ್ದಾರೆ. ಅವರು ಏನು ಹೇಳಿದ್ದಾರೆಂದರೆ:

> "ರಾಷ್ಟ್ರಾಧ್ಯಕ್ಷರು ಮತ್ತು ಒಬ್ಬರು ಅಥವಾ ಹೆಚ್ಚು ಅಧಿಕಾರಿಗಳು ಷೇರುದಾರರಾಗಿರುವಂಥ ಸರ್ಕಾರೀ ಕೈಗಾರಿಕಾ ಉದ್ಯಮಗಳನ್ನು ಖಾಸಗೀ ನಿಯಮಿತ ಕಂಪನಿಗಳನ್ನಾಗಿ ಪರಿವರ್ತಿಸುವ ಸರ್ಕಾರದ ಕ್ರಮದ ಸಂವಿಧಾನಾತ್ಮಕ ಔಚಿತ್ಯದ ಬಗ್ಗೆ ಈ ಉಪ ಸಮಿತಿಯು ಸಂದೇಹ ವ್ಯಕ್ತಪಡಿಸುತ್ತದೆ. ಅಂಥ ಕ್ರಮ ಸಂಸದೀಯ ನಿಯಂತ್ರಣದ ದಿಕ್ಕು ತಪ್ಪಿಸುವುದಲ್ಲದೆ, ಸಂಸತ್ತಿನ ಪರವಾಗಿ ಅತೀ ಅವಶ್ಯವೆಂದು ಉಪ ಸಮಿತಿಯು ಪರಿಗಣಿಸಿರುವ ಕಂಟ್ರೋಲರ್ ಮತ್ತು ಆಡಿಟರ್ ಜನರಲ್‌ರವರ ಲೆಕ್ಕಪರಿಶೋಧನಾ ನಿಯಂತ್ರಣದ ಮೇಲೂ ಪರಿಣಾಮ ಬೀರುತ್ತದೆ".

ಕೊನೆಯದಾಗಿ ಈ ನಿಗಮ ಮತ್ತು ಮಂಡಲಿಯ ಕಾರ್ಯ ನಿರ್ವಹಣೆಯ ರೀತಿಯ ಬಗ್ಗೆ ಸ್ವತಃ ಕಂಟ್ರೋಲರ್ ಮತ್ತು ಆಡಿಟರ್ ಜನರಲ್‌ರವರೇ ಮಾಡಿರುವ ಗಂಭೀರ ಸ್ವರೂಪದ ಆರೋಪ (ಅಂತಿಮ ಪ್ರಹಾರ) ಇಲ್ಲಿದೆ. 1952 ಡಿಸೆಂಬರ್ 13 ರಂದು, ಸಾರ್ವಜನಿಕ ಲೆಕ್ಕಪತ್ರಗಳ ಉಪ ಸಮಿತಿಗೆ ನೀಡಿರುವ, ಕಂಟ್ರೋಲರ್ ಮತ್ತು ಆಡಿಟರ್ ಜನರಲ್‌ರವರ ಹೇಳಿಕೆಯನ್ನು ಸಾರ್ವಜನಿಕ ಲೆಕ್ಕಪತ್ರಗಳ ಮುಖ್ಯ ಸಮಿತಿಯ ವರದಿಗೆ ಸೇರಿಸಿಕೊಂಡಿದ್ದು, ಅದನ್ನು ಇಲ್ಲಿ ಉದಾಹರಿಸುತ್ತಿದ್ದೇನೆ. ನನ್ನ ಇಡೀ ವಾದವು ನಾನು ಉದಾಹರಿಸುತ್ತಿರುವ ಈ ನಿರ್ದಿಷ್ಟ ಉದ್ಧೃತ ಭಾಗವನ್ನು ಅವಲಂಬಿಸಿರುವುದರಿಂದ, ಅತೀ ಮುಖ್ಯವಾದ ಈ ಉದ್ಧೃತ ಭಾಗವನ್ನು ಕೇಳುವ ಸಹನೆಯನ್ನು ಈ ಸದನ ತೋರಿಸಬೇಕೆಂದು ವಿನಂತಿಸುತ್ತೇನೆ:

> "ರಾಷ್ಟ್ರಾಧ್ಯಕ್ಷರ ಅಥವಾ ಸರ್ಕಾರದ ಕಾರ್ಯದರ್ಶಿಯವರ ಹೆಸರುಗಳಲ್ಲಿ ಕೆಲವು ಸಂಸ್ಥೆಗಳನ್ನು ಖಾಸಗೀಕರಿಸಲು ಅಥವಾ ಖಾಸಗೀ ಸಂಸ್ಥೆಗಳೆಂದು ಸ್ಥಾಪಿಸಲು ಸಂಚಿತ ನಿಧಿಯಿಂದ ಹಣವನ್ನು ಹೊರತೆಗೆಯುವುದು ಅಸಾಧ್ಯರಾಗಿರುವುದರಿಂದ ಈ "ಖಾಸಗೀ ನಿಯಮಿತ" ಕಂಪನಿಗಳು ಹೇಳುವುದೇ ಕಂಪನಿ ಅಧಿನಿಯಮಕ್ಕೆ ಹಾಗೂ ಸಂವಿಧಾನಕ್ಕೆ ಬಗೆದ ಅಪಚಾರ ಎನ್ನುವುದು ನನ್ನ ಅಭಿಪ್ರಾಯ. ಕಂಪನಿಗಳ ಅಧಿನಿಯಮದಡಿಯಲ್ಲಿ ವ್ಯಕ್ತಿಗಳ

> ಒಂದು ಸಮೂಹ ಒಂದು ಕಂಪನಿಯನ್ನು ಸ್ಥಾಪಿಸಬಹುದು. ರಾಷ್ಟ್ರಾಧ್ಯಕ್ಷ ಅಥವಾ ಸರ್ಕಾರದ ಕಾರ್ಯದರ್ಶಿಗಳು ಒಬ್ಬ ವ್ಯಕ್ತಿಯಲ್ಲ. ಈ ಅಧಿಕಾರಿಗಳಿಗೆ ಕಂಪನಿಯ ಆರ್ಥಿಕ ಓತಾಸಕ್ತಿಯಲ್ಲಿ ಯಾವುದೇ ರೀತಿಯ ವ್ಯಕ್ತಿಗತ ಆಸಕ್ತಿ ಇರುವುದಿಲ್ಲ. ಕಂಪನಿ ಎನ್ನುವ ಪದದ ನಿಜಾರ್ಥದಲ್ಲಿ ಇವರ ಸಮೂಹದಿಂದಾದ ಕಂಪನಿ ರಚನೆ, ಕಂಪನಿ ರಚನೆ ಎಂದೆನಿಸಿಕೊಳ್ಳುವುದಿಲ್ಲ. ಕೇವಲ ಕಾರ್ಯಾಂಗ ಒಂದರಿಂದಲೇ ಸರ್ಕಾರೀ ಸಂಸ್ಥೆಯನ್ನು ಖಾಸಗೀ ಸಂಸ್ಥೆ ಎಂದು ಪರಿವರ್ತಿಸುವುದು ಸಂವಿಧಾನ ವಿರೋಧಿಯಾಗುತ್ತದೆ. ಕೈಗಾರಿಕೆ ಮತ್ತು ವಾಣಿಜ್ಯ ಸಂಸ್ಥೆಗಳ ನಿರ್ವಹಣೆಯು ದಿನನಿತ್ಯದ ಸಾಮಾನ್ಯ ಆಡಳಿತ ಕಾರ್ಯ ಚಟುವಟಿಕೆಗಳಿಗಿಂತ ಭಿನ್ನವೆಂದು ಮಾನ್ಯತೆ ಮಾಡಿ, ತೀವ್ರಗತಿಯ ವ್ಯವಹಾರಗಳ ನಿರ್ವಹಣೆಗನುಸಾರವಾಗಿ ವಿಶೇಷ ಸಂಸ್ಥೆ ಮತ್ತು ಅಧಿಕಾರ ನಿಯೋಜನೆಯ ಅವಶ್ಯವೆಂದು ಸರ್ಕಾರಕ್ಕೆ ಮನವರಿಕೆಯಾದಾಗ, ನಿಗಮಗಳನ್ನು ಸ್ಥಾಪಿಸುವಲ್ಲಿ ಸರ್ಕಾರಕ್ಕೆ ಸಂಸತ್ತಿನಿಂದ ಅಂಗೀಕಾರವಾದ ಕಾನೂನಿನ ಬೆಂಬಲ ಬೇಕಾಗುತ್ತದೆ".

ಇಲ್ಲಿ ಮತ್ತೊಂದು ಅಂಶ ಅಡಗಿದ್ದು, ಅದು ಕಂಟ್ರೋಲರ್ ಮತ್ತು ಆಡಿಟರ್ ಜನರಲ್‌ರವರ ಹೇಳಿಕೆಯ ಭಾಗವಾಗಿದೆ. ಅದು ಈ ಕೆಳಕಂಡಂತಿದೆ:-

> "ಖಾಸಗೀ ಸಂಸ್ಥೆಯನ್ನು ಸ್ಥಾಪಿಸುವ ಪ್ರಕ್ರಿಯೆಯಲ್ಲಿ ಮತ್ತೊಂದು ಮುಖ್ಯವಾದ ಅಂಶ ಒಳಗೊಂಡಿದೆ. ಭಾರತೀಯ ಕಂಪನಿಗಳ ಅಧಿನಿಯಮದ ಅಡಿಯಲ್ಲಿ ಖಾಸಗೀ ಸಂಸ್ಥೆಗಳ ಲೆಕ್ಕಪತ್ರ ಪರಿಶೋಧನೆಯನ್ನು ನಿರ್ದೇಶಕ ಮಂಡಲಿಯು ನಾಮ ನಿರ್ದೇಶನ ಮಾಡಿದ ಲೆಕ್ಕಪರಿಶೋಧಕರು ಮಾಡಬೇಕಾಗುತ್ತದೆ. ಆದ್ದರಿಂದ, ಇಂಥ ಸಂಸ್ಥೆಯ ಲೆಕ್ಕ ಪರಿಶೋಧನೆ ಮಾಡುವ ಯಾವುದೇ ರೀತಿಯ ಸ್ವಯಂ ಪ್ರೇರಿತ ಹಕ್ಕು ಕಂಟ್ರೋಲರ್ ಮತ್ತು ಆಡಿಟರ್ ಜನರಲ್ ರವರಿಗೆ ಇರುವುದಿಲ್ಲ. ಹೀಗಾಗಿ, ಅವರಿಗೆ ಇರುವ ಲೆಕ್ಕಪರಿಶೋಧನಾ ನಿಯಂತ್ರಣವನ್ನು ಕಿತ್ತು ಹಾಕಲಾಗಿದೆಯೆಂದು ವಾದ ಮಾಡುವ ಸಾಧ್ಯತೆಯೂ ಇದೆ".
>
> "ಅಗತ್ಯವಿದ್ದಲ್ಲಿ, ಸಂಸ್ಥೆಯ ನಿಯಮಾವಳಿಗೆ ಸೂಕ್ತ ಉಪಬಂಧಗಳನ್ನು ಕಲ್ಪಿಸಿ, ಅವರನ್ನು ಕಂಪನಿಯ ಲೆಕ್ಕಪರಿಶೋಧಕರಾಗುವಂತೆ ವಿನಂತಿಸಬಹುದೆಂಬುದು ನಿಜ. ಆದರೆ, ಇದು ..........". ಕಂಟ್ರೋಲರ್ ಮತ್ತು ಆಡಿಟರ್ ಜನರಲ್‌ರವರ ಕರ್ತವ್ಯ ಮತ್ತು ಪ್ರಕಾರ್ಯಗಳನ್ನು ಸಂಸತ್ತು ನಿಗದಿಪಡಿಸಿರುವುದರಿಂದ ಇದು ಸೂಕ್ತವೂ ಅಲ್ಲ ಹಾಗೂ ಇದಕ್ಕೆ ಅವರು ಬದ್ಧರಾಗಬೇಕಾಗಿಲ್ಲ. ಒಂದು ಕಂಪನಿಯ ನಿಯಮಾವಳಿಗಳಿಂದ ಅವುಗಳನ್ನು

> ನಿಯಂತ್ರಿಸುವುದೂ ಸಾಧ್ಯವಿಲ್ಲ. ಇಷ್ಟಾದರೂ, ಅವರು ಫೀ ಪಡೆದು "ಒಪ್ಪಿಗೆ" ಆಧಾರದ ಮೇಲೆ ಲೆಕ್ಕ ಪರಿಶೋಧನಾ ಕಾರ್ಯವನ್ನು ಕೈಗೆತ್ತಿಕೊಂಡಲ್ಲಿ, ಲೆಕ್ಕಪರಿಶೋಧನಾ ವರದಿಯನ್ನು ಅವರು ಕಂಪನಿಗೆ ಸಲ್ಲಿಸಬೇಕೇ ವಿನಃ ಅಧ್ಯಕ್ಷರ ಮುಖಾಂತರ ಈ ಸದನಕ್ಕಲ್ಲ. ಅಂಥ ಯಾವುದೇ ಕಂಪನಿಯ ಹಣಕಾಸಿನ ಸ್ಥಿತಿಗತಿ ಹಾಗೂ ನಿರ್ವಹಣೆಯ ಕ್ರಮಬದ್ಧತೆಯ ಬಗ್ಗೆ ಈ ಸಂಸತ್ತು ಸಾರ್ವಜನಿಕ ಲೆಕ್ಕಪತ್ರ ಸಮಿತಿಯ ಮುಖಾಂತರ ನಿಗಾ ವಹಿಸಬೇಕಾಗಿಲ್ಲ. ಸರ್ಕಾರದ ಷೇರು ಬಂಡವಾಳವನ್ನು ಸಾಕಷ್ಟು ಪ್ರಮಾಣದಲ್ಲಿ ಹೊಂದಿರುವಂಥ ಅಥವಾ ನಷ್ಟಗಳಿಗೆ ಖಾತರಿಯನ್ನು ಪಡೆದಂಥ ಖಾಸಗೀ ಕಂಪನಿಗಳ ರೂಪದಲ್ಲಿರುವ ಸಂಸ್ಥೆಗಳಿಗೂ ಈ ಅಭಿಪ್ರಾಯಗಳು ಅನ್ವಯವಾಗುತ್ತವೆ".

ಅಂತಿಮವಾಗಿ, ಮಾನ್ಯ ಅಧ್ಯಕ್ಷರೇ, ಆಡಿಟರ್ ಜನರಲ್‌ರವರು ಹೇಳುತ್ತಾರೆ:

> "ಈ ಪ್ರಕರಣಗಳಲ್ಲಿ ಅನುಸರಿಸಲಾದ ಇಡೀ ಪ್ರಕ್ರಿಯೆ ಸಂವಿಧಾನ ಬಾಹಿರ ಮತ್ತು ಅಸಿಂಧುವೆಂದು ನಾನು ಪರಿಗಣಿಸುತ್ತೇನೆ. ನಿಧಿಗಳನ್ನು ಅನುಚಿತವಾಗಿ ಮಾರ್ಗಪಲ್ಲಟ ಮಾಡಿರುವವರು ನನ್ನ ಲೆಕ್ಕಪರಿಶೋಧನಾ ಪರಿಶೀಲನೆಯಿಂದ ನುಣಿಚಿಕೊಳ್ಳಬಾರದೆಂಬ ಕಾರಣದಿಂದ ಕಂಪನಿಯ ಲೆಕ್ಕಪತ್ರಗಳನ್ನು ಪರಿಶೀಲನೆ ಮಾಡುವ ಅಧಿಕಾರ ನನಗಿದೆಯೆಂದು ನಿರ್ಣಯಿಸುತ್ತೇನೆ".

ಮಾರ್ಗಪಲ್ಲಟವು ಭಾರತೀಯ ಸಂಚಿತ ನಿಧಿಯಿಂದ ಆಗಿದ್ದು, ಮುಂದೆ ಅವರು ಹೇಳುತ್ತಾರೆ:

> "ಕಾರ್ಯಾಂಗ ಕ್ರಮದಿಂದ ಇಂಥ ಕಂಪನಿಗಳ ಸ್ಥಾಪನೆಯನ್ನು ಯು.ಎಸ್.ಎ. ರಾಷ್ಟ್ರದಲ್ಲಿ ಸ್ಪಷ್ಟವಾಗಿ ನಿಷೇಧಿಸಿದ್ದು, ಇಂಥ ವಿಷಯದಲ್ಲಿ ಅಲ್ಲಿಯ ಕಾಂಗ್ರೆಸ್ ನಿರ್ದಿಷ್ಟವಾಗಿ ಶಾಸನ ಮಾಡಬೇಕಾಗುವುದೆಂದು ನಾನು ಹೇಳಲು ಇಚ್ಛಿಸುತ್ತೇನೆ"

ನಾನು ಈ ಮೊದಲೇ ಹೇಳಿದಂತೆ ಇದು, ಭಾರತದಲ್ಲಿರುವ ಸಾರ್ವಜನಿಕ ನಿಗಮಗಳು ಮತ್ತು ಕಂಪನಿಗಳಕಾರ್ಯ ಚಟುವಟಿಕೆ ಮತ್ತು ನಿರ್ವಹಣೆಗಳಿಗೆ ಸಂಬಂಧಪಟ್ಟಂತೆ ಗುಲ್ಲೆಬ್ಬಿಸುವಂಥ ವಿವಾದ ಅಥವಾ ವಸ್ತು ಸ್ಥಿತಿ.

ಇಂಗ್ಲೇಂಡ್ ದೇಶ ರಾಷ್ಟ್ರೀಕರಣಕ್ಕೆ ಬದ್ಧವಾದಾಗಿನಿಂದಲೂ, ಹಾಗೆಯೇ ಲೇಬರ್ ಸರ್ಕಾರದ ರಾಷ್ಟ್ರೀಯ ನೀತಿಯಲ್ಲಿ ರಾಷ್ಟ್ರೀಕರಣ ಪ್ರಧಾನ ಅಂಶವಾಗಿ ಪರಿಣಮಿಸುವುದಕ್ಕಿಂತಲೂ ಮೊದಲು, ಈ ವಿಷಯಗಳಲ್ಲಿ ಅಲ್ಲಿಯ ಸಂಸತ್ತು ಸಾಕಷ್ಟು ಅನುಭವಗಳನ್ನು ಗಳಿಸಿತ್ತು. ಹೀಗಾಗಿ 1951ರ ಡಿಸೆಂಬರ್‌ನಲ್ಲಿ ರಾಷ್ಟ್ರೀಕೃತ ಕೈಗಾರಿಕೆಗಳ ಸಮಸ್ಯೆ ಬಗ್ಗೆ ತನಿಖೆ ನಡೆಸಲು ಒಂದು ಪರಿಶೀಲನಾ ಸಮಿತಿಯನ್ನು ಬ್ರಿಟಿಷ್ ಸಂಸತ್ತು

ನೇಮಿಸಿತು. ಈ ಸಮಿತಿ ಎರಡು ವರದಿಗಳನ್ನು ಸಲ್ಲಿಸಿತು. ಪ್ರಸ್ತುತ ಉದ್ದೇಶಕ್ಕೆ ಸಂಬಂಧಪಟ್ಟಂತೆ ಹಾಗೂ ಅತೀ ಮುಖ್ಯವಾದ ಎರಡನೇ ವರದಿಯು ಒಂದು ಶಿಫಾರಸನ್ನು ಮಾಡಿತು. ಅದೇನೆಂದರೆ, ರಾಷ್ಟ್ರೀಕೃತ ಕೈಗಾರಿಕೆಗಳನ್ನು ನಡೆಸುತ್ತಿರುವ ಬ್ರಿಟನ್ನಿನ ಸಾರ್ವಜನಿಕ ನಿಗಮಗಳ ಹಿಂದಿನ ಮತ್ತು ಇಂದಿನ ಆರ್ಥಿಕ ಸದೃಢತೆ ಮತ್ತು ಪ್ರಾಮಾಣಿಕತೆಗಳ ಜೊತೆಗೆ ಮುಂದಿನ ಯೋಜನೆ ಮತ್ತು ಕಾರ್ಯಕ್ರಮಗಳ ಬಗ್ಗೆ (ಅಂದರೆ ಹಿಂದೆ ನಿರ್ವಹಿಸಲಾದ ಹಾಗೂ ಮುಂದೆ ನಿರ್ವಹಿಸಬಹುದಾದವುಗಳ) ತನಿಖೆ ನಡೆಸುವ ಕಾರ್ಯ ಮತ್ತು ಅಧಿಕಾರಗಳನ್ನು ಹೊಂದಿರುವ ಸಂಸತ್ತಿನ ಒಂದು ಶಾಶ್ವತ ಸಮಿತಿಯನ್ನು ರಚಿಸಬೇಕು. ಅನಂತರ, ಮಾನ್ಯರೆ, ಬ್ರಿಟನ್ ಸಂಸತ್ತಿನ ಪರಿಶೀಲನಾ ಸಮಿತಿಯು ಶಿಫಾರಸು ಮಾಡಿದ್ದೇನೆಂದರೆ, ಈ ರಾಷ್ಟ್ರೀಕೃತ ಕೈಗಾರಿಕೆಗಳ ಲೆಕ್ಕಪತ್ರಗಳನ್ನು ಪರಿಶೀಲಿಸುವ ಸಾರ್ವಜನಿಕ ಲೆಕ್ಕಪತ್ರಗಳ ಸಮಿತಿಯ ಕಾರ್ಯವನ್ನು ಸಂಸತ್ತಿನ ಒಂದು ಹೊಸ ಸಂಸ್ಥೆಯನ್ನು ಸ್ಥಾಪಿಸಿ ಅದಕ್ಕೆ ವಹಿಸಿ ಕೊಡಬೇಕು. ಅದು ಪುನಃ ಸಲಹೆ ಮಾಡುತ್ತದೆ................. ರಾಷ್ಟ್ರೀಕೃತ ಕೈಗಾರಿಕೆಗಳ ಮೇಲಿನ ಉದ್ದೇಶಿತ ಪರಿಶೀಲನಾ ಸಮಿತಿಯು ಕಂಟ್ರೋಲರ್ ಮತ್ತು ಆಡಿಟರ್ ಜನರಲ್ ಹುದ್ದೆಯ ಸ್ಥಾನಮಾನ ಹೊಂದಿದ ಒಬ್ಬ ವ್ಯಕ್ತಿ ಮತ್ತು ಕಡೆಯಪಕ್ಷ ಒಬ್ಬ ವೃತ್ತಿನಿರತ ಲೆಕ್ಕಾಧಿಕಾರಿಯನ್ನು ಹೊಂದಿರಬೇಕು. ಈ ಪರಿಶೀಲನಾ ಸಮಿತಿಯ ಶಿಫಾರಸಿನ ಮೇರೆಗೆ ಪ್ರತಿಯೊಂದು ನಿಗಮವೂ, ಅದು ಸ್ಥಾಪನೆಯಾದ ದಿನದಿಂದ ಉತ್ಪಾದಿಸಿದ ಉತ್ಪನ್ನಗಳ ಅಥವಾ ಪಡೆದಂಥ ಸೇವೆಗಳಿಂದ ಗ್ರಾಹಕನಿಗೆ ತಗಲಿರಬಹುದಾದ ಒಟ್ಟಾರೆ ದರದ ಸರಾಸರಿ ಶೇಕಡಾವಾರು ಹೆಚ್ಚಳ ಅಥವಾ ಇಳಿಕೆಯ ಬಗ್ಗೆ ಅದು ಸಾಧ್ಯವಾದ ಮಟ್ಟಿಗೆ ಒಂದು ಉತ್ತಮ ಅಂದಾಜನ್ನು ಒಳಗೊಂಡ ವಾರ್ಷಿಕ ವರದಿಗಳನ್ನು ಪ್ರಕಟಿಸಬೇಕಾಗುತ್ತದೆ.

ಯು.ಕೆ. ಯಲ್ಲಿರುವ ಪರಿಸ್ಥಿತಿಯ ಒಟ್ಟಾರೆ ಸಾರಾಂಶ ಇಲ್ಲಿದೆ. ಇನ್ನೂ ಒಂದು ಅಂಶವನ್ನು ಇಲ್ಲಿ ಹೇಳಲು ನಾನು ಇಚ್ಛಿಸುತ್ತೇನೆ. ಭಾರತ ದೇಶದಲ್ಲಿರುವ ಪ್ರತಿಯೊಂದು ನಿಗಮವೂ ಅದು ರಕ್ಷಣಾ ಮಂತ್ರಾಲಯಕ್ಕೆ ಸೇರಿರಲಿ, ಉತ್ಪಾದನಾ ಮಂತ್ರಾಲಯದ್ದೇ ಆಗಿರಲಿ ಅಥವಾ ಇನ್ಯಾವುದೇ ಮಂತ್ರಾಲಯದ್ದಿರಲಿ, ಅದು ಏಕಾಧಿಕಾರ ಸಂಸ್ಥೆಯಾಗಿ ಪರಿಣಮಿಸಿದೆ. ಸಿಂದ್ರಿಯಲ್ಲಿ ರಸ ಗೊಬ್ಬರವನ್ನು ತಯಾರಿಸುವುದೇ ಆಗಿರಲಿ, ವಿಶಾಖಪಟ್ಟಣದ ನೌಕಾಂಗಣದಲ್ಲಿ ನೌಕೆಗಳನ್ನು ನಿರ್ಮಿಸುವುದೇ ಆಗಿರಲಿ ಅಥವಾ ಬೆಂಗಳೂರಿನಲ್ಲಿ ದೂರವಾಣಿಗಳನ್ನು ತಯಾರಿಸುವುದೇ ಆಗಿರಲಿ ಅಥವಾ ದೇಶದ ವಿವಿಧ ಆಯುಧ ಕಾರ್ಖಾನೆಗಳಲ್ಲಿ ಆಯುಧಗಳನ್ನು ತಯಾರಿಸುವುದೇ ಆಗಿರಲಿ ಇವುಗಳಿಗೆ ಸ್ಪರ್ಧೆಯೇ ಇಲ್ಲದೆ ಏಕಾಧಿಕಾರ ಸಂಸ್ಥೆಗಳಾಗಿವೆ. ಇಲ್ಲಿ ಸ್ಪರ್ಧೆಯೇ ಸಂಪೂರ್ಣವಾಗಿ ಇಲ್ಲದಿರುವುದರಿಂದ ಗ್ರಾಹಕನ ಹಿತರಕ್ಷಣೆಯನ್ನೇ ಮರೆಯಲಾಗಿದೆ. ಪ್ರತಿಯೊಬ್ಬನೂ ಯಾರೂ ಕೇಳದಂಥ ಸಣ್ಣ ಸಂಸ್ಥಾನಗಳ ಸಾಮ್ರಾಜ್ಯದ ಅಧಿಪತಿಯಾಗಿದ್ದಾನೆ, ವ್ಯವಸ್ಥಾಪಕ ನಿರ್ದೇಶಕ ಅಥವಾ ಅಧ್ಯಕ್ಷರಾದಂಥ ವ್ಯಕ್ತಿಯ ದೊರೆತನಕ್ಕೆ ಎಲ್ಲವನ್ನೂ ಅರ್ಪಿಸಲಾಗಿದೆ. ಈ ಅಧಿಕಾರಿಗಳಿಗೆ ಸಂಬಂಧಪಟ್ಟಂತೆ, ಯಾರ ಬಗ್ಗೆಯೂ ನನಗೆ ಅಸಮಾಧಾನವಿಲ್ಲ. ಆದರೆ, ರಾಷ್ಟ್ರದ ಹಿತಾಸಕ್ತಿಯ

ದೃಷ್ಟಿಯಿಂದ (ಎ) ಮಂತ್ರಿಗಳು ಇಡಬೇಕಾದ ನಿಯಂತ್ರಣ ಪರಿಣಾಮಕಾರಿಯಾಗಿರಬೇಕು. ಹಾಗೆಯೇ ನನ್ನ ಸ್ವಂತ ಅನುಭವದಿಂದ ಹೇಳುವುದಾದರೆ ಷಿಪ್‌ಯಾರ್ಡ್‌ನ ಬಗ್ಗೆ ಏನಾಗಬೇಕಿತ್ತೋ ಅದಾಗುತ್ತಿಲ್ಲ ಹಾಗೂ (ಬಿ) ಈ ಸದನಕ್ಕಿರುವ ಪರಮಾಧಿಕಾರವನ್ನು ಕಾಪಾಡಿಕೊಂಡು ಬರಲು ಕೂಡಲೇ ಏನನ್ನಾದರೂ ಮಾಡಬೇಕಾಗಿದೆ.

ನನ್ನ ಮಾತುಗಳನ್ನು ಮುಗಿಸುವುದಕ್ಕೂ ಮೊದಲು ತಮ್ಮ ಅನುಮತಿಯೊಂದಿಗೆ ವಿಶಾಖಪಟ್ಟಣದ ಶಿಪ್‌ಯಾರ್ಡ್‌ಗೆ ಸಂಬಂಧಪಟ್ಟ ನನ್ನ ಪ್ರಶ್ನೆಗೆ ನನ್ನ ಸ್ನೇಹಿತ ಮಾನ್ಯ ಉತ್ಪಾದನಾ ಸಚಿವರಾದ ಶ್ರೀ ಕೆ.ಸಿ. ರೆಡ್ಡಿಯವರು ನೀಡಿದ ಉತ್ತರದ ಬಗ್ಗೆ ಉಲ್ಲೇಖಿಸಲು ಇಚ್ಛಿಸುತ್ತೇನೆ. ಫ್ರೆಂಚ್ ಸಂಸ್ಥೆಯು ಈ ಶಿಪ್‌ಯಾರ್ಡ್‌ನ್ನು ಯಾವ ರೀತಿಯಲ್ಲಿ ಪುನರ್ ರಚಿಸುತ್ತದೆ ಹಾಗೂ ಪುನರ್ ಮಾದರೀಕರಿಸುತ್ತದೆ ಎನ್ನುವ ಬಗ್ಗೆ ಅಂದಾಜುಗಳು ಸರ್ಕಾರದಲ್ಲಿಲ್ಲ ಎಂದು ಅವರು ಹೇಳಿದರು. ವೆಚ್ಚಗಳನ್ನು ತಿಳಿಸಲಿಲ್ಲ, ಪ್ರಾಯಶಃ ಅವುಗಳನ್ನು ಈಗ ತಿಳಿಸಬಹುದೇನೊ ? ಕೇವಲ ಇದು ಒಂದು ನಿದರ್ಶನ ಅಷ್ಟೆ. ಆದರೆ, ಇಂಥ ನಿದರ್ಶನಗಳು ಲೆಕ್ಕವಿಲ್ಲದಷ್ಟಿವೆ ಎನ್ನುವುದನ್ನು ನನ್ನ ಸಹಪಾಠಿಗಳು ಗಮನಿಸಬೇಕು.

ನಾನು, ಕೊನೆಯದಾಗಿ ಸಾರ್ವಜನಿಕ ಲೆಕ್ಕಪತ್ರ ಸಮಿತಿ ಮತ್ತು ಅಂದಾಜು ಸಮಿತಿಗಳಲ್ಲದೇ, ವಿವಿಧ ರೀತಿಯ ನಿಗಮ, ಕಂಪನಿ ಮತ್ತು ಸಂಸ್ಥೆಗಳ ವ್ಯವಹಾರಗಳನ್ನು ವರ್ಷ ಪೂರ್ತಿ ಕುಳಿತು ನೋಡಿಕೊಳ್ಳುವಂಥ ಹೊಣೆಗಾರಿಕೆಯನ್ನು ಹೊರಿಸಿದ ಒಂದು ಸಂಸದೀಯ ಸಮಿತಿಯನ್ನು ತಮ್ಮ ನಿರ್ದೇಶನದ ಅಡಿಯಲ್ಲಿ ಸ್ಥಾಪಿಸಬೇಕೆಂಬ ಸಲಹೆ ಮಾಡುತ್ತಿದ್ದೇನೆ. ನನ್ನ ಸ್ನೇಹಿತರಾದ ಆರ್ಥಿಕ ಸಚಿವರು ಹೇಳಿದಂತೆ ಕೆಲವು ಸಂಸ್ಥೆಗಳು ಯಾವುದೇ ಕಾನೂನಿನ ಅಡಿಯಲ್ಲಿ ನಿಗಮಿತವಾಗಿಲ್ಲ. ಮೇಲಿನ ಕ್ರಮ ಮಾನ್ಯ ಸಚಿವರ ಕೈಗಳನ್ನು ಬಲಪಡಿಸುತ್ತದೆ, ಅಲ್ಲದೆ ಸಂಸತ್ತಿನ ಅಧಿಕಾರ ಜಾರಿಯಾಗುವುದನ್ನು ದೃಢಪಡಿಸುತ್ತದೆ ಎನ್ನುವುದು ನನಗೆ ಮನವರಿಕೆಯಾಗಿದೆ.

ಮಾನ್ಯರೆ, ಹೀಗೆ ಮಾಡಿದರೆ, ತೆರಿಗೆದಾರರ ಹಣವನ್ನು ಸರಿಯಾದ ರೀತಿಯಲ್ಲಿ ವಿನಿಯೋಗಿಸಲಾಗಿದೆ ಎಂಬ ಖಾತ್ರಿಯನ್ನು ನೀಡಿದಂತಾಗುತ್ತದೆ. ರಾಷ್ಟ್ರದ ಹಿತದೃಷ್ಟಿಯಿಂದ ನಾನು ಮಾಡಿರುವ ಈ ಸಲಹೆಯನ್ನು ಸರ್ಕಾರ ಪರಿಶೀಲಿಸಬೇಕೆಂದು ಕೋರುತ್ತೇನೆ.

ಮಾನ್ಯರೆ, ಪತ್ರಿಕೆಗಳ ಮುಖಪುಟಗಳಲ್ಲಿ ಪ್ರಕಟವಾಗಬೇಕೆಂಬ ಆಸೆಯಿಂದಾಗಲೀ ಅಥವಾ ಮಾತನಾಡಬೇಕೆಂಬ ಚಪಲದಿಂದಾಗಲೀ ಈ ರೀತಿ ಹೇಳಿಲ್ಲವೆಂದು ಸ್ಪಷ್ಟಪಡಿಸುತ್ತೇನೆ. ಇದು ರಾಜಕೀಯ ಪ್ರಶ್ನೆ ಅಲ್ಲ. ಪಕ್ಷ ರಾಜಕೀಯಕ್ಕೆ ಇದು ಸಂಬಂಧಿಸಿದ್ದಲ್ಲ. ನಿಷ್ಪಕ್ಷಪಾತವಾಗಿ ಮತ್ತು ವಸ್ತುನಿಷ್ಠವಾಗಿ ಚರ್ಚಿಸಬೇಕಾದಂಥ ವಿಷಯ ಇದು. ಸಂಸದೀಯ ಸಮಿತಿ ಕುರಿತಂತೆ ನನ್ನ ಸಲಹೆ ಸ್ವೀಕಾರಾರ್ಹವಾದಲ್ಲಿ ಸರ್ಕಾರವನ್ನು ಅಭಿನಂದಿಸುತ್ತೇನೆ.

## 7. ಸಂಸತ್ತಿನ ಎರಡನೇ ಸದನ*

ಚರ್ಚೆಯಲ್ಲಿರುವ ನಿರ್ಣಯದ ವಿಷಯುವನ್ನು ಪಕ್ಷದ ವಿಷಯುವನ್ನಾಗಿ ಮಾಡಬಾರದು.............. ರಾಜ್ಯ ಸಭೆಯ ಅಧಿಕಾರ ಮತ್ತು ಪ್ರಕಾರ್ಯಗಳಿಗೆ ಸಂಬಂಧಿಸಿದಂತೆ, ಅದರಲ್ಲಿಯೂ ವಿಶೇಷವಾಗಿ ಗೌರವಾನ್ವಿತ ಲೋಕಸಭೆಗೆ ಸಂಬಂಧಿಸಿದಂಥ ಅದರ ನಿರ್ದಿಷ್ಟ ಸಮಸ್ಯೆಗಳನ್ನು ಕಡೆಯಪಕ್ಷ ಮೂರು ಬಾರಿ ನಾನು ವಿವಿಧ ಸಂದರ್ಭಗಳಲ್ಲಿ ಪ್ರಸ್ತಾಪಿಸಿದ್ದೇನೆ. ಮಾನ್ಯರೆ, ತಮ್ಮ ಅನುಮತಿಯ ಮೇರೆಗೆ ಪುನಃ ಈ ವಿಷಯದ ಮೇಲೆ ನಿಷ್ಪಕ್ಷವಾಗಿ ಹಾಗೂ ಸಾಧ್ಯವಾದಷ್ಟೂ ವಸ್ತುನಿಷ್ಠವಾಗಿ ಚರ್ಚಿಸಲು ಇಚ್ಛಿಸುತ್ತೇನೆ.

ರಾಜ್ಯಸಭೆಯ ಅಧಿಕಾರ ಮತ್ತು ಪ್ರಕಾರ್ಯ ಹಾಗೂ ಅದರ ರಚನೆಗಳಲ್ಲಿ ಇರುವಂಥ ಕರಾರುವಕ್ಕಾದ 12 ಲೋಪದೋಷಗಳ ಪಟ್ಟಿಯನ್ನು ಮಾಡಿದೇನೆ. ರಾಜ್ಯ ಸಭೆಯಲ್ಲಿ ಪರ್ಯಾಯ (ಸರದಿ) ಸದಸ್ಯತ್ವವಿದ್ದು, ಇಂಥ ಪೂರ್ವ ನಿದರ್ಶನ ಅಮೇರಿಕಾ ಸಂಯುಕ್ತ ರಾಷ್ಟ್ರಗಳಲ್ಲೂ ಇದೆ. ರಾಜ್ಯಸಭೆಯ ರಚನೆಯಲ್ಲಿ ಹಾಗೂ ಅದರ ಅಧಿಕಾರ ಮತ್ತು ಪ್ರಕಾರ್ಯಗಳ ನಿರೂಪಣೆಯಲ್ಲಿ ಬಹುತೇಕ ಶಾಸಕಾಂಗಗಳ ಮೇಲ್ಮನೆಗಳಲ್ಲಿರುವ ಬಹುಮಟ್ಟಿನ ಎಲ್ಲಾ ನ್ಯೂನತೆಗಳನ್ನು ಹೇಗೆ ಉಳಿಸಿಕೊಳ್ಳಲಾಗಿದೆ ಎನ್ನುವುದನ್ನು ಹಾಗೂ ವಿಶ್ವದ ಕೆಲವು ರಾಷ್ಟ್ರಗಳ ಮೇಲ್ಮನೆಗಳ ಕಾರ್ಯ ನಿರ್ವಹಣೆಯಲ್ಲಿರುವಂಥ ಒಳ್ಳೆಯ ಅಂಶಗಳನ್ನು ಹೇಗೆ ಕೈಬಿಡಲಾಗಿದೆ ಎಂಬುದನ್ನು ತೋರಿಸಲು ಇಚ್ಛಿಸುತ್ತೇನೆ. ಸರದಿ ಪ್ರಾತಿನಿಧ್ಯದ ಬಗ್ಗೆ ಈಗಷ್ಟೇ ಉಲ್ಲೇಖಿಸಿದೆ. ಯು.ಎಸ್.ಎ. ರಾಷ್ಟ್ರದ ವಿದೇಶೀ ಸಂಬಂಧಗಳ ಸಮಿತಿಯು ಹೊಂದಿರುವಂಥ ಪ್ರಕಾರ್ಯಗಳನ್ನು ರಾಜ್ಯ ಸಭೆಗೆ ನಾವೇಕೆ ನೀಡಬಾರದು? ಹಾಗೂ ಅದನ್ನು ಸಂವಿಧಾನದ ಒಂದು ಪರಿಣಾಮಕಾರಿ ಅಂಗವನ್ನಾಗಿ ಏಕೆ ಮಾಡಬಾರದು? ಆ ರೀತಿ ನಾವು ಮಾಡಿಲ್ಲ. ರಾಜ್ಯಸಭೆ ಎನ್ನುವುದು ಕೇವಲ ಒಂದು ತೇಪೆದಾರಿಯಾದ ಕಾರ್ಯವಾಗಿದೆ. ಇಂಥ ತೇಪೇದಾರಿ ಕಾರ್ಯ ಯಾವುದೇ ಫಲಿತಾಂಶ ನೀಡುವುದಿಲ್ಲ. ಉದಾಹರಣೆಗಾಗಿ ವಿದೇಶೀ ಸಂಬಂಧಗಳ ಸೆನೆಟ್ ಸಮಿತಿಯು ರಾಯಭಾರಿ ನೇಮಕಾತಿಗಳ ಪರಿಶೋಧನಾ ಕಾರ್ಯವನ್ನು ನಿರ್ವಹಿಸುತ್ತದೆ. ರಾಷ್ಟ್ರಾಧ್ಯಕ್ಷರಿಂದ ನೇಮಕಗೊಳ್ಳುವಂಥ ಪ್ರತಿಯೊಂದೂ ರಾಯಭಾರಿ ನೇಮಕವನ್ನು ಸೆನೆಟ್ ಅನುಮೋದಿಸಲೇಬೇಕು. ಇಂಥ ಅಧಿಕಾರವನ್ನು ರಾಜ್ಯಸಭೆ ಪಡೆಯಬೇಕೆಂಬುದು ನನ್ನ ಇಚ್ಛೆಯಾಗಿದೆ. ಇಂಥ ಅಧಿಕಾರ ಅದಕ್ಕಿಲ್ಲ.

ನಾನು ಹೇಳಬೇಕೆಂದಿರುವ ಎರಡನೇ ಅಂಶ ಪರ್ಯಾಯ ವ್ಯವಸ್ಥೆಗೆ ಸಂಬಂಧಪಟ್ಟಿದೆ. ಇದು ತೀರಾ ಕೆಟ್ಟ ಪದ್ಧತಿ ಎಂದು ನನಗನಿಸುತ್ತದೆ. ರಾಜ್ಯಸಭೆಯಲ್ಲಿ ಪ್ರತಿ ಎರಡು

---

* ಕೇಂದ್ರದ ಎರಡನೇ ಸದನದ ಮೇಲಿನ ಖಾಸಗೀ ಸದಸ್ಯರ ನಿರ್ಣಯದ ಮೇಲೆ ನಡೆದ ಚರ್ಚೆಯಿಂದ, ಲೋಕಸಭಾ - 2ನೇ ಏಪ್ರಿಲ್ 1954

ವರ್ಷಗಳಿಗೊಮ್ಮೆ ಈ ಪರ್ಯಾಯ (ಸರದಿ) ವ್ಯವಸ್ಥೆ ಚಾಲ್ತಿಯಲ್ಲಿದ್ದರೆ, ಲೋಕಸಭೆಯ ಅವಧಿ ಐದು ವರ್ಷಗಳು. ಕೆನಡಾ ದೇಶದಲ್ಲಿ ಒಬ್ಬ ವ್ಯಕ್ತಿ ಸೆನೆಟರ್ ಎಂದಾದರೆ ಮುಗಿಯಿತು. ಆತ ನಿರಂತರವೂ ಸೆನೆಟರ್ ಆಗಿ ಮುಂದುವರಿಯುತ್ತಾನೆ. ಆತ ಸೆನೆಟರ್ ಎಂದೇ ಮೃತಹೊಂದುತ್ತಾನೆ. ರಾಜಕೀಯ ಆಶ್ರಯದ ಬಲೆಯಿಂದ ಮುಕ್ತನಾಗಿ ಸೆನೆಟರ್ ಎಂದೇ ನಿರಂತರವಾಗಿ ಉಳಿಯುತ್ತಾನೆ. ಅಂಥ ಪದ್ಧತಿಯನ್ನು ನಾವು ಇಲ್ಲಿ ಕಾಣುವುದಿಲ್ಲ. ಸ್ವಾರ್ಥ ಸಾಧನೆ ಮತ್ತು ಪಟ್ಟಭದ್ರ ಹಿತಾಸಕ್ತಿಗಳನ್ನು ಹೊರತುಪಡಿಸಿ, ಮತ್ತೇನನ್ನೂ ಇಲ್ಲಿ ಕಾಣುವುದಿಲ್ಲ. ರಾಜ್ಯ ಸಭೆಯ ಇತ್ತೀಚಿನ ಚುನಾವಣೆಯ ವಿಶ್ಲೇಷಣೆಯು ಅಧಿಕಾರ ರೂಢ ಪಕ್ಷ ತನ್ನ ಸ್ಥಿತಿಯನ್ನು ಬಲಪಡಿಸಿಕೊಂಡಿರುವುದನ್ನು ಪ್ರತಿಪಾದಿಸುತ್ತದೆ. ನಾಳೆ ಮತ್ತೊಂದು ಪಕ್ಷವಾಗಬಹುದು. ಅಧಿಕಾರದಲ್ಲಿರುವ ಪಕ್ಷ ಇಂಥದ್ದನ್ನು ಹೇಗೆ ನಿರ್ವಹಿಸುತ್ತದೆ ಎಂಬುದು ನನಗೆ ತಿಳಿದಿದೆ. ಚುನಾವಣೆಯಲ್ಲಿ ತಿರಸ್ಕರಿಸಲ್ಪಟ್ಟ ಎಲ್ಲ ಪಕ್ಷಗಳ ವ್ಯಕ್ತಿಗಳನ್ನು ಹಿಂದಿನ ಬಾಗಿಲ ಮೂಲಕ ಒಳಗೆ ಕರೆದುಕೊಳ್ಳಲಾಗುತ್ತಿರುವ ಒಂದು ರಾಜಕೀಯ ಸ್ವಾರ್ಥ ಸಾಧನೆಯ ಕಥೆಯಾಗಿ ಇದು ಪರಿಣಮಿಸುತ್ತಿರುವುದನ್ನು ಇಲ್ಲಿ ಒತ್ತಿ ಹೇಳಬೇಕಾಗಿದೆ. ಇದು ತೀರಾ ಖಂಡನೀಯವಾದುದೆಂದು ನನಗನಿಸುತ್ತದೆ.

ಮೂರನೇ ಅಂಶವೇನೆಂದರೆ, 'ಬ್ರಿಟನ್ನಿನ ಹೌಸ್ ಆಫ್ ಲಾರ್ಡ್ಸ್' ನಲ್ಲಿಯೂ ಸಹ ಯಾವುದೇ ಪಕ್ಷ ವಿಪ್ ಹೊರಡಿಸುವುದಿಲ್ಲ. ಆದರೆ, ಇಲ್ಲಿಯ ಪರಿಸ್ಥಿತಿ ಏನಾಗಿದೆ? ಕಮ್ಯೂನಿಸ್ಟ್ ಪಕ್ಷದ ನನ್ನ ಸ್ನೇಹಿತರೂ ಕೂಡ, ಆ ಸದನದಿಂದ ಹೊರಡಿಸುವ ಇಂಥ 'ವಿಪ್' ಗೆ ಬದ್ಧರಾಗಿದ್ದಾರೆ. ವಿಶೇಷ ವಿವಾಹಗಳ ಮೇಲಿನ ಜಂಟಿ ಪರಿಶೀಲನಾ ಸಮಿತಿಯ ಬಗ್ಗೆ ನಾನು ಮಂಡಿಸಿದ ನಿರ್ಣಯದ ಸಂಬಂಧದಲ್ಲಿ ಈ ಸದನ ಎರಡು ಭಾಗಗಳಾಗಿ ಒಂದು ವಿಶೇಷವಾದಂಥ ಅದ್ಭುತ ನಡೆದಿದ್ದುದನ್ನು ನಾವು ನಿನ್ನೆ ದಿನ ನೋಡಿದೆವು. ಕಮ್ಯೂನಿಸ್ಟ್ ಪಕ್ಷವು ಮಾಡಿಕೊಂಡ ಹೊಂದಾಣಿಕೆ ಕಾರಣದಿಂದಾಗಿ ಆ ಪಕ್ಷದ ನನ್ನ ಮಿತ್ರರು ಈ ಎರಡೂ ಸದನಗಳಲ್ಲಿ ಸರ್ಕಾರದ ಪರವಾಗಿ ಮತ ಚಲಾಯಿಸಿದರು. ಅವರ ಪಕ್ಷದ ಒಟ್ಟಾರೆ ನಾಯಕತ್ವವನ್ನು ಆ ಸದನದಲ್ಲಿರುವ ನಾಯಕತ್ವ ನಿರ್ವಹಿಸುತ್ತದೆ. ವಿನಃ ಈ ಸದನದಿಂದಲ್ಲ. ಸಂಬಂಧಪಟ್ಟ ಪಕ್ಷಗಳ ಬಗ್ಗೆ ಅಪಾರ ಗೌರವದಿಂದಲೇ ನಾನಿದನ್ನು ಹೇಳುತ್ತಿದ್ದೇನೆ. ಆದರೂ, ಪಕ್ಷಗಳು 'ವಿಪ್' ಗಳನ್ನು ಹೊರಡಿಸುವುದು, ರಾಜಕೀಯ ಹಣೆಪಟ್ಟಿಗಳನ್ನು ಪ್ರದರ್ಶಿಸುವುದು ಹಾಗೂ ಪಕ್ಷಗಳು ಮೇಲ್ಮನೆಯಿಂದ ಸದಸ್ಯರನ್ನು ನಿಯಂತ್ರಿಸುವಂಥ ಸಂಗತಿ ಹಾಗೆಯೇ ಮುಂದುವರೆದಿದ್ದು, ಇಂಥ ವ್ಯವಸ್ಥೆ ಹೌಸ್ ಆಫ್ ಲಾರ್ಡ್ಸ್‌ನಲ್ಲಿಯೂ ಕಂಡುಬರುವುದಿಲ್ಲ, ನನಗನಿಸುವ ಹಾಗೆ ಇದೊಂದು ಆಕ್ಷೇಪಾರ್ಹ ಕ್ರಮವಾಗಿದ್ದು ಈ ಬಗ್ಗೆ ಗಮನಹರಿಸಬೇಕಾಗಿದೆ.

ಸಚಿವರುಗಳಿಗೆ ಸಂಬಂಧಿಸಿದಂತೆ ಹೇಳುವುದಾದರೆ ಮೇಲ್ಮನೆಯಿಂದ ಬಂದ ಸಚಿವರು ಕೆಳಮನೆಯಲ್ಲಿ ಆಲಿಸುವ ಹಾಗೂ ಭಾಷಣ ಮಾಡುವಂಥ ಉದಾಹರಣೆ ವಿಶ್ವದಲ್ಲಿ ಎಲ್ಲಿಯೂ ಕಂಡುಬರುವುದಿಲ್ಲ. ಇದು ನಮ್ಮ ದೂರದೃಷ್ಟಿ. ಆಡಳಿತ ಪಕ್ಷಕ್ಕೆ ಸೇರಿರುವ ಅತ್ಯಂತ ಪ್ರತಿಭಾನ್ವಿತರಾದ ಜನರು ಸದನದಲ್ಲಿದ್ದಾರೆ. ಅವರಿಗೂ ಆಲಿಸುವಂಥ ಹಕ್ಕು ಇರಬೇಕು

ಎಂಬುದರ ಬಗ್ಗೆ ನಾವು ಸೂಕ್ಷ್ಮವಾಗಿ ಪರಿಶೀಲಿಸಬೇಕು. ನನ್ನ ಮಿತ್ರರಾದ ಡಾ. ರಾಮ ಸುಭಾಶ್ ಸಿಂಗ್‌ರವರು ಬೇರೆಯದೇ ಆದ ರೀತಿಯಲ್ಲಿ ಹೇಳಿರುವಂತೆ ಚುನಾವಣೆಗಳಲ್ಲಿ ಚುನಾಯಿತರಾಗದೆ ಮತ್ತು ಮತದಾರರಿಂದ ಆಯ್ಕೆಗೊಳ್ಳದೇ ಇರುವಂಥ ವ್ಯಕ್ತಿಗಳನ್ನು ಸರ್ಕಾರದಲ್ಲಿ ಭಾಗಿಯಾಗಿಸಲು ಕಲ್ಪಿಸಿಕೊಂಡಿರುವ ಅವಕಾಶ ಇದು. ಇದೊಂದು ಅತ್ಯಂತ ಕೆಟ್ಟ ಪದ್ಧತಿ ಎಂದು ಹೇಳಲು ನನಗೆ ವಿಷಾದವೆನಿಸುತ್ತದೆ. ಇದಕ್ಕೆ ಕೊನೆ ಹಾಡಲೇಬೇಕಾಗಿದೆ.

ಈ ರಾಷ್ಟ್ರದ ಪ್ರಧಾನ ಮಂತ್ರಿಗಳು, ಈ ಸದನದ ನಾಯಕರು, ಇಲ್ಲಿ ಒಂದು ಹೇಳಿಕೆಯನ್ನು ನೀಡಿದ ನಂತರ ಅದೇ ಹೇಳಿಕೆಯನ್ನು ರಾಜ್ಯ ಸಭೆಯಲ್ಲೂ ನೀಡಲು ದೌಡಾಯಿಸಬೇಕೆಂದು ನಿರೀಕ್ಷಿಸುವುದು ಅತ್ಯಂತ ಕ್ಷುಲ್ಲಕವಾದುದು. ಹಾಗಾದರೆ, ಆ ಸದನದ ಸಭಾ ನಾಯಕರು ಏನು ಮಾಡುತ್ತಾರೆ? ಅವರ ಕಾರ್ಯಗಳಾದರೂ ಏನು? ಈ ಹೇಳಿಕೆಗಳನ್ನು ಪುನಃ ಗಿಳಿಪಾಠದಂತೆ ಆ ಸದನದಲ್ಲಿ ಏಕೆ ಉಚ್ಚರಿಸಬೇಕು? ಇದು, ಅನಗತ್ಯ ಪುನರಾವರ್ತನೆ ಕಾರ್ಯ. ರಾಜ್ಯ ಸಭೆಯ ಘನತೆಯ ಬಗ್ಗೆ ಅನಾವಶ್ಯಕವಾದ ಶಿಷ್ಟಾಚಾರ ಹಾಗೂ ಸಾರ್ವಜನಿಕ ಹಣದ ಅನಾವಶ್ಯಕ ಪೋಲು ನಡೆದಿದೆ.

ರಾಜ್ಯ ಸಭೆಯ ಪರಿಶೀಲನಾ ಕಾರ್ಯಗಳೆಂದು ಯಾವನ್ನು ಕರೆಯಲಾಗಿದೆಯೋ ಅವುಗಳ ಬಗ್ಗೆ ಸದನದ ಗಮನವನ್ನು ಸೆಳೆಯಬಯಸುತ್ತೇನೆ. ಈ ಬಗ್ಗೆಯೂ ನಾನು ಈಗಾಗಲೇ ವಿಶ್ಲೇಷಿಸಿದ್ದು, ನನ್ನ ವಿಶ್ಲೇಷಣೆಯಲ್ಲಿ ಲೋಪದೋಷಗಳೇನಾದರೂ ಕಂಡುಬಂದಲ್ಲಿ, ಅವುಗಳನ್ನು ಸರಿಪಡಿಸಿಕೊಳ್ಳಲು ಸಿದ್ಧನಿದ್ದೇನೆ. ಈ ಮೇಲ್ಮನೆಯು ಎಂದರೆ ರಾಜ್ಯ ಸಭೆಯು ತನ್ನ ಅಸ್ತಿತ್ವದ ಅವಧಿಯಲ್ಲಿ ಎರಡು ಬಾರಿ, ಈ ಸದನ ಅನುಮೋದಿಸಿದ ವಿಧೇಯಕಗಳಿಗೆ ತಿದ್ದುಪಡಿಗಳನ್ನು ತಂದಿದೆ. ಒಂದು ಪ್ರಕರಣದಲ್ಲಿ, ಮೇಲ್ಮನೆಯು ಒಂದು ವಿಧೇಯಕದಲ್ಲಿ '50' ಎಂಬ ಪದವನ್ನು ಸೇರಿಸಿದೆ. ಇನ್ನೊಂದು ಪ್ರಕರಣದಲ್ಲಿ ರಾಜ್ಯ ಸಭೆಯ ಮುಂದೆ ಕೆಲವು ಕಾಗದ ಪತ್ರಗಳನ್ನು ಮಂಡಿಸುವ ಅವಕಾಶವನ್ನು ದಾಖಲಿಸಿದೆ. ಬೇರೆ ರೀತಿಯಲ್ಲಿ ಹೇಳುವುದಾದರೆ "Self Service" ರೀತಿಯಾದದಂಥ ಖಂಡವನ್ನು ಸೇರಿಸಿದೆ. ಸಂಸತ್ತಿನ ಆರು ಅಧಿವೇಶನಗಳಲ್ಲಿ ಆ ಸದನ ಮಾಡಿರುವ ತಿದ್ದುಪಡಿಗಳು ಕೇವಲ ಎರಡು ಮಾತ್ರ, ಸದನದ ಪರಿಶೀಲನಾ ಕಾರ್ಯಗಳೆಂದು ಯಾವನ್ನು ಕರೆಯಲಾಗಿದೆಯೋ ಅವುಗಳು ಲಜ್ಜಾಸ್ಪದಗಳಲ್ಲದೆ ಮತ್ತೇನೂ ಅಲ್ಲ. ತದ್ವಿರುದ್ಧವಾಗಿ ಈ ಮೇಲ್ಮನೆಗೆ ಇನ್ನೂ ಹೆಚ್ಚಿನ ಅಧಿಕಾರಗಳನ್ನು ನೀಡಲು ಉದ್ದೇಶಿಸಲಾಗಿದೆ. ಈ ಸದನ, ಆಯವ್ಯಯದ ಬಗ್ಗೆ ಚರ್ಚೆ ಮಾಡುವುದಕ್ಕಿಂತ ಪೂರ್ವದಲ್ಲಿಯೇ ರಾಜ್ಯಸಭೆಯು ಅದನ್ನು ಚರ್ಚಿಸಲು ಈ ಅಧಿವೇಶನದ ಸಂದರ್ಭವನ್ನು ಬಳಸಿಕೊಂಡಿತು. ಮೊದಲು ಮೇಲ್ಮನೆಯಲ್ಲಿ ಚರ್ಚೆಯಾಯಿತು. ಯಾವ ಕಾರಣದಿಂದ? ಯಾವ ಉದ್ದೇಶಕ್ಕಾಗಿ ಈ ಚರ್ಚೆಗೆ ಮೊದಲು ಮೇಲ್ಮನೆಯಲ್ಲಿ ಏರ್ಪಾಟು ಮಾಡಲಾಯಿತು ಎನ್ನುವ ಬಗ್ಗೆ ನಾನು ಉತ್ತರವನ್ನು ನಿರೀಕ್ಷಿಸುತ್ತೇನೆ.

ಇದು ಪಕ್ಷದ ಹಿತಾಸಕ್ತಿಯ ವಿಷಯ. ನಿಜ ಹೇಳಬೇಕೆಂದರೆ ಈ ಸದನದಲ್ಲಿ ಮಾಡಿದಂಥ ಅದೇ ಹೇಳಿಕೆಯನ್ನು ಇನ್ನೊಂದು ಸದನದಲ್ಲಿ ಪುನರುಚ್ಚರಿಸುವುದು ಬೇಸರದ

ಸಂಗತಿ. ಈ ಬಗ್ಗೆಯೂ ನಾನು ಒಂದು ದೀರ್ಘ ಉದಾಹರಣೆಯನ್ನು ನೀಡಬಲ್ಲೆ. ನನ್ನ ಸ್ನೇಹಿತರಾದ ಶ್ರೀ ಸತ್ಯ ನಾರಾಯಣ ಸಿನ್ಹ ಅವರು ಇದನ್ನು ಕೇಳುವ ಸಹನೆ ತೋರಿಸಬೇಕು. ನನ್ನ ಸ್ನೇಹಿತರಾದ ಶ್ರೀ ನಾಗೇಶ್ವರ ಪ್ರಸಾದ್‌ರವರು ಚಕ್ರಬಂಧಗಳನ್ನು ನಿಷೇಧಿಸುವ ಬಗ್ಗೆ ಖಾಸಗಿ ವಿಧೇಯಕವನ್ನು ಮಂಡಿಸಿದ ಸ್ವಲ್ಪ ದಿನಗಳಲ್ಲಿಯೇ ಒಬ್ಬ ಸದಸ್ಯರು ಅದನ್ನು ಅಕ್ಷರಶಃ ಮುದ್ರಣದ ಲೋಪದೋಷಗಳೂ ಸೇರಿದಂತೆ ನಕಲು ಮಾಡಿ ಆ ಸದನದಲ್ಲಿ ಮಂಡಿಸಿದರು, ಅದೇ ವಿಧೇಯಕದ ಪ್ರತಿಗಳನ್ನು ಪುನಃ ನಮಗೆ ನೀಡಲಾಯಿತು. ಇದೊಂದು ವಿಚಿತ್ರ ಸಂಗತಿಯಾಗಿದ್ದು ಇಂಥ ಪೂರ್ವ ನಿದರ್ಶನಗಳು ವಿಶ್ವದ ಯಾವುದೇ ಕೆಳಮನೆ ಅಥವಾ ಮೇಲ್ಮನೆಯ ಇತಿಹಾಸದಲ್ಲಿ ಕಂಡುಬರುವುದಿಲ್ಲ. ಒಂದು ರೀತಿಯ ನಿರ್ಲಜ್ಜತನ ಇಲ್ಲಿ ನಡೆಯುತ್ತಿದೆ. ಒಟ್ಟಾರೆ ಏನು ನಡೆಯುತ್ತಿದೆಯೋ ಅದು ಉದ್ದೇಶಪೂರ್ವಕ ಕ್ರಮವಾಗಿದ್ದು ಈ ಸದನದ ಹಕ್ಕುಬಾಧ್ಯತೆಗಳ ಮೇಲೆ ಅತಿಕ್ರಮಣ ಆಗುತ್ತಿದೆ. ಸಾರ್ವಜನಿಕ ಲೆಕ್ಕಪತ್ರಗಳ ಸಮಿತಿಯ ವಿವಾದ ನಮ್ಮ ಮನಸ್ಸಿನಲ್ಲಿ ಇನ್ನೂ ಹಸಿಯಾಗಿದ್ದು, ಜಂಟಿ ಪರಿಶೀಲನಾ ಸಮಿತಿಯ ವಿವಾದವೂ ಕೂಡ ನಮ್ಮ ಮುಂದಿದೆ. ಕೇವಲ ರಾಜಕೀಯ ಕಾರಣಗಳಿಂದಾಗಿ ಈ ಹೆಚ್ಚಿನ ಕಾರ್ಯಗಳನ್ನು ಆ ಸದನಕ್ಕೆ ವಹಿಸಿಕೊಡಲಾಗಿದೆಯೇ ವಿನಃ ಬೇರೇನೂ ಇಲ್ಲ.

ಆ ಸದನಕ್ಕೆ ಇಂಥ ಕಾರ್ಯಗಳನ್ನು ವಹಿಸಿಕೊಡಲು ಏರ್ಪಾಟು ಮಾಡಿದ ಆಡಳಿತ ಪಕ್ಷವನ್ನು ನಾನು ದೋಷಿಸಬೇಕಾಗಿದೆ.

ನಮ್ಮಲ್ಲಿರುವಂಥ ಪ್ರಶ್ನೋತ್ತರ ಅವಧಿ ವಿಶ್ವದ ಬೇರಾವುದೇ ಮೇಲ್ಮನೆಯಲ್ಲಿ ಇಲ್ಲ ಇದು ಪುನರಾವೃತ್ತಿ ಮತ್ತು ನಕಲು ಕ್ರಮ ಅಷ್ಟೆ. ಬ್ರಿಟಿಷ್ ಹೌಸ್ ಆಫ್ ಲಾರ್ಡ್ಸ್‌ನಲ್ಲಿಯೂ ಕೂಡ ಅತೀ ಪ್ರಾಮುಖ್ಯ ವಿಷಯಗಳ ಮೇಲೆ ವಾರಕ್ಕೆ ಎರಡು ದಿನಗಳಲ್ಲಿ ಮಾತ್ರ ಆರು ಪ್ರಶ್ನೆಗಳಿಗೆ ಅನುಮತಿ ನೀಡಲಾಗುತ್ತದೆ. ರಾಜ್ಯಸಭೆಯಲ್ಲಿ ಪ್ರಶ್ನೋತ್ತರ ಅವಧಿಯನ್ನು ಕಲ್ಪಿಸಿ ದಿನನಿತ್ಯವೂ ತೆರಿಗೆದಾರರ ಹಣ ಪೋಲಾಗುವಂತೆ ಮಾಡಲಾಗಿದೆ, ಇದು ಯಾವ ಉದ್ದೇಶಕ್ಕೆಂಬುದು ನನಗಂತೂ ಗೊತ್ತಿಲ್ಲ.

ಮಾನ್ಯರೆ, ಕೆಲವು ಪೂರ್ವ ನಿದರ್ಶನಗಳು ನನ್ನ ಬಳಿ ಇವೆ. ಟರ್ಕಿ, ಇಸ್ರೇಲ್ ಮತ್ತು ಇತರೆ ರಾಷ್ಟ್ರಗಳ ಇತ್ತೀಚಿನ ಸಂವಿಧಾನಗಳು ಮೇಲ್ಮನೆಯನ್ನು ಕೈಬಿಟ್ಟಿವೆ. ಅಲ್ಲಿ ಮೇಲ್ಮನೆಗಳೇ ಇಲ್ಲ. ನಾರ್ವೆ ದೇಶದಲ್ಲಿನ ಪರಿಸ್ಥಿತಿಯಾದರೂ ಏನು? ಕ್ಷೇತ್ರಾವಾರು ಆಧಾರದ ಮೇಲೆ ಕೆಳಮನೆಗೆ ಅಲ್ಲಿ ಚುನಾಯಿಸಲಾಗುತ್ತದೆ. ಚುನಾಯಿತರಾದ ನಾಲ್ಕನೇ ಒಂದರಷ್ಟು ಸದಸ್ಯರನ್ನು ಇನ್ನೊಂದು ಸದನಕ್ಕೆ ಪುನರಾಯ್ಕೆ ಮಾಡಲಾಗುತ್ತದೆ. ಆ ಸದನ ಪರಿಷ್ಕರಣಾ ಅಂಗವಾಗಿ ನಿರ್ದಿಷ್ಟಪಡಿಸಲಾದ ಕಾರ್ಯಗಳನ್ನು ನಿರ್ವಹಿಸುತ್ತದೆ. ಈಗಾಗಲೇ ರಾಜ್ಯಸಭೆಯು ಅಸ್ತಿತ್ವದಲ್ಲಿರುವುದರಿಂದ ಅದು "ಹೈಡ್ರೋಜನ್ ಬಾಂಬ್," "ತರ್ಕಬದ್ಧತೆ" ಅಥವಾ ಅಂಥ ಸ್ವರೂಪದ ಇನ್ನಿತರ ನಿರ್ದಿಷ್ಟ ಸಮಸ್ಯೆಗಳನ್ನು ಕೈಗೆತ್ತಿಕೊಂಡು ಉಪಯುಕ್ತ ಸಲಹೆಗಳನ್ನು

ನೀಡಲಿ ಹಾಗೂ ಇಲ್ಲಿ ಏನು ಪಡೆಯುತ್ತಿದೆ ಎಂಬುದನ್ನು ಪುನಃ ಅಲ್ಲಿ ಪುನರಾವೃತ್ತಿ ಮಾಡದಿರಲಿ ಎಂದಷ್ಟೇ ನಾನು ಸಲಹೆ ಮಾಡುತ್ತೇನೆ.

ಅಂತಿಮವಾಗಿ, ರಾಜ್ಯ ಸಭೆಯ ಪ್ರಸ್ತುತ ರಚನೆಯನ್ನು ಗಮನಿಸಿದಾಗ 'ಹಿರಿಯ ಮುತ್ಸದ್ದಿ ಎಂಬ ತತ್ವವಾಗಲೀ ಅಥವಾ ಹಿರಿಯ ಮುತ್ಸದ್ದಿ ಎಂಬ ಸಿದ್ಧಾಂತವಾಗಲಿ, ಅದಕ್ಕೆ ಸಂಬಂಧಿಸಿದ್ದಲ್ಲವೆಂದು ನನಗನಿಸುತ್ತದೆ. ಮೇಲ್ಮನೆಯಲ್ಲಿರುವಂಥ ತೀರಾ ಚಿಕ್ಕ ವಯಸ್ಸಿನ ಹಾಗೂ ಈಗ ತಾನೇ ಕಾಲೇಜನ್ನು ಬಿಟ್ಟು ಬಂದಂಥ ಯುವಕರ ಹೆಸರುಗಳನ್ನು ನಾನು ಹೇಳಬಲ್ಲೆ. ಆದರೆ ಅದು ಆ ಸಂಸದೀಯ ವರ್ತನೆಯಾಗುತ್ತದೆ. ಇದು ತೀರಾ ವಿಚಿತ್ರವಾದ ಪರಿಸ್ಥಿತಿ. ಮೇಲ್ಮನೆಯನ್ನು ರಚನಾತ್ಮಕ ತಳಹದಿಯ ಮೇಲೆ ಪುನರ್ ರಚಿಸದಿದ್ದಲ್ಲಿ, ಕೆಳಮನೆ ಮತ್ತು ಮೇಲ್ಮನೆಗಳ ಅಧಿಕಾರ ಮತ್ತು ಪ್ರಕಾರ್ಯಗಳನ್ನು ಸಮಗೊಳಿಸುವಂಥ ಹುಚ್ಚು ಸಾಹಸಗಳು ನಿಲ್ಲದಿದ್ದಲ್ಲಿ, ಪ್ರಶ್ನೋತ್ತರ ಅವಧಿ ಇಲ್ಲದಂತಾಗಿ ಮತ್ತು ವಿವಾದ ರಹಿತವಾಗಿ ಹಾಗೂ ಸಚಿವರು ಅವಸರವರಸವಾಗಿ ಅಲ್ಲಿಂದಿಲ್ಲಿಗೆ ದೌಡಾಯಿಸದಂತೆ ನಿರ್ದಿಷ್ಟಪಡಿಸಿದ ಸೀಮಾವಲಯದಲ್ಲಿ ರಾಜ್ಯಸಭೆಯು ಕಾರ್ಯ ನಿರ್ವಹಿಸಲು ವಿಫಲವಾದಲ್ಲಿ, ಅದನ್ನು ರದ್ದುಪಡಿಸುವುದೊಂದೇ ಉಳಿದಿರುವ ಪರ್ಯಾಯ ಮಾರ್ಗ.

## 8. ಸಂವಿಧಾನ ತಿದ್ದುಪಡಿ ವಿಧೇಯಕಗಳು*

ಈ ನಾಲ್ಕು ದಶಕಗಳಲ್ಲಿನ ಗಾಂಧೀ ಮತ್ತು ಗಾಂಧಿಯೋತ್ತರ ದೀರ್ಘ ಚಿಂತನೆ, ಪ್ರಸ್ತುತ ಸಂವಿಧಾನ (9ನೇ ತಿದ್ದುಪಡಿ) ವಿಧೇಯಕದ ಹಿಂದಿದೆ. ಈ ವಿಧೇಯಕದ ಚಾಲಕತ್ವವನ್ನು ವಹಿಸಿಕೊಳ್ಳುವ ಸೌಭಾಗ್ಯ ಮಾನ್ಯ ಗೃಹ ಸಚಿವರಿಗೆ ಒದಗಿಬಂದುದಕ್ಕಾಗಿ ಅವರನ್ನು ಅಭಿನಂದಿಸಲು ನನಗೆ ಸಂತೋಷವಾಗುತ್ತದೆ. ಇತ್ತೀಚಿನ ಹಲವು ವರ್ಷಗಳಲ್ಲಿ ನಾವೇ ನಿಗದಿಪಡಿಸಿಕೊಂಡ ದೂರದ ಗುರಿಯನ್ನು ಈ ವಿಧೇಯಕದ ಮೂಲಕ ತಲುಪಲಿದ್ದೇವೆಂಬ ವಿಶ್ವಾಸ ನನಗುಂಟಾಗಿದೆ. ಆಧುನಿಕ ಭಾರತದ ಇತಿಹಾಸದಲ್ಲಿ ಸರದಾರ್ ವಲ್ಲಭಭಾಯಿ ಪಟೇಲ್‌ರವರ ಮುತ್ಸದ್ದಿತನದಿಂದ ಭಾರತದ ರಾಜ ಸಂಸ್ಥಾನಗಳು ಬಹುತೇಕ ವಿಲೀನಗೊಳ್ಳುವುದು ಸಾಧ್ಯವಾಯಿತು. ಹಾಗೆಯೇ, ಈಗ, ಶ್ರೀ ಗೋವಿಂದ ವಲ್ಲಭ ಪಂತರು, ದಿವಂಗತ ಸರ್‌ದಾರ್ ವಲ್ಲಭಭಾಯಿ ಪಟೇಲರು ಸಮರ್ಥವಾಗಿ ನಿರ್ವಹಿಸಿದ ಕಾರ್ಯವನ್ನು ಮುನ್ನಡೆಸಿ ರಾಜ ಪ್ರಮುಖ ವ್ಯವಸ್ಥೆಯನ್ನು ರದ್ದುಪಡಿಸುವ ಮೂಲಕ ಆ ಕಾರ್ಯವನ್ನು ಪೂರ್ಣವಾಗಿ ಈಡೇರಿಸಿದ್ದಾರೆ. ಮುಂದೊಂದು ದಿನ ಈ ದೇಶಕ್ಕೆ ಸಂಬಂಧಪಟ್ಟ "ಆಧುನಿಕ ಭಾರತ ಇತಿಹಾಸ"ವನ್ನು ಬರೆಯುವ ಸಂದರ್ಭದಲ್ಲಿ ಇತಿಹಾಸಕಾರರ ಕಣ್ಣಿಗೆ ಈ ಅಂಶ ಬೀಳದೇ ಇರಲಾರದು.

ರಾಜ್ಯಗಳ ಪುನರ್ ವಿಂಗಡಣೆ ಸಂವಿಧಾನ ತಿದ್ದುಪಡಿ ಹಾಗೂ ಬಂಗಾಳ - ಬಿಹಾರ ವಿಧೇಯಕಗಳಿಗೆ ಸಂಬಂಧಿಸಿದ ಮೂರು ಜಂಟೀ ಸಮಿತಿಗಳಲ್ಲಿ ನಮ್ಮಲ್ಲಿನ ಕೆಲವರು, ನಾನೂ ಕೂಡ ನಮನಮಗೆ ಪ್ರಿಯವೆನಿಸಿದ ಅಭಿಪ್ರಾಯಗಳನ್ನು ಪ್ರತಿಬಿಂಬಿಸುವಲ್ಲಿ ತೋರಿಸುತ್ತಿದ್ದ ನಮ್ಮ ನಮ್ಮ ರೂಢಿಗತ ಹಠಮಾರಿತನ - ಈ ಶಬ್ದವನ್ನು ಸಾಮಾನ್ಯಾರ್ಥದಲ್ಲಿ ಬಳಸಿದ್ದೇನೆ - ನಮ್ಮ ಜೊತೆ ಚರ್ಚೆ ಮಾಡುವಾಗ ಗೃಹ ಸಚಿವರು ತೋರುತ್ತಿದ್ದ ಅಸಾಧಾರಣ ತಾಳ್ಮೆಗಾಗಿ, ಆ ಸಮಿತಿಗಳಲ್ಲಿ ಕಾರ್ಯ ನಿರ್ವಹಿಸುವ ಗೌರವ ಪಡೆದಂಥ ಒಬ್ಬ ಸದಸ್ಯನಾಗಿ ನಾನವರನ್ನು ಪ್ರಶಸಂಸಿಸುತ್ತೇನೆ. ಮಾನ್ಯ ಅಧ್ಯಕ್ಷರೆ, ತಾವು ಗಮನ ನೀಡುತ್ತೀರೆಂದು ನಿರೀಕ್ಷಿಸಿ, ನಾನು ಹೇಳುವುದೇನೆಂದರೆ, ಈ ಜಂಟಿ ಸಮಿತಿಗಳ ದೀರ್ಘ ಹಾಗೂ ಪ್ರಯಾಸಕರ ಸಭೆಗಳೇ ಅಲ್ಲದೆ, ಮಾನ್ಯ ಗೃಹ ಸಚಿವರು ನಮ್ಮಲ್ಲಿನ ಕೆಲವರನ್ನು ಖಾಸಗೀ ಮಾತುಕತೆಗಳಿಗಾಗಿ ಪದೇ ಪದೇ ಆಹ್ವಾನಿಸುವ ಎಚ್ಚರ ವಹಿಸುತ್ತಿದ್ದರು. ಒಂದೇ ಒಂದು ಕಾರಣದಿಂದ ಅಂದರೆ, ಇವೆಲ್ಲವೂ ದಾಖಲೆಗೆ ಹೋಗಬೇಕೆಂಬ ಇಚ್ಛೆಯಿಂದ ನಾನಿದನ್ನು ಹೇಳುತ್ತಿದ್ದೇನೆ. ಏಕೆಂದರೆ, ಅವರ ಆರೋಗ್ಯ ಚೆನ್ನಾಗಿರಲಿಲ್ಲ. ಸ್ವಲ್ಪ ಕಾಲ ಅವರು ತೀರಾ ಅನಾರೋಗ್ಯದಿಂದಿದ್ದರು ಆದರೂ ಅವರಲ್ಲಿದ್ದ ಕರ್ತವ್ಯ ಶ್ರದ್ಧೆ ಈಗೇನೂ ಅವರು ಸಾಧಿಸಿದ್ದಾರೋ ಅದನ್ನು ಸಾಧಿಸಲು

* ಸಂವಿಧಾನ (9ನೇ ತಿದ್ದುಪಡಿ) ವಿಧೇಯಕದ ಮೇಲಿನ ಚರ್ಚೆಯಿಂದ: ಲೋಕಸಭಾ 4ನೇ ಸೆಪ್ಟಂಬರ್ 1956. ಸಿ.ಸಿ. 55 22-38

ಪ್ರೇರೇಪಿಸಿತು. (.........) ಮಾನ್ಯ ಗೃಹ ಸಚಿವರ ಪ್ರತಿಪಾದನೆ ಯಾವತ್ತೂ ವಿವೇಚನೆಯಿಂದ ಕೂಡಿರುತ್ತಿತ್ತು. ಅವರು ಸೌಮ್ಯ ರೀತಿಯಿಂದ ಮನವರಿಕೆ ಮಾಡಿಕೊಡುತ್ತಿದ್ದ ಧಾಟಿ ಅವರ ಮಾರ್ಗದರ್ಶನದ ಸಂಕೇತವಾಗಿತ್ತು. ಅವರ ಮೇಲೆ ನಾವು ಪದೇ ಪದೇ ಮಾಡುತ್ತಿದ್ದ ಮಾತಿನ ದಾಳಿ ಸಹಿಸಿಕೊಳ್ಳುತ್ತ ನಮ್ಮಲ್ಲಿನ ಕೆಲವರು ಅವರ ಜೊತೆ ಚರ್ಚೆಯಲ್ಲಿ ತೊಡಗಿದ್ದಾಗ ನಮ್ಮಲ್ಲಿ ಆತ್ಮವಿಶ್ವಾಸ ಮೂಡಿಸಲು ಅವರು ತೋರುತ್ತಿದ್ದ ನಿಜವಾದ ಕಳಕಳಿ ನಮ್ಮನ್ನು ಮೂಕವಿಸ್ಮಿತರನ್ನಾಗಿಸುತ್ತಿತ್ತು. ಪ್ರಾಯಶಃ ಅಂಥ ಆತ್ಮವಿಶ್ವಾಸ ನಮ್ಮಲ್ಲಿರಲಿಲ್ಲವೆಂದು ಹೇಳಿದರೆ ತಪ್ಪೇನಾಗಲಾರದು.

ರಾಜ್ಯಗಳ ಪುನರ್ವಿಂಗಡಣೆಯ ಪ್ರಕ್ರಿಯೆಗಳು ಈಗಾಗಲೇ ಅಂತಿಮ ಘಟ್ಟದಲ್ಲಿದ್ದು, ಸದನ ವಿಧೇಯಕವನ್ನು ಅನುಮೋದಿಸುತ್ತಿರುವ ದಿನದಂದು ಕೂಡ ನನಗೆ ಕೆಲವು ಸಂಶಯಗಳಿವೆ. ಅಖಿಲ ಭಾರತ ಭಾಷಾವಾರು ರಾಜ್ಯಗಳ ಸಮ್ಮೇಳನದ ಅಧ್ಯಕ್ಷನಾಗಿ ಸತತ ನಾಲ್ಕು ವರ್ಷಗಳ ಸೇವೆ ಸಲ್ಲಿಸುವ ಸದಾವಕಾಶ ನನಗೆ ಒದಗಿಬಂದ ಹಿನ್ನೆಲೆಯಲ್ಲಿ ಹಾಗೂ ಭಾಷಾವಾರು ರಾಜ್ಯಗಳ ಪುನರ್ವಿಂಗಡನೆ ಸಮಸ್ಯೆಯ ಜೊತೆ ನನಗಿರುವ ಹಲವು ವರ್ಷಗಳ ನಿರಂತರ ಮತ್ತು ನಿಕಟ ಸಂಬಂಧದ ಆಧಾರದ ಮೇಲೆ ನನಗಿನ್ನೂ ಸಂಶಯಗಳಿವೆ ಎನ್ನುವುದನ್ನು ಹೇಳಬಯಸುತ್ತೇನೆ. ಕೇವಲ ಸಂಶಯಪಡುವಂಥ ವ್ಯಕ್ತಿಯಾಗಿ, ಇಲ್ಲಿಗೇ ಅದನ್ನು ಕೈಬಿಡಲು ನಾನು ಇಚ್ಛಿಸುವುದಿಲ್ಲ. ಆದರೆ, ಈ ಸದನ ಪ್ರಸ್ತುತ ವಿಧೇಯಕವನ್ನು ಅನುಮೋದಿಸುವ ಪೂರ್ವದಲ್ಲಿ, ನಾನೀಗ ಸಂಕ್ಷಿಪ್ತವಾಗಿ ಮಂಡಿಸುವಂಥ ಐದು ಪ್ರಸ್ತಾವನೆಗಳು ಅವರ ಮನವೊಲಿಸುತ್ತವೆಂದು ನಾನು ಭಾವಿಸುತ್ತೇನೆ.

ರಾಜ್ಯಗಳ ಪುನರ್ವಿಂಗಡನಾ ವಿಧೇಯಕ ಹಾಗೂ ಸಂವಿಧಾನ ತಿದ್ದುಪಡಿ ವಿಧೇಯಕಗಳ ಮೇಲಿನ ಜಂಟೀ ಸಮಿತಿಗಳ ಸಭೆಗಳಲ್ಲಿ, ಬಹುತೇಕ ಸದಸ್ಯರು ತಮ್ಮ ಪಕ್ಷಭೇದ ಮರೆತು ಗಡಿ ಆಯೋಗದ ಪ್ರಶ್ನೆಯನ್ನು ಪ್ರಸ್ತಾಪಿಸಿದರು. ಈ ಸದನದಲ್ಲಿ ರಾಜ್ಯಗಳ ಪುನರ್ವಿಂಗಡನಾ ವಿಧೇಯಕದ ಮೇಲೆ ಚರ್ಚೆಯಾಗುತ್ತಿದ್ದಾಗ ಈ ಸಮಸ್ಯೆಯನ್ನು ಆದಷ್ಟೂ ಸಂಪೂರ್ಣವಾಗಿ ಬಗೆಹರಿಸಲು ಈ ವಿಧೇಯಕವನ್ನು ಕೈಗೆತ್ತಿಕೊಂಡ ಸಮಯದಲ್ಲಿಯೂ ಸಹ ಏನನ್ನಾದರೂ ಮಾಡಬಹುದಾಗಿದೆ ಎನ್ನುವಂಥ ಭರವಸೆಗಳು ಮೂಡಿಬಂದವು. ನೆಪಮಾತ್ರಕ್ಕೆ ಇವುಗಳನ್ನು ಮಾನ್ಯ ಗೃಹ ಸಚಿವರು ನೀಡಿದರು ಎಂದು ನಾನು ಹೇಳುವುದಿಲ್ಲ ಹಾಗೂ ಆ ರೀತಿ ನಾನು ಹೇಳುತ್ತಲೂ ಇಲ್ಲ. ಕೇವಲ ಎರಡೇ ಎರಡು ಹೇಳಿಕೆಗಳನ್ನು ಇಲ್ಲಿ ಹೇಳುವುದರ ಹೊರತು, ಈ ಹಿಂದೆ ಮಾಡಲಾದ ವಾದಗಳನ್ನೇ ಪುನಃ ಉಚ್ಚರಿಸಲು ಇಚ್ಛಿಸುವುದಿಲ್ಲ. ಮಾನ್ಯ ಗೃಹ ಸಚಿವರು, ರಾಜ್ಯಗಳ ಪುನರ್ವಿಂಗಡಣಾ ವಿಧೇಯಕದ ಮೇಲಿನ ತಿದ್ದುಪಡಿಗಳ ಪಟ್ಟಿಯನ್ನು ಮತ್ತೊಮ್ಮೆ ಪಡೆದು ಅವುಗಳನ್ನು ಇನ್ನೊಮ್ಮೆ ಅವಲೋಕಿಸಿದರೆ, ಕಾಂಗ್ರೆಸ್ ಸದಸ್ಯರೂ ಒಳಗೊಂಡಂತೆ ಹೆಚ್ಚಿನ ಸಂಖ್ಯೆಯ ಸದಸ್ಯರು ಗಡಿ ಆಯೋಗಕ್ಕಾಗಿ ಬೇಡಿಕೆ ಅಥವಾ ಸಲಹೆ ಸೂಚನೆಗಳನ್ನು ಸೂಚಿಸಿ ತಿದ್ದುಪಡಿ ಪ್ರಸ್ತಾವನೆಗಳನ್ನು ಮಂಡಿಸಿರುವುದು ಈ ಸದನದ ಅಧಿಕೃತ ದಾಖಲೆಯಿಂದ ಅವರಿಗೆ ತಿಳಿದು ಬರುತ್ತದೆ. ಸಂವಿಧಾನ ತಿದ್ದುಪಡಿ ವಿಧೇಯಕವನ್ನು

ಇತ್ಯರ್ಥಗೊಳಿಸುತ್ತಿರುವ ಈ ಸಮಯದಲ್ಲಿ ಆಂಧ್ರ ಮತ್ತು ಮದ್ರಾಸ್ ಸರ್ಕಾರಗಳ ಮಧ್ಯೆ ಉದ್ಭವವಾದ ಸೂಕ್ಷ್ಮ ಹಾಗೂ ಗಹನವಾದ ಪರಿಸ್ಥಿತಿಯನ್ನು ನನಗೆ ಅನುಮತಿ ನೀಡಿದಲ್ಲಿ, ಹೇಳಲು ಇಚ್ಛಿಸುತ್ತೇನೆ. ಮದ್ರಾಸ್ ಹಾಗೂ ಆಂಧ್ರ ರಾಜ್ಯಗಳ ನಡುವೆ, ಆಗ ಜೀವಂತವಿದ್ದ ಹಾಗೂ ಈಗಲೂ ಜೀವಂತವಾಗಿರುವ ಗಡಿ ವಿವಾದಗಳ ಬಗ್ಗೆ ಆಂಧ್ರ ಪ್ರದೇಶದ ರಾಜ್ಯಪಾಲರು ಪ್ರಸ್ತಾಪಿಸಿದರು ಎಂದು ಅವರ ಹೆಸರನ್ನು ಹೇಳುತ್ತ ಮದ್ರಾಸ್ ವಿಧಾನಸಭೆಯಲ್ಲಿ, ಸಭಾ ನಾಯಕರು ಆಂಧ್ರ ಪ್ರದೇಶ ಸರ್ಕಾರವನ್ನು ಚುಚ್ಚಿ ಮಾತನಾಡಿದ ಒಂದು ಅಸಮಾನ್ಯ ಘಟನೆ ಕಳೆದ ತಿಂಗಳ 14ನೇ ದಿನಾಂಕದಂದು ನಡೆದುಹೋಯಿತು. ಮದ್ರಾಸ್ ವಿಧಾನಸಭೆಯ ಸಭಾ ನಾಯಕರಾದ ಶ್ರೀ ಸುಬ್ರಹ್ಮಣ್ಯಂರವರು ಹೇಳಲಾದ ಹೇಳಿಕೆ ಹಾಗೂ ಆ ಹೇಳಿಕೆಗೆ ಉತ್ತರ ರೂಪದಲ್ಲಿ ಆಂಧ್ರದ ಮುಖ್ಯ ಮಂತ್ರಿ ಶ್ರೀ ಗೋಪಾಲರೆಡ್ಡಿ ಅವರು ನೀಡಿದ ಹೇಳಿಕೆಗಳ ಎರಡು ಉದ್ಧೃತ ಭಾಗಗಳನ್ನು ಸಂಕ್ಷಿಪ್ತವಾಗಿ ಇಲ್ಲಿ ದಾಖಲಿಸಲು ಇಚ್ಛಿಸುತ್ತೇನೆ.

ಆಗಸ್ಟ್ 14ರಂದು, ವಾಸ್ತವವಾಗಿ ಚರ್ಚೆ ಆಗಸ್ಟ್ 13 ರಂದೇ ನಡೆದಿದ್ದು, ಆಗಸ್ಟ್ 14ರ 'ಹಿಂದೂ' ಪತ್ರಿಕೆಯಿಂದ ಇದನ್ನು ಉದಾಹರಿಸುತ್ತಿದ್ದು, ಅಲ್ಲಿ ಶ್ರೀ ಸುಬ್ರಹ್ಮಣ್ಯವರು ಹೇಳುತ್ತಾರೆ:

> "ನಾನು ಯಾರನ್ನೂ ದೂಷಿಸುತ್ತಿಲ್ಲ, ಆದರೆ ರಾಜ್ಯಪಾಲರ ಭಾಷಣದ ವಿಷಯ ಕುರಿತಂತೆ ನಾವು ಇದುವರೆಗೂ ಯಾವುದೇ ಸಂಪ್ರದಾಯವನ್ನು ಪಾಲಿಸಿಕೊಂಡು ಬಂದಿಲ್ಲದಿರುವುದರಿಂದ ನಮಗಿದೊಂದು ದೊಡ್ಡ ಪಾಠವಾಗಲಿದೆ. ವಿಶೇಷವಾಗಿ ಒಂದು ವಿಷಯ ಅಂತರ ರಾಜ್ಯ ವಿವಾದದ ವಿಷಯವಾಗಿದ್ದು ಅದಿನ್ನೂ ಪತ್ರ ವ್ಯವಹಾರ ಮತ್ತು ಮಾತುಕತೆಗಳ ಹಂತದಲ್ಲಿಯೇ ಇದ್ದಲ್ಲಿ, ಅಂಥ ವಿಷಯವನ್ನು ಸರ್ಕಾರದ ನೀತಿಯ ವಿಷಯವಾಗಿ ರಾಜ್ಯಪಾಲರ ಭಾಷಣದಲ್ಲಿ ಸೇರಿಸುವುದು ಖಂಡಿತವಾಗಿಯೂ ತೊಂದರೆಗಳಿಗೆ ಅವಕಾಶ ಮಾಡಿಕೊಟ್ಟಂತಾಗುತ್ತದೆ".

ವಿಧಾನ ಮಂಡಲದ ಅಧಿವೇಶನವನ್ನು ಉದ್ದೇಶಿಸಿ ಕರ್ನೂಲಿನಲ್ಲಿ ಸನ್ಮಾನ್ಯ ರಾಜ್ಯಪಾಲರು ಮಾಡಿದ ಭಾಷಣದಲ್ಲಿ ವಿಶೇಷವಾಗಿ ಆಂಧ್ರ - ಮದ್ರಾಸ್ ಗಡಿ ವಿವಾದಗಳ ಸಮಸ್ಯೆ ಕುರಿತು ಉಲ್ಲೇಖಿಸಿರುವುದು ಅಂತರ ರಾಜ್ಯ ಮರ್ಯಾದೆಯ ಎಲ್ಲೆಗಳನ್ನು ಮೀರಿರುವ ಕ್ರಮವೆಂದು ಶ್ರೀ ಸುಬ್ರಹ್ಮಣ್ಯಂರವರು ಹೇಳಿದ್ದಾರೆ.

ಶ್ರೀ ಸುಬ್ರಹ್ಮಣ್ಯಂರವರು ಮುಂದುವರಿಸುತ್ತಾ ಹೇಳುತ್ತಾರೆ, ನಾನದನ್ನು ಪುನಃ ಉದಾಹರಿಸುತ್ತೇನೆ:

> "ಈ ವಿವಾದವು ಮೂರು ವರ್ಷಗಳಿಂದ ಇತ್ಯರ್ಥವಾಗದೇ ಹಾಗೆಯೇ ಉಳಿದಿದೆ".

ಶ್ರೀ ಗೋಪಾಲರೆಡ್ಡಿಯವರು ಆಗಸ್ಟ್ 17ರಂದು ಆಂಧ್ರ ವಿಧಾನಸಭೆಯಲ್ಲಿ ಇದಕ್ಕೆ ಉತ್ತರ ನೀಡಿದರು:

"ಇಂಥ ಎಲ್ಲಾ ಗಡಿ ಸಮಸ್ಯೆಗಳನ್ನು ಇತ್ಯರ್ಥಪಡಿಸಲು ಏಕರೂಪ ನೀತಿಯನ್ನು ರೂಪಿಸುವುದು ಒಳ್ಳೆಯದೆಂದು ಭಾರತ ಸರ್ಕಾರಕ್ಕೆ ನಾವು ಆ ಕಾರಣಕ್ಕಾಗಿ ತಿಳಿಸಿದ್ದೇವೆ".

ಆಂಧ್ರ ವಿಧಾನಸಭೆಗೆ ನೀಡಿದ ಹೇಳಿಕೆ ಪ್ರಕಾರ ಆಂಧ್ರ ಸರ್ಕಾರವು, ಭಾರತ ಸರ್ಕಾರಕ್ಕೆ ಬರೆದು ತಿಳಿಸಿದೆ ಎಂಬುದನ್ನು ಮಾನ್ಯ ಗೃಹ ಸಚಿವರು ಒಪ್ಪಿಕೊಳ್ಳುವರೆಂದು ನಾನು ಭಾವಿಸುತ್ತೇನೆ.

ಒಂದು ಕಾರಣದಿಂದ ನಾನಿದನ್ನು ಹೇಳುತ್ತಿದ್ದೇನೆ. ಅಂದರೆ, ಈ ಸದನದಲ್ಲಿ ನಾನು ಪದೇ ಪದೇ ಹೇಳಿದಂತೆ ಹಾಗೂ ಅದೇ ಪ್ರಕಾರ ಅನೇಕ ಬಾರಿ ಜಂಟಿ ಸಮಿತಿಯಲ್ಲೂ ಪ್ರಸ್ತಾಪಿಸಿದಂತೆ ಈ ಗಡಿ ವಿವಾದಗಳು ದ್ವಿಪಕ್ಷೀಯ ಮಾತುಕತೆಗಳ ಮೂಲಕ ಬಗೆಹರಿಯುವಂಥವುಗಳಲ್ಲ. ಈ ಗಡೀ ಸಮಸ್ಯೆಯನ್ನು ಬಗೆಹರಿಸಲು ಆಂಧ್ರ ಮತ್ತು ಮದ್ರಾಸ್ ಸರ್ಕಾರಗಳು ಸತತವಾಗಿ ಮೂರು ವರ್ಷಗಳಿಂದ, ಉನ್ನತ ಮಟ್ಟದಲ್ಲಿ ಹಾಗೆಯೇ ವಿವಿಧ ಮಟ್ಟಗಳಲ್ಲಿ ಪ್ರಯತ್ನಪಟ್ಟಿವೆ. ಆದರೂ, ಅವುಗಳು ಒಂದು ಒಮ್ಮತದ ಅಬಿಪ್ರಾಯಕ್ಕೆ ಬರಲು ಸಾಧ್ಯವಾಗದೇ ತಮ್ಮ ಅಸಹಾಯಕತೆಯನ್ನು ಒಪ್ಪಿಕೊಂಡಿವೆ. ಹೀಗಾಗಿ ಆ ಎರಡೂ ರಾಜ್ಯಗಳು ಒಂದು ಆಯೋಗದ ಸ್ಥಾಪನೆಗಾಗಿ ಸರ್ವಾನುಮತದಿಂದ ಒತ್ತಾಯಿಸಿವೆ. ಮೈಸೂರು ಸರ್ಕಾರವೂ ಕೂಡ ಇತ್ತೀಚೆಗೆ ಒಂದು ಆಯೋಗವನ್ನು ರಚಿಸುವಂತೆ ಕೇಳಿಕೊಂಡಿದೆ.

ಅನೇಕ ಬಾರಿ ಹೇಳಿದಂತೆ, ರಾಜ್ಯ ಪುನರ್ವಿಂಗಡನಾ ವಿಧೇಯಕದಲ್ಲಿ ಈಗಾಗಲೇ ವಲಯ ಪರಿಷತ್ತುಗಳನ್ನು ಕಲ್ಪಿಸಲಾಗಿದೆ ಎಂದು ಗೃಹ ಸಚಿವರು ಹೇಳಿಬಿಡುತ್ತಾರೆ. ಒಂದೇ ರಾಜಕೀಯ ಪಕ್ಷಕ್ಕೇ ಸೇರಿದ ಹಾಗೂ ತಮ್ಮ ಜೀವನದ ಬಹು ಮುಖ್ಯ ಭಾಗವನ್ನು ಕಾಂಗ್ರೆಸ್ ಚಳುವಳಿಯಲ್ಲಿ ಮತ್ತು ದೇಶಭಕ್ತ ಚಳುವಳಿಯಲ್ಲಿ ಸಹಪಾಠಿಗಳಾಗಿದ್ದಂಥ ಜನರಿಂದ ನಡೆಯುತ್ತಿರುವ ಎರಡು ಸರ್ಕಾರಗಳು ಒಮ್ಮತದ ತೀರ್ಮಾನಕ್ಕೆ ಬರಲು ಸಾಧ್ಯವಾಗದಿರುವ ಪ್ರಕರಣ ನಮ್ಮ ಮುಂದಿದೆ. ಸಂವಿಧಾನದ ಅನುಚ್ಛೇದ 3 ಅಥವಾ 4ನ್ನು ಜಾರಿಗೊಳಿಸಿ ಗಡಿ ಆಯೋಗವನ್ನು ರಸಿಸುತ್ತಾರೆಯೇ ಎಂದು ಅವರನ್ನು ಕೇಳುತ್ತೇನೆ. ಇಲ್ಲದಿದ್ದಲ್ಲಿ, ಅವರು ಈ ಸಮಸ್ಯೆಯನ್ನು ಯಾವ ರೀತಿಯಲ್ಲಿ ಬಗೆಹರಿಸಲು ಉದ್ದೇಶಿಸಿದ್ದಾರೆ? ಈ ರಾಷ್ಟ್ರದ ವಿವಿಧ ರಾಜ್ಯಗಳ ಮಧ್ಯೆ ಇರುವ ಗಡಿ ವಿವಾದಗಳನ್ನು ಸ್ಥಗಿತಗೊಳಿಸುವಂಥ ಒಂದು ವಾತಾವರಣವನ್ನು ಕಲ್ಪಿಸಬಲ್ಲೆ ಎಂಬ ಸ್ಥೈರ್ಯದಿಂದ ವಲಯ ಪರಿಷತ್ತುಗಳು ಒಟ್ಟಿಗೆ ಸಭೆ ಸೇರುವವರೆಗೆ ನಿರೀಕ್ಷೆ ಮಾಡಬೇಕೆಂದು ಈ ಎರಡು ಸರ್ಕಾರಗಳನ್ನೂ ಅವರು ಕೇಳುತ್ತಾರೆಯೇ? ಇದು ಅವರ ಕಾರ್ಯ ಯೋಜನೆಯೇ ಹೇಗೆ?

ಈ ಕಾರಣದಿಂದಾಗಿಯೇ ಈ ಸದನ, ಈ ವಿವಾದ ಕುರಿತಂತೆ ದಾಖಲೆಗಳಿಂದ ಉದಾಹರಿಸಲು ಇಷ್ಟೊಂದು ಅವಕಾಶವನ್ನು ನನಗೆ ಕೊಟ್ಟಿದೆ ಎಂದು ಭಾವಿಸುತ್ತೇನೆ.

ಯಾವುದೇ ರೀತಿಯಲ್ಲಾದರೂ ಸರಿಯೇ ಗಡಿ ಆಯೋಗವನ್ನು ಶಾಸನಾತ್ಮಕವಾಗಿ ರಚಿಸದೇ ಇದ್ದಲ್ಲಿ, ಆ ಸಮಸ್ಯೆಗಳ ಯಾವ ಪ್ರಶ್ನೆಯನ್ನೂ ಸದ್ಭಾವನೆಯಿಂದ ಪರಸ್ಪರ ಒಪ್ಪಿಗೆಯಾಗುವಂತೆ . ಬಗೆಹರಿಸಲು ಸಾಧ್ಯವಾಗುವುದಿಲ್ಲವೆಂದು ಪುನಃ ನಾನು ಹೇಳಲು ಇಚ್ಛಿಸುತ್ತೇನೆ. ಈ ಬಗ್ಗೆ ನನ್ನ ಸ್ನೇಹಿತರಾದ ಮಾನ್ಯ ಗೃಹ ಸಚಿವರಿಗಿರುವ ಭಾವನೆಯನ್ನು ಹಂಚಿಕೊಳ್ಳಲು ನಾನು ಸಿದ್ಧನಿದ್ದೇನೆ. ಆದರೆ ಗಡಿ ಆಯೋಗದ ಒಂದು ನಿರ್ದಿಷ್ಟ ಅಂಶದ ಬಗ್ಗೆ ರಾಜ್ಯ ಪುನರ್ವಿಂಗಡನಾ ವಿಧೇಯಕ ಹಾಗೂ ಪ್ರಸ್ತುತದ ವಿಧೇಯಕ ಇವೆರಡರ ನಡುವೆ ಅದನ್ನು ಸರಿಪಡಿಸಿಕೊಳ್ಳಬೇಕಾಗಿದೆ. ಗಡಿ ವಿವಾದಗಳಿರುವಂಥ ಈ ದೇಶದ ಅನೇಕ ಭಾಗಗಳಲ್ಲಿ, ಸ್ಥಳೀಯ ಭಾವನೆಗಳನ್ನು ಕೆರಳಿಸುವಂಥ ಕಹಿ ವಾತಾವರಣವನ್ನು ಮೂಡಿಸುವಂಥ ಅಥವಾ ನಾಗರೀಕ ಯುದ್ಧದ ವಾಸ್ತವತೆಯನ್ನು ಪ್ರಚೋದಿಸುವಂಥ, ಯಾವುದೇ ಕಾರ್ಯವನ್ನು ನಾವ್ಯಾರೂ ಮಾಡುವುದಿಲ್ಲ. ಈ ಅಂಶವನ್ನು ಮಾನ್ಯ ಗೃಹ ಸಚಿವರೂ ಒಪ್ಪುತ್ತಾರೆ. ಪ್ರಚಲಿತದಲ್ಲಿರುವ ಈ ಸಮಸ್ಯೆಯ ಬಗ್ಗೆ ಕಣ್ಣುಮುಚ್ಚಿ ಕುಳಿತರೆ ಸಮಸ್ಯೆ ಬಗೆಹರಿಯುವುದಿಲ್ಲ. ಈ ಪ್ರಶ್ನೆಯನ್ನು ಪುನಃ ಇಲ್ಲಿ ಪ್ರಸ್ತಾಪಿಸಲು ನಮಗೆ ಮತ್ತೊಮ್ಮೆ ಅವಕಾಶಗಳು ಸಿಗದೇ ಇರುವುದರಿಂದ ಈ ಸಮಸ್ಯೆಯನ್ನು ಮಾನ್ಯ ಸಚಿವರು ಪರಿಗಣಿಸಿ ನಮ್ಮ ಮುಂದಿರುವ ವಿಧೇಯಕಕ್ಕೆ ಕೊನೇಕ್ಷಣದಲ್ಲಾದರೂ ತಿದ್ದುಪಡಿ ತರುವರೆಂದೂ ಅಥವಾ ಸಂವಿಧಾನದ ಅನುಚ್ಛೇದ 3 ಮತ್ತು 4 ಗಳನ್ನು ಜಾರಿಗೊಳಿಸಿ, ಈ ರಾಷ್ಟ್ರಕ್ಕಿರುವ ಹಕ್ಕಿಗನುಸಾರ ಆಯೋಗವನ್ನು ರಚಿಸಿ ಈ ಸಮಸ್ಯೆಯನ್ನು ಇತ್ಯರ್ಥಗೊಳಿಸುವರೆಂಬ ವಿಶ್ವಾಸ ನನಗಿದೆ. ನಾನು ಆಂಧ್ರದವನೆಂದು ಇದನ್ನು ಹೇಳುತ್ತಿಲ. ಅಖಿಲ ಭಾರತ ಭಾಷಾವಾರು ರಾಜ್ಯಗಳ ಸಮ್ಮೇಳನದ ಅಧ್ಯಕ್ಷನಾಗಿದ್ದ ನಾನು ಸ್ಥ[illegible]ು ಅಥವಾ ಪ್ರಾಂತೀಯತೆ ಭಾವನೆಯಿಂದ ದೂರವಿರುವುದು ಈ ಸದನಕ್ಕೆ ಗೊತ್ತಿರುವುದರಿಂದ ನಾನು ಈ ಬಗ್ಗೆ ತಮಗೆ ಭರವಸೆ ನೀಡುತ್ತಿದ್ದೇನೆ.

ಭಾಷಾ ಅಲ್ಪಸಂಖ್ಯಾತರ ಸಮಸ್ಯೆಯನ್ನು ಕುರಿತಂತೆ ಮಾನ್ಯ ಗೃಹ ಸಚಿವರು ಸದನದಲ್ಲಿ ಮಂಡಿಸಿದ ಹೇಳಿಕೆಯನ್ನು ಓದಿದ್ದೇನೆ. ಈ ಹೇಳಿಕೆಯನ್ನು ಸಂಕ್ಷಿಪ್ತವಾಗಿ ಪರಿಶೀಲಿಸಿದ ನಂತರ, ನನಗೆ ಹೇಳಿಕೆ ಬಗ್ಗೆ ಸ್ವಲ್ಪಮಟ್ಟಿಗೆ ನಿರಾಸೆಯಾಗಿದೆ. ಅಲ್ಪ ಸಂಖ್ಯಾತರ ರಕ್ಷಣೆಗಾಗಿ ಭಾರತ ಸರ್ಕಾರ ಜಾರಿಗೊಳಿಸಲು ಉದ್ದೇಶಿಸಿರುವ ಕ್ರಮಕ್ಕೆ ಇನ್ನೂ ಹೆಚ್ಚಿನ ಬಲವನ್ನು ನೀಡಬಹುದಿತ್ತೆಂದು ನಾನು ನಿರೀಕ್ಷಿಸಿದ್ದೆ.

ಭಾರತೀಯ ನಾಗರೀಕರಿಗೆ ಒಂದೇ ರೀತಿಯ ಸಮನಾದ ನಾಗರೀಕತ್ವ ಲಭ್ಯವಾಗದಿರುವ ವಿಷಾದನೀಯ ಪರಿಸ್ಥಿತಿ ದೇಶದ ವಿವಿಧ ಭಾಗಗಳಲ್ಲಿ ಇದೆ ಎಂಬ ಅಂಶವನ್ನು ಮಾನ್ಯ ಗೃಹ ಸಚಿವರು ಅಲ್ಲಗಳೆಯಲಾರರು. ಸಂಬಂಧಪಟ್ಟ ರಾಜ್ಯ ಸರ್ಕಾರಗಳ ನೇರ ಆಡಳಿತದ ಕ್ರಮಗಳಿಂದಾಗಿ ಎರಡನೇ ಅಥವಾ ಅದಕ್ಕಿಂತಲೂ ಕೆಳದರ್ಜೆಯ ನಾಗರೀತ್ವದ ಸ್ಥಿತಿ ಉಂಟಾಗಿದೆ. ಅಲ್ಪ ಸಂಖ್ಯಾತರ ಜೀವನದ ಅನಿಶ್ಚಿತತೆಗೆ ಕಾರಣವಾಗಿರುವಂಥ ಯಾವ ಒಂದು ರಾಜ್ಯವೂ ಈ ದೇಶದಲ್ಲಿ ಇಲ್ಲ. ತಮಿಳು ಅಲ್ಪಸಂಖ್ಯಾತರ ಬಗ್ಗೆ ಆಂಧ್ರ ಸರ್ಕಾರ ಅನುಸರಿಸುತ್ತಿರುವ ಧೋರಣೆಯನ್ನು ಸದನದ ಗಮನಕ್ಕೆ ತರುತ್ತೇನೆ. ಮಾನ್ಯ ಅಧ್ಯಕ್ಷರೆ,

ತಮ್ಮ ಮತಕ್ಷೇತ್ರದ ಅತೀ ಸಮೀಪದಲ್ಲಿಯೇ ಇಂಥ ತೊಂದರೆಗಳಿವೆ. ಇದೇ ರೀತಿಯ ಪರಿಸ್ಥಿತಿ ಒರಿಸ್ಸಾದಲ್ಲಿಯೂ ಇದೆ. ಸುಮಾರು ಒಂದೂಕಾಲು ಮಿಲಿಯನ್ ಆಂಧ್ರ ಅಲ್ಪಸಂಖ್ಯಾತರ ಬಗ್ಗೆ ಒರಿಸ್ಸಾ ಸರ್ಕಾರ ನಡೆದುಕೊಳ್ಳುತ್ತಿರುವ ರೀತಿಯನ್ನು ಇಲ್ಲಿ ಜ್ಞಾಪಿಸುತ್ತಾ, ಆ ಅಲ್ಪಸಂಖ್ಯಾತರಿಗೆ ಭರವಸೆಯನ್ನು ನೀಡುವ ದೃಷ್ಟಿಯಿಂದ ಇದನ್ನು ಪ್ರಸ್ತಾಪಿಸಿದ್ದೇನೆ. ಈ ರೀತಿಯ ವರ್ತನೆಗಳಿಗೆ ಒಳಗಾಗಿರುವ ಅಲ್ಪಸಂಖ್ಯಾತರು ವಾಸಿಸುವ ಈ ದೇಶದ ಪ್ರತಿಯೊಂದು ಭಾಗದಲ್ಲಿ ಇಂಥ ಘಟನೆಗಳು ದ್ವಿಗುಣಗೊಳ್ಳುತ್ತಲೇ ಹೋಗಬಹುದಾಗಿದೆ. ಆದ್ದರಿಂದ ಮಾನ್ಯ ಗೃಹ ಸಚಿವರು ಈ ಸದನದಲ್ಲಿ ಮಂಡಿಸಿರುವ ಟಿಪ್ಪಣಿಯ ಮುಖಾಂತರ ಅನುಷ್ಠಾನಗೊಳಿಸಬೇಕೆಂದಿರುವ ರಾಜ್ಯ ಪುನರ್‌ವಿಂಗಡನಾ ಆಯೋಗದ ಶಿಫಾರಸುಗಳನ್ನು ನಾವೆಲ್ಲರೂ ಒಪ್ಪಲೇಬೇಕಾಗಿದೆ.

ಈ ಹಿಂದೆ, ಒಂದು ಸಂದರ್ಭದಲ್ಲಿ, ಅಲ್ಪಸಂಖ್ಯಾತ ಆಯುಕ್ತರ ನೇಮಕದ ಬಗ್ಗೆ ನಾನು ಮಾಡಿದ ಸಲಹೆಯನ್ನು ಮಾನ್ಯ ಗೃಹ ಸಚಿವರು ಒಪ್ಪಿರುವುದು ನನಗೆ ಸಂತೋಷ ತಂದಿದೆ. ಅಲ್ಪಸಂಖ್ಯಾತರ ಹಿತರಕ್ಷಣೆಯ ಬಗ್ಗೆ ಒಂದು ಮಾನಸಿಕ ಭದ್ರತೆಯ ವಾತಾವರಣವನ್ನು ಮೂಡಿಸುವಂಥ ಶಕ್ತಿ ಕೇವಲ ಕೇಂದ್ರಕ್ಕೆ ಮಾತ್ರ ಸಾಧ್ಯವಿದ್ದು, ಈ ನಿಟ್ಟಿನಲ್ಲಿ ಕೇಂದ್ರ ಒಂದು ನಿರ್ದಿಷ್ಟ ನಿರ್ದೇಶನವನ್ನು ನೀಡದಿದ್ದಲ್ಲಿ, ಈ ಸದನ ಹಾಗೂ ವಿಶಾಲವಾದ ಈ ರಾಷ್ಟ್ರ, ಮಾನ್ಯ ಗೃಹ ಸಚಿವರಿಂದ ಏನನ್ನು ನಿರೀಕ್ಷಿಸುತ್ತಿದೆಯೋ ಅದು ಈ ಉದ್ದೇಶಿತ ಕ್ರಮದಿಂದ ಸಫಲವಾಗುವುದೇ? ಎನ್ನುವ ಸಂದೇಹ ನನ್ನಲ್ಲಿದೆ.

ಈಗ ತಾನೆ ನಮಗೆ ನೀಡಲಾದ ಟಿಪ್ಪಣಿಯ 22ನೇ ಪ್ಯಾರಾದಲ್ಲಿ, ರಾಜ್ಯಗಳ ಪುನರ್ವಿಂಗಡನಾ ಆಯೋಗದ ವರದಿ ಸಂಖ್ಯೆ. 1 ರಲ್ಲಿರುವ ಪ್ಯಾರಾಗಳ ಒಂದು ಪ್ಯಾರಾವನ್ನು ಮಾನ್ಯ ಗೃಹ ಸಚಿವರು ಉಲ್ಲೇಖಿಸಿದ್ದಾರೆ. ಆ ಉಲ್ಲೇಖವನ್ನು (ಆಯೋಗದಲ್ಲಿರುವ ಪದಗಳನ್ನೇ) ಇಲ್ಲಿ ಉಲ್ಲೇಖಿಸುತ್ತಿದ್ದೇನೆ:

" ಯಾವ ಭರವಸೆಗಳೂ, ರಾಜ್ಯ ಸರ್ಕಾರದ ಪ್ರತಿಯೊಂದು ಬಗೆಯ ವ್ಯತ್ಯಾಸಾತ್ಮಕ ನೀತಿಯ ವಿರುದ್ಧ ಅಲ್ಪಸಂಖ್ಯಾತರಿಗೆ ಖಾತರಿ ನೀಡಲಾರವು ಎನ್ನುವುದನ್ನು ಇಲ್ಲಿ ಒತ್ತಿ ಹೇಳಲು ಇಚ್ಛಿಸುತ್ತೇವೆ".

ರಾಜ್ಯ ಪುನರ್ವಿಂಗಡನಾ ಆಯೋಗದ ಈ ಹೇಳಿಕೆ ಅತ್ಯಂತ ದುರದೃಷ್ಟಕರವೆಂದು ನಾನು ಪರಿಗಣಿಸುತ್ತೇನೆ. ರಾಜ್ಯ ಪುನರ್ವಿಂಗಡನಾ ಆಯೋಗದ ಈ ನಿರ್ದಿಷ್ಟ ಹೇಳಿಕೆಯನ್ನು ಮಾನ್ಯ ಗೃಹ ಸಚಿವರು ಟಿಪ್ಪಣಿಯಲ್ಲಿ ಅಳವಡಿಸಬಾರದಿತ್ತು. ರಾಜ್ಯ ಸರ್ಕಾರಗಳ ಮೇಲೆ ಅನ್ಯಥಾ ಆಪಾದನೆ ಮಾಡಲು ಮಾನ್ಯ ಸಚಿವರು ಪರವಾನಗಿ ಕೊಟ್ಟಂತಾಗಿದೆ. ಇಂಥ ಮನೋಧರ್ಮ ಸರಿಯಲ್ಲ. ಈ ಹೇಳಿಕೆಗೆ ಸಂಬಂಧಪಟ್ಟಂತೆ ಹೇಳುವುದಾದರೆ, ಇದು ವಿಧೇಯಕದ ಅಥವಾ ಜಂಟಿ ಸಮಿತಿಯ ವರದಿಯ ಭಾಗವಾಗದಿರುವುದರಿಂದ, ಈ ಟಿಪ್ಪಣಿಗೆ ಯಾವುದೇ ಶಾಸನಾತ್ಮಕ ಬಲ ಇಲ್ಲದಿರುವುದರಿಂದ ಹಾಗೂ ಅದೊಂದು ಆಶಯದ

ಹೇಳಿಕೆಯಾಗಿರುವುದರಿಂದ ಈಗಾಗಲೇ ಅದರಿಂದ ಆಗಿರುವ ಹಾನಿಯನ್ನು ಸರಿಪಡಿಸಲಾಗುವುದೆಂಬ ಭರವಸೆಯೂ ನನಗಿದೆ. ಯಾವುದನ್ನೂ ನಾನು ದುರುದ್ದೇಶದಿಂದ ಹೇಳುತ್ತಿಲ್ಲ. ಆದರೆ, ಈ ರಾಷ್ಟ್ರದ ವಿವಿಧ ಭಾಗಗಳಲ್ಲಿ ನೆಲೆಸಿರುವ ನಾಲ್ಕು ಕೋಟಿ ಭಾಷಾ ಅಲ್ಪಸಂಖ್ಯಾತರು ಈ ರಾಷ್ಟ್ರದಲ್ಲಿ ಎರಡನೇ ದರ್ಜೆ ನಾಗರೀಕರಾಗಿರದೇ ಮೊದಲನೇ ದರ್ಜೆ ನಾಗರೀಕರೆಂದು ಬದುಕುವ ಹಕ್ಕಿನ ಭರವಸೆಯನ್ನು ಪಡೆಯದ ವಿನಃ ಈಗ ಅಂತಿಮಗೊಳಿಸುತ್ತಿರುವ ಈ ಸಂವಿಧಾನ (9ನೇ ತಿದ್ದುಪಡಿ) ವಿಧೇಯಕದ ಮೂಲಕ ಬಗೆಹರಿಸಬೇಕೆಂದಿರುವ ಈ ರಾಜ್ಯಗಳ ಪುನರ್ವಿಂಗಡನೆಯ ಸಮಸ್ಯೆಗಳು ಪರಿಹಾರವಾಗುವುದಿಲ್ಲವೆಂಬ ಅಂಶವನ್ನಷ್ಟೆ ಹೇಳಲು ಇಚ್ಛಿಸುತ್ತೇನೆ. ಭಾಷಾ ಅಲ್ಪಸಂಖ್ಯಾತರ ಬಗ್ಗೆ ಆಡಳಿತಾತ್ಮಕ ತಾರತಮ್ಯಗಳಿವೆ. ಒರಿಸ್ಸಾದಿಂದ ಬಂದಿರುವ ನನ್ನ ಸ್ನೇಹಿತರು ನನ್ನ ಜೊತೆ ಜಗಳವಾಡುವುದಿಲ್ಲವಾದರೆ, ಅಲ್ಲಿಯ ಸ್ಥಳೀಯ ನ್ಯಾಯಾಲಯಗಳಲ್ಲಿ ಮಾತೃಭಾಷೆಯನ್ನು ಉಪಯೋಗಿಸಲು ಅವಕಾಶ ಕೊಡುತ್ತಿಲ್ಲ. ಅಲ್ಲಿಯ ಶಾಲೆಗಳಲ್ಲಿ ಮಾತೃಭಾಷೆಯನ್ನು ಶಿಕ್ಷಣ ಮಾಧ್ಯಮವಾಗಿ ಉಪಯೋಗಿಸಲು ಅವಕಾಶ ನೀಡುತ್ತಿಲ್ಲ. ಉದ್ಯೋಗಾವಕಾಶ ಸಂಬಂಧದಲ್ಲೂ ಅಲ್ಲಿ ಅನೇಕ ಆಡಳಿತಾತ್ಮಕ ನಿರ್ಬಂಧಗಳಿವೆ ಎಂದು ಹೇಳಬಯಸುತ್ತೇನೆ. ವಾಸಸ್ಥಳದ ಬಗ್ಗೆ ನಿಯಮಗಳನ್ನು ರೂಪಿಸಲಾಗಿದೆ. ಸದನದಲ್ಲಿ ಈಗ ಮಂಡಿಸಲಾದ ಟಿಪ್ಪಣಿಯ ಪ್ಯಾರಾಗಳಲ್ಲಿ ಒಂದಕ್ಕೆ, ಪ್ರಾಯಶಃ ನನಗನ್ನಿಸುವಂತೆ, ಪ್ಯಾರಾ 16ಕ್ಕೆ ಸಂಬಂಧಪಟ್ಟಂತೆ ಮಾನ್ಯ ಗೃಹ ಸಚಿವರು ಜಂಟಿ ಸಮಿತಿಯಲ್ಲಿ ನಮಗೆ ತಿಳಿಸಿದ್ದುದು ನನಗೆ ಸಂತೋಷವನ್ನು ತಂದಿದೆ. ವಾಸದ ಹಕ್ಕಿಗೆ ಸಂಬಂಧಪಟ್ಟಂತೆ ಹೇಳಲಾದ ಮಾದರಿಯಲ್ಲಿಯೇ ಪ್ರಸ್ತುತ ಶಂಕೆಯನ್ನು ನಿವಾರಿಸಲು ಭಾರತ ಸರ್ಕಾರ ಆದಷ್ಟು ಶೀಘ್ರದಲ್ಲಿಯೇ ಕಾನೂನನ್ನು ಜಾರಿಗೆ ತರಲು ಉದ್ದೇಶಿಸಿದೆ ಎಂದು ಅವರು ಹೇಳಿದರು. ಈ ರಾಷ್ಟ್ರದ ಯಾವುದೇ ಭಾಗದಲ್ಲಿ ಒಬ್ಬ ವ್ಯಕ್ತಿ ನಿರಂತರವಾಗಿ 12 ವರ್ಷಗಳವರೆಗೆ ನೆಲೆಸದಿದ್ದಲ್ಲಿ, ಅವನಿಗೆ ಮತ ಚಲಾಯಿಸುವ ಹಕ್ಕು ದೊರೆಯುವುದಿಲ್ಲವೆಂಬುದು ನನಗೆ ಗೊತ್ತಿದೆ. ಇವೆಲ್ಲಾ ಆಡಳಿತಾತ್ಮಕ ತೊಂದರೆಗಳು. ನಾನು ಹೇಳುವುದನ್ನು ನನ್ನ ಸ್ನೇಹಿತರು ಈಗ ಅರ್ಥ ಮಾಡಿಕೊಂಡಿರುವರೆಂದು ಭಾವಿಸುತ್ತೇನೆ. ಅತಿಯಾಗಿ ಈ ಅಂಶವನ್ನು ವಿಸ್ತರಿಸಲು ಇಚ್ಛಿಸುವುದಿಲ್ಲ. ಆದರೆ, ಇಲ್ಲಿರುವ ಆಡಳಿತಾತ್ಮಕ ನಿರ್ಬಂಧಗಳು, ನಮ್ಮ ರಾಷ್ಟ್ರದ ಎಲ್ಲೆಡೆ ನೆಲಸಿರುವ ಭಾಷಾ ಅಲ್ಪಸಂಖ್ಯಾತರನ್ನು ಎರಡನೇ ದರ್ಜೆ ನಾಗರೀಕರ ಮಟ್ಟಕ್ಕೆ ಇಳಿಸಿವೆ ಎಂಬುದನ್ನು ಮಾತ್ರ ಹೇಳುತ್ತೇನೆ. ಇದನ್ನು ಖಂಡಿಸುತ್ತೇನೆ. ಭಾಷಾ ಅಲ್ಪಸಂಖ್ಯಾತ ಆಯುಕ್ತರ ಹುದ್ದೆಯನ್ನು ಸೃಜಿಸದ ಹೊರತು, ಹಾಗೆಯೇ ಅವರು ರಾಷ್ಟ್ರವ್ಯಾಪಿ ಪ್ರವಾಸ ಮಾಡಲು ಅಗತ್ಯ ಅನುಕೂಲತೆಗಳನ್ನು ಕಲ್ಪಿಸಿ ಅವರು ಬಯಸುವ ಅಂಕಿ ಅಂಶಗಳು ಮತ್ತು ದಾಖಲೆಗಳನ್ನು ಒದಗಿಸದ ಹೊರತು, ಮತ್ತು ಈ ಬಗ್ಗೆ ಅವರು ರಾಷ್ಟ್ರಪತಿಗಳಿಗೆ ಸಲ್ಲಿಸುವ ವರದಿಯನ್ನು ಈ ಸದನದ ಸಮಗ್ರ ಚರ್ಚೆಗಾಗಿ ಈ ಸದನದಲ್ಲಿ ಮಂಡಿಸಿ, ಅದನ್ನು ಚರ್ಚಿಸಿದ ನಂತರ, ಅಲ್ಪ ಸಂಖ್ಯಾತ ಆಯುಕ್ತರ ವರದಿಯ ಬಗ್ಗೆ, ಈ ಸದನ ನೀಡುವ ಶಿಫಾರಸ್ಸುಗಳ ಹಿನ್ನೆಲೆಯಲ್ಲಿ

ಭಾರತ ಸರ್ಕಾರ ಅಂತಿಮ ನಿರ್ದೇಶನಗಳನ್ನು ನೀಡದ ಹೊರತು ಈ ರಾಷ್ಟ್ರದಲ್ಲಿ ಯಾವುದೇ ಒಂದು ಸಮಾಧಾನಕರ ಪರಿಸ್ಥಿತಿ ಉಂಟಾಗುವ ಭರವಸೆ ನನಗಿಲ್ಲವೆಂಬುದನ್ನು ಇಲ್ಲಿ ಹೇಳುತ್ತಿದ್ದೇನೆ.

ಸಂವಿಧಾನದ ಅನುಚ್ಛೇದ '350 ಬಿ' ಗೆ ಸಂಬಂಧಿಸಿದಂತೆ ಈಗ ತೆಗೆದುಕೊಳ್ಳಲಿರುವ ಉದ್ದೇಶಿತ ಕ್ರಮ, ಪ್ರಸ್ತುತ ತಿದ್ದುಪಡಿ ಮಾಡಲು ಹೊರಟಿರುವ ತಿದ್ದುಪಡಿ ಸಂಖ್ಯೆ 183 ರಿಂದ ವ್ಯಕ್ತವಾಗುತ್ತದೆ. ಆದರೆ, ಆ ಬಗ್ಗೆ ನನಗೆ ತೃಪ್ತಿ ಇಲ್ಲ. ಈ ಹಂತದಲ್ಲಿ, ಈ ಒಂದು ನಿರ್ದಿಷ್ಟ ತಿದ್ದುಪಡಿಯ ಬಗ್ಗೆ ವಿವರವಾಗಿ ಹೇಳಲು ನಾನು ಇಚ್ಛಿಸುತ್ತಿಲ್ಲ. ಆದ್ದರಿಂದ, ಮಾತು ಮುಂದುವರೆಸುತ್ತಿದ್ದೇನೆ.

ನಾನು ಪ್ರಸ್ತಾಪಿಸಲೇಬೇಕೆಂದಿರುವ ಮೂರನೇ ಅಂಶ ಕೇಂದ್ರಾಡಳಿತ ಪ್ರದೇಶಗಳಿಗೆ ಸಂಬಂಧಪಟ್ಟಿದೆ. ಕೇಂದ್ರಾಡಳಿತ ಪ್ರದೇಶಗಳ ಸಾರ್ವತ್ರಿಕ ಅಭಿಪ್ರಾಯ ಹಾಗೂ ಆ ಜನತೆಯ ತೀರ್ಮಾನಗಳು ಅವರಿಗೆ ಮಾರ್ಗದರ್ಶಕಗಳಾಗುತ್ತವೆ ಎಂಬುದನ್ನು ಮಾನ್ಯ ಗೃಹ ಸಚಿವರು ಹೇಳಿರುವುದು, ಅವರಿಗಿರುವ ಕಳಕಳಿಯನ್ನು ಮೇಲುನೋಟಕ್ಕೆ ಸಾಬೀತುಗೊಳಿಸುತ್ತದೆ. ಅಧಿಕಾರೇತರ ಸದಸ್ಯರನ್ನು ಸಲಹೆಗಾರರೆಂದು ಸರ್ಕಾರ ನೇಮಿಸುವುದು ಬಹುತೇಕ ಖಚಿತವಿರುವುದರಿಂದ, ಈ ಕೇಂದ್ರಾಡಳಿತ ಪ್ರದೇಶಗಳಿಗಾಗಿ ರೂಪಿಸಲಿರುವ ಆಡಳಿತಾತ್ಮಕ ಹಾಗೂ ಶಾಸನಾತ್ಮಕ ರೂಪರೇಷೆಗಳ ಅಂತಿಮ ಸ್ವರೂಪದಿಂದಾಗಿ ನಮ್ಮಲ್ಲಿನ ಕೆಲವರಿಗೆ ಬಹಳ ತೊಂದರೆಯಾಗುತ್ತದೆ. ಈ ಸಲಹೆಗಾರರ ಹಕ್ಕುಗಳು ಯಾವುವು? ಅವರ ಅಧಿಕಾರ ಮತ್ತು ಪ್ರಕಾರ್ಯಗಳೇನು? ಅವರಿಗೆ ಕೆಲವು ಖಾತೆಗಳು ಅಥವಾ ಇಲಾಖೆಗಳ ಕಾರ್ಯಭಾರಗಳನ್ನು ವಹಿಸಿಕೊಡಲಾಗುವುದೆ? ತೆರಿಗೆಗಳನ್ನು ವಿಧಿಸುವ ಮತ್ತು ವೆಚ್ಚ ಮಾಡುವ ಅಧಿಕಾರಗಳು ಅವರಿಗೆ ಇರುತ್ತವೆಯೆ? ಹೀಗೆ ಅನೇಕ ಸಮಸ್ಯೆಗಳು ಅಲ್ಲಿ ಅಡಗಿವೆ.

ಮುಂದುವರೆದು ಹೇಳಬೇಕೆಂದರೆ, ಈ ಎಲ್ಲಾ ಕೇಂದ್ರಾಡಳಿತ ಪ್ರದೇಶಗಳು ಒಂದು ನಿರ್ದಿಷ್ಟ ವರ್ಗಕ್ಕೆ ಸೇರುವುದಿಲ್ಲ. ದೆಹಲಿ ಒಂದು ವಿಸ್ತಾರವಾದ ಮಹಾನಗರ. ಹಿಮಾಚಲ ಪ್ರದೇಶ ವಿವಿಧ ಜಿಲ್ಲೆಗಳನ್ನೊಳಗೊಂಡಂಥ ಒಂದು ಪರ್ವತ ಪ್ರದೇಶ. ತ್ರಿಪುರ ಮತ್ತು ಮಣಿಪುರಗಳೂ ವಿಶೇಷವಾದ ಆಯಕಟ್ಟಿನ ಪ್ರದೇಶಗಳಾಗಿವೆ. ಅಂಡಮಾನ್ ಮತ್ತು ನಿಕೋಬಾರ್ ದ್ವೀಪಗಳಿಗೆ ಹಾಗೆಯೇ ಮಿನಿಕಾಯ್ ಹಾಗೂ ಅಮಿಂದಿವ್ ದ್ವೀಪಗಳಿಗೆ ತಮ್ಮದೇ ಆದ ಒಂದು ವಿಶಿಷ್ಟ ಸ್ಥಾನವಿದೆ. ಆದ್ದರಿಂದ, ಈ ಎಲ್ಲಾ ಪ್ರದೇಶಗಳಿಗೆ ಏಕರೂಪ ಪದ್ಧತಿಯನ್ನು ಅನುಸರಿಸುವುದು ಸಾಧ್ಯವಾಗುವುದಿಲ್ಲ.

ಯಾವ ರೀತಿಯಲ್ಲಿ ತಮ್ಮ ಮನಸ್ಸು ಕಾರ್ಯಪ್ರವೃತ್ತವಾಗಿದೆ ಎಂಬುದನ್ನು ಹೇಳುವ ಔದಾರ್ಯವನ್ನು ಮಾನ್ಯ ಗೃಹ ಸಚಿವರು ತೋರಿಸಿದ್ದಾರೆ. ಖಾಸಗಿಯಾಗಿ ಹಾಗೂ ನಿಯೋಗದಲ್ಲಿ ಮತ್ತು ಜಂಟಿ ಸಮಿತಿಯಲ್ಲಿ, ನಮ್ಮಲ್ಲಿನ ಕೆಲವರ ಜೊತೆ ಮಾತನಾಡುವ ಅವಕಾಶ ಅವರಿಗೆ ಲಭಿಸಿತ್ತು. ಆದರೆ, ಆಡಳಿತ ನಿರ್ವಹಣೆಯ ಒಂದು ಗುರುತರ ಕಾರ್ಯದಲ್ಲಿ

ಅವಶ್ಯವಾದ ಜನಪ್ರಿಯ ಅಭಿಪ್ರಾಯ ಇರಬೇಕೆಂಬ ಅಗತ್ಯ ಕುರಿತಂತೆ ಒಂದು ಅಂತಿಮವಾದ ಚಿತ್ರಣ ಈ ದಿನದವರೆಗೂ ನಮಗೆ ತಿಳಿದಿಲ್ಲ. ಮಾನ್ಯ ಗೃಹ ಸಚಿವರು ಒಬ್ಬ ಅತ್ಯಂತ ನಿಷ್ಠಾವಂತ ಪ್ರಜಾಪ್ರಭುತ್ವವಾದಿ ಎನ್ನುವುದರಲ್ಲಿ ಎರಡು ಮಾತಿಲ್ಲ. ಆದರೆ, ಅವರು ಪ್ರಜಾಪ್ರಭುತ್ವವಾದಿಗಳೆಂಬ ಏಕಮಾತ್ರ ಭರವಸೆಯ ಕಾರಣದಿಂದ, ಈ ಕೇಂದ್ರಾಡಳಿತ ಪ್ರದೇಶಗಳು ಪ್ರಜಾಪ್ರಭುತ್ವ ಸಂಸ್ಥೆಗಳನ್ನು ಹೊಂದುತ್ತವೆ ಎಂಬುದರ ಬಗ್ಗೆ ನಮಗೆ ಭರವಸೆ ಇಲ್ಲ. ಕೇಂದ್ರಾಡಳಿತ ಪ್ರದೇಶಗಳೆಂದು ಅವುಗಳನ್ನು ಘೋಷಿಸುವ ವಾಸ್ತವ ಸಂಗತಿಯಿಂದಾಗಿ ಅವರ ಕೈಗಳು ಕಟ್ಟಿದಂತಾಗಿದೆ ಎಂಬುದನ್ನು ನಾನು ಅರಿತಿದ್ದೇನೆ. ಕೇಂದ್ರಾಡಳಿತ ಪ್ರದೇಶಗಳೆಂದು ನಾವಿಲ್ಲಿ ಉಲ್ಲೇಖಿಸುವಂಥ ಮಾದರಿಯಲ್ಲಿಯೇ ಕೇಂದ್ರದ ಆಡಳಿತಕ್ಕೆ ಒಳಪಟ್ಟ ಕ್ಷೇತ್ರಗಳು ವಿಶ್ವದ ಇತರ ರಾಷ್ಟ್ರಗಳಲ್ಲೂ ಇರುವುದು ನನಗೆ ತಿಳಿದಿದೆ. ಈ ವಿಷಯಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ ಅಮೇರಿಕಾ ಸಂಯುಕ್ತ ರಾಷ್ಟ್ರಗಳಲ್ಲಿರುವ ವಾಷಿಂಗ್‌ಟನ್ ನಗರಕ್ಕೆ ತನ್ನದೇ ಆದ ಪ್ರತ್ಯೇಕವಾದ ಆಡಳಿತ ಪದ್ಧತಿ ಜಾರಿಯಲ್ಲಿದೆ.

ಮಾನ್ಯ ಗೃಹ ಸಚಿವರಿಗೆ ಸಲಹೆ ಪಡೆಯುವ ಹಕ್ಕಿದೆ. ಅದು ಅವರಿಗೆ ದೊರಕೇ ದೊರಕುತ್ತದೆ. ಆದ್ದರಿಂದ, ಅವರು ಸೂಕ್ತ ಸಲಹೆಗಳನ್ನು ಪಡೆದು ಒಂದು ಸ್ಪಷ್ಟ ಚಿತ್ರವನ್ನು ಈ ಸದನದಲ್ಲಿ ಮಂಡಿಸಲು ಇದು ತಕ್ಕ ಕಾಲವೆಂದು ನಾನು ಭಾವಿಸುತ್ತೇನೆ. ಇಲ್ಲದಿದ್ದಲ್ಲಿ, ಈ ಸಮಸ್ಯೆಯ ಪರಿಹಾರಕ್ಕೆ ಇರುವ ಇನ್ನೊಂದು ಮಾರ್ಗವೆಂದರೆ, ಮಾನ್ಯ ಸಚಿವರ ಪ್ರಾಮಾಣಿಕತೆಯಲ್ಲಿ ವಿಶ್ವಾಸವಿಟ್ಟು, ಈ ವಿಶ್ವಾಸ ನಮ್ಮೆಲ್ಲರಲ್ಲೂ ಇದೆ, ಇಂಥ ಸಂದರ್ಭಗಳಲ್ಲಿ ತೆಗೆದುಕೊಳ್ಳಲು ಸಾಧ್ಯವಾಗಬಹುದಾದ ನಿರ್ಧಾರವನ್ನು ಅವರೇ ತೆಗೆದುಕೊಳ್ಳಲು ಸಂಪೂರ್ಣ ಜವಾಬ್ದಾರಿಯನ್ನು ಅವರಿಗೇ ಬಿಡುವುದಾಗಿದೆ. ಇಂಥ ಸಂದರ್ಭದಲ್ಲಿ ನನಗನ್ನಿಸುವಂತೆ ಕಾಲಾವಕಾಶದ ಅಭಾವದಿಂದಾಗಿ ನಿಗದಿತ ದಿನದಂದು, ಅಂದರೆ ನವೆಂಬರ್‌ನಲ್ಲಿ ಹೊಸ ರಾಜ್ಯಗಳ ಅಸ್ತಿತ್ವಕ್ಕೆ ಬರುವವೆಂದು ಭಾವಿಸಿದಲ್ಲಿ, ನವೆಂಬರ್ 1 ರಂದು, ಈ ಕೇಂದ್ರಾಡಳಿತ ಪ್ರದೇಶಗಳಿಗೆ, ಮಾನ್ಯ ಗೃಹ ಸಚಿವರು ಎಣಿಸಿದಂಥ ಸರ್ಕಾರವನ್ನು ನೀಡಲು ಖಂಡಿತಾ ಅವರಿಗೆ ಸಮಯ ದೊರೆಯುವುದಿಲ್ಲ. ಅಂದರೆ, ದೆಹಲಿ ನಗರವೂ ಒಳಗೊಂಡಂತೆ ಈ ಪ್ರದೇಶಗಳ ಮಧ್ಯಂತರ ಅವಧಿಯ ಕಾರ್ಯಭಾರಗಳ ಜವಾಬ್ದಾರಿ ಅಧಿಕಾರಿಶಾಹಿ ವರ್ಗಕ್ಕೆ ಇರುತ್ತದೆಂದು ಅರ್ಥ. ಈ ನಿಟ್ಟಿನಲ್ಲಿ ಮಾನ್ಯ ಸಚಿವರನ್ನು ಸರಿಯಾಗಿ ಅರ್ಥ ಮಾಡಿಕೊಂಡಿದ್ದೇನೆಂದು ನಾನು ಭಾವಿಸುತ್ತೇನೆ. ಇದು ವಿಷಾದನೀಯ ಸಂಗತಿ. ಈ ದಿನದಿಂದ ಆ ನಿಗದಿತ ದಿನದವರೆಗಿನ ಅವಧಿಯಲ್ಲಿ ಒಂದು ರೀತಿಯ ಜನರ ಸಹಭಾಗಿತ್ವ ಸರ್ಕಾರದಲ್ಲಿರುವಂತೆ ನೋಡಿಕೊಳ್ಳಲು ಕ್ರಮ ತೆಗೆದುಕೊಳ್ಳಲಾಗುವುದೆಂಬ ನಂಬಿಕೆ ನನ್ನಲ್ಲಿದೆ. ಏಕೆಂದರೆ, ಜನರ ಪ್ರಾತಿನಿಧ್ಯ ಜನರ ಸಹಕಾರ ಮತ್ತು ಸಹಾಯದ ಬುನಾದಿಯ ಮೇಲೆ ರೂಪಿತವಾಗುವ ಶಾಸನಾತ್ಮಕ ಹಾಗೂ ಆಡಳಿತಾತ್ಮಕ ಅವಕಾಶಗಳು ಇಲ್ಲದಿರುವಂಥ ಈ ಕ್ಷೇತ್ರಗಳನ್ನು, ಭಾರತ ಗಣರಾಜ್ಯದಲ್ಲಿ ಹಾಗೆಯೇ ಪ್ರಜಾಪ್ರಭುತ್ವದ ಈ ಯುಗದಲ್ಲಿ ನಾವು ಹೊಂದುವಂತಿಲ್ಲ.

ಈ ವಿಧೇಯಕದ ನನ್ನ ವಿಶ್ಲೇಷಣೆ ಅನುಸಾರ, ಪ್ರಾಂಶೀಯ ಸ್ಥಾಯೀ ಸಮಿತಿಗಳ ಪ್ರಾಮುಖ್ಯತೆಯ ಕಡೆಗೆ ಈಗ ಬರುತ್ತೇನೆ. ರಾಜ್ಯಗಳ ಪುನರ್ವಿಂಗಡನಾ ವಿಧೇಯಕಕ್ಕೆ ಸಂಬಂಧಿಸಿದಂತೆ ಕೆಲವು ಪ್ರಾಂತೀಯ ಸ್ಥಾಯೀ ಸಮಿತಿಗಳ ಮೂಲ ಪರಿಕಲ್ಪನೆಯನ್ನು ಬದಲಾಯಿಸಿದ ಬಗ್ಗೆ ಜಂಟಿ ಸಮಿತಿಯಲ್ಲಿ ಪ್ರಸ್ತಾಪಿಸುವಂಥ ಅವಕಾಶವೂ ನನಗೆ ಲಭಿಸಿತ್ತು. "ಸ್ಥಾಯೀ" ಎಂಬ ಪದವನ್ನೇ ಕೈಬಿಡಲಾಗಿದೆ. ಪದಗಳಿಗೆ ಅಂಟಿಕೊಳ್ಳಬೇಕೆಂಬ ಆಸಕ್ತಿಯ ವ್ಯಕ್ತಿ ನಾನಲ್ಲ. ಆದರೆ, ಮೊದಲು ಪಂಜಾಬಿಗೆ ಸಂಬಂಧಿಸಿದಂತೆ ತದನಂತರ ಆಂಧ್ರಕ್ಕೆ ಸಂಬಂಧಿಸಿದಂತೆ ಈ ಒಂದು ಮೂಲ ಪರಿಕಲ್ಪನೆಯನ್ನೇ ಬದಲಾಯಿಸಲಾಗಿದೆ.

ಪಂಜಾಬಿಗೆ ಸಂಬಂಧಪಟ್ಟಂತೆ, ಈ ಕಾರ್ಯ ಯೋಜನೆಯು ವಿಧೇಯಕದ ಮೇಲಿನ ಜಂಟಿ ಸಮಿತಿಯ ವರದಿಯ ಒಂದು ಭಾಗವಾಗಿತ್ತೆಂಬುದನ್ನು ಈ ಸದನ ಅರ್ಥ ಮಾಡಿಕೊಳ್ಳುವುದೆಂದು ಭಾವಿಸುತ್ತೇನೆ. ಆದರೆ, ಆಂಧ್ರಕ್ಕೆ ಸಂಬಂಧಪಟ್ಟಂತೆ ಮಾನ್ಯ ಸಚಿವರಿಗೆ ಅಲ್ಪಾವಧಿ ಪ್ರಶ್ನೆಯನ್ನು ಹಾಕುವಂಥ ಅವಕಾಶ ನನಗೆ ದೊರೆಯಿತು. ಹೇಳಿಕೆಯನ್ನು ಮಾನ್ಯ ಸಚಿವರು ಸದನದ ಮುಂದಿಟ್ಟಿದ್ದಾರೆ.

ಕೆಲವು ನಿಮಿಷಗಳ ಹಿಂದಷ್ಟೇ ಮಾನ್ಯ ಗೃಹ ಸಚಿವರು ಹೇಳಿದ್ದನ್ನು ನಾನು ಸರಿಯಾಗಿ ಕೇಳಿಕೊಂಡಿದ್ದೇನೆಂದುಕೊಂಡಿದ್ದೇನೆ ಅವರು ಹೇಳಿದರು: ಪ್ರಸ್ತುತ ರಾಜ್ಯದ ಎಲ್ಲಾ ಗ್ರಾಮಾಂತರ ಪ್ರದೇಶಗಳಿಗಾಗಿ ಒಂದು ರೀತಿಯ ಪ್ರಾಂತೀಯ ಸಮಿತಿಗಳನ್ನು ರಚಿಸಲಾಗುವುದು ನಾನು ಅರ್ಥ ಮಾಡಿಕೊಂಡಿರುವುದು ಹೀಗೆ.

ಆಂಧ್ರ ಪ್ರಾಂತೀಯ ಸಮಿತಿ ಪ್ರಶ್ನೆಯ ಬಗ್ಗೆ ನಾನು ಸ್ವಲ್ಪ ವಿವರವಾಗಿ ಪ್ರಸ್ತಾಪಿಸಲು ಈ ಸದನದ ಅನುಮತಿಯನ್ನು ಕೋರುತ್ತೇನೆ. ಏಕೆಂದರೆ, ಆಂಧ್ರದ ಕೆಲವು ಕಾಂಗ್ರೆಸ್ ಮುಖಂಡರು ಮತ್ತು ತೆಲಂಗಾಣದ ಕೆಲವು ಕಾಂಗ್ರೆಸ್ ಮುಖಂಡರುಗಳ ನಡುವೆ ಏರ್ಪಟ್ಟಂಥ 1966ರ ಫೆಬ್ರವರಿ 20ರ ಹೈದರಾಬಾದ್ ಹೌಸ್ ಒಪ್ಪಂದ ವಿಪರೀತ ಗೊಂದಲವನ್ನುಂಟು ಮಾಡಿದೆ. ಎಷ್ಟರಮಟ್ಟಿಗೆ ನಾನು ಈ ಪ್ರಶ್ನೆಯನ್ನು ಕುರಿತು ಚರ್ಚಿಸಬೇಕೆಂದು ನನಗೆ ತಿಳಿಯುತ್ತಿಲ್ಲ. ಏಕೆಂದರೆ ಜಂಟಿ ಸಮಿತಿಯಲ್ಲಿ ಈ ಬಗ್ಗೆ ಭಾಗಶಃ ಪ್ರಸ್ತಾಪಿಸಲಾಗಿದೆ ಹಾಗೆಯೇ ನಾನು ಮಾನ್ಯ ಗೃಹ ಸಚಿವರಿಗೆ ಕೇಳಲಾದ ಅಲ್ಪಾವಧಿ ಪ್ರಶ್ನೆಗೆ ಉತ್ತರ ರೂಪವಾಗಿ ಈ ಸದನದಲ್ಲಿ ಮಂಡಿಸಲಾದ ಹೇಳಿಕೆಯಲ್ಲೂ ಇದನ್ನು ಭಾಗಶಃ ಪ್ರಸ್ತಾಪಿಸಿದೆ.

ನಾನು ಬಹಳ ಸಂಕ್ಷಿಪ್ತವಾಗಿ ಹೇಳುತ್ತೇನೆ. ದೆಹಲಿಯ ಹೈದರಾಬಾದ್ ಹೌಸ್‌ನಲ್ಲಿ ಫೆಬ್ರವರಿ 20 ರಂದು ಆಂಧ್ರ ರಾಜ್ಯ ಹಾಗೂ ತೆಲಂಗಾಣದ 8ಜನ ಆಂಧ್ರ ಮುಖಂಡರು ಒಪ್ಪಂದಕ್ಕೆ ಬರಬೇಕಾಗಿತ್ತು. ಈ ಒಪ್ಪಂದಕ್ಕೆ ಯಾವ ಸದಸ್ಯರೂ ಸಹಿ ಮಾಡಿಲ್ಲವೆಂಬುದು ನನ್ನ ಗಮನಕ್ಕೆ ಬಂದಿದೆ, ಈ ಕುರಿತು ಸದನದಲ್ಲಾಗಲೀ ಅಥವಾ ಹೊರಗಾಗಲೀ ಯಾರೂ ಅಲ್ಲಗಳೆದಿಲ್ಲ. ಹೈದರಾಬಾದ್ ರಾಜ್ಯದ ಮುಖ್ಯ ಮಂತ್ರಿಗಳೇ ಸ್ವತಃ ತಮ್ಮ ಕೈಯಿಂದ ಇದನ್ನು ಬರೆದಿದ್ದಾರೆಂಮೂ ಕೂಡ ನನ್ನ ಗಮನಕ್ಕೆ ಬಂದಿದೆ. ಇವೆಲ್ಲಾ ತೀರಾ ಚಿಕ್ಕಪುಟ್ಟ

ಅಂಶಗಳು. ಇದಕ್ಕೆ ಮೊದಲು ಅಂದರೆ ಫೆಬ್ರವರಿಯಲ್ಲಿ ಅಬ್ಬರದ ಪ್ರಚಾರ ಕೊಡಲಾಯಿತು. ಮತ್ತೆ ಒಂದು ತಿಂಗಳ ಹಿಂದೆ ಜಂಟಿ ಸಮಿತಿಯ ಮುಂದೆ ಬಂದಾಗ ಮತ್ತೆ ಪ್ರಚಾರ ನೀಡಲಾಯಿತು. ಈ ಒಪ್ಪಂದದ 12ನೇ ಪ್ಯಾರಾದ ಯಥೋಕ್ತಿ ಈ ರೀತಿ ಇದೆ:

"ಸಚಿವ ಸಂಪುಟದಲ್ಲಿ ಆಂಧ್ರ ಮತ್ತು ತೆಲಂಗಾಣ ಪ್ರದೇಶಗಳ ಸದಸ್ಯರು ಅನುಕ್ರಮವಾಗಿ 60:40 ರಂತೆ ಇರುತ್ತಾನೆ ಶೇ. 40 ರಷ್ಟರ ತೆಲಂಗಾಣ ಸಚಿವರಲ್ಲಿ ತೆಲಂಗಾಣದಿಂದ ಒಬ್ಬ ಮುಸ್ಲಿಂ ಸಚಿವರಿರುತ್ತಾರೆ"

ಪ್ಯಾರಾ 13 ರಲ್ಲಿನ ಬಹು ಮುಖ್ಯವಾದ ಭಾಗಕ್ಕೆ ಈಗ ಬರುತ್ತಿದ್ದೇನೆ:

"ಆಂಧ್ರದವರು ಮುಖ್ಯಮಂತ್ರಿಯಾದರೆ, ಉಪ ಮುಖ್ಯಮಂತ್ರಿಯಾಗಿ ತೆಲಂಗಾಣದವರಿರಬೇಕು. ಅದೇ ರೀತಿ ತೆಲಂಗಾಣದವರು ಮುಖ್ಯ ಮಂತ್ರಿಯಾದರೆ ಆಂಧ್ರದವರು ಉಪ ಮುಖ್ಯಮಂತ್ರಿಯಾಗಬೇಕು. ಈ ಮುಂದೆ ತೋರಿಸಲಾದಂಥ ಖಾತೆಗಳಲ್ಲಿ ಎರಡು ಖಾತೆಗಳನ್ನು ತೆಲಂಗಾಣದ ಸಚಿವರಿಗೆ ನೀಡಬೇಕು. ಆ ಖಾತೆಗಳು ಯಾವುವೆಂದರೆ - ಗೃಹ, ವಿತ್ತೀಯ, ಕಂದಾಯ, ಯೋಜನೆ ಮತ್ತು ಅಭಿವೃದ್ಧಿ ಹಾಗೂ ವಾಣಿಜ್ಯ ಮತ್ತು ಕೈಗಾರಿಕಾ ಖಾತೆಗಳು".

ಒಲ್ಲದ ಮನಸ್ಸಿನಿಂದ ಈ ದಾಖಲೆಯತ್ತ ಈ ಸದನದ ಗಮನವನ್ನು ಸೆಳೆಯುತ್ತೇನೆ. ಈ ಒಂದು ನಿರ್ದಿಷ್ಟ ದಾಖಲೆ ಪತ್ರವನ್ನು ಸರ್ಕಾರ ಒಪ್ಪಿಲ್ಲವೆಂದು ಮಾನ್ಯ ಗೃಹ ಸಚಿವರು ಜಂಟಿ ಸಮಿತಿಯಲ್ಲಿ ನಮಗೆ ಭರವಸೆ ನೀಡಿದ್ದರು ಎಂದು ನಾನು ಇಲ್ಲಿ ಹೇಳಿದರೆ ಯಾವುದೇ ಗೌಪ್ಯವನ್ನು ನಾನು ಬಹಿರಂಗ ಮಾಡುತ್ತಿಲ್ಲವೆಂದು ನಂಬಿದ್ದೇನೆ. ಸಚಿವರ ಈ ಎರಡು ತಂಡಗಳ ಮಧ್ಯೆ ಫೆಬ್ರವರಿಯಲ್ಲಿಯೇ ತೀರ್ಮಾನವಾಗಬೇಕಾಗಿದ್ದ ಈ ಒಪ್ಪಂದವನ್ನು ಮಾನ್ಯ ಗೃಹ ಸಚಿವರು ನೋಡಿದ್ದರೂ, ಸದನದಲ್ಲಿ ಅವರು ಮಂಡಿಸಿದ ಟಿಪ್ಪಣಿಯಲ್ಲಿ ಅದನ್ನು ಸೇರಿಸಿಲ್ಲ, ಆದರೆ, ನನಗಿರುವ ತೀರಾ ಅಸಮಾಧಾನವೆಂದರೆ ಒಪ್ಪಂದವೆಂದು ಕರೆಯಲಾದ ಈ ನಿರ್ದಿಷ್ಟ ಒಪ್ಪಂದವನ್ನು ಹೇಳಿಕೆ ಮಟ್ಟಕ್ಕೆ ಇಳಿಸಿ ಸದನದಲ್ಲಿ ಮಾನ್ಯ ಗೃಹ ಸಚಿವರು ಮಂಡಿಸುವುದರ ಪರಿಣಾಮ ಏನಾಗಿದೆಯೆಂದರೆ ಇಂಥದೇ ಖಾತೆಗಳನ್ನು ಹಾಗೂ ಅಧಿಕಾರಗಳನ್ನು ನೀಡಲಾಗುವುದೆಂದು ಇಡೀ ಆಂಧ್ರ ಪ್ರದೇಶ ಮತ್ತು ತೆಲಂಗಾಣಗಳಿಗೆ ಮೊದಲೇ ಗೊತ್ತುಪಡಿಸಿ ನಂಬುವಂತೆ ಮಾಡಿದಂತಾಗಿದೆ. ಅಧಿಕಾರಕ್ಕೆ ಹಾತೊರೆಯುವವರ ವ್ಯೂಹದಲ್ಲಿ ತಮ್ಮ ಸ್ಥಾನವನ್ನು ಭದ್ರಪಡಿಸಿಕೊಳ್ಳುವ ದೃಷ್ಟಿಯಿಂದ ಆಂಧ್ರಪ್ರದೇಶ ನಿರ್ಮಾಣದ ಪೂರ್ವದಲ್ಲಿಯೇ ಆಂಧ್ರ ದೇಶದ ಮಂತ್ರಿಗಳಲ್ಲಿಯೇ ಕೆಲವರನ್ನು ಕೆಳಗಿಳಿಸಲು ಸಹಿ ಸಂಗ್ರಹ ಚಳುವಳಿ ಕೇವಲ ಐದು ದಿನಗಳ ಹಿಂದಷ್ಟೇ ನಡೆಯಿತೆಂಬುದನ್ನು ನಾನು ಹೇಳುವುದಕ್ಕಿಂತಲೂ ಹೆಚ್ಚು ತಮಗೇ ತಿಳಿದಿರುವುದರಿಂದ, ಮಾನ್ಯ ಅಧ್ಯಕ್ಷರೆ, ತಾವು ಮತ್ತು ಈ ಸದನ ಇನ್ನೊಮ್ಮೆ ನೆನಪು ಮಾಡಿಕೊಳ್ಳಬೇಕೆಂದು ಕೋರುತ್ತೇನೆ. ನನ್ನ ಸ್ನೇಹಿತರಾದ ಮಾನ್ಯ ಗೃಹ ಸಚಿವರಿಂದ ಭರವಸೆಯು ಅಗತ್ಯವಿದೆ. ಅವರೊಬ್ಬ ಪ್ರಜಾಪ್ರಭುತ್ವವಾದಿ ಎಂಬುದನ್ನು ಪುನಃ ಇಲ್ಲಿ

ಉಲ್ಲೇಖಿಸುತ್ತೇನೆ. ಪ್ರಜಾಪ್ರಭುತ್ವದಲ್ಲಿ ಅವರಿಗಿರುವ ನಂಬಿಕೆಯ ಬಗ್ಗೆ ನಮಗೆ ಅಪಾರ ವಿಶ್ವಾಸವಿದೆ. ಆದರೆ, ಆಂಧ್ರ ಪ್ರದೇಶದ ಅಂತಿಮ ರೂಪ ಈ ರೀತಿಯಲ್ಲಿ ನಡೆಯಬಾರದು. ಈ ದಾಖಲೆ ಪತ್ರವನ್ನು ಆಂಧ್ರ ಮತ್ತು ತೆಲಂಗಾಣ ಎರಡೂ ಕಡೆಯ ಮಂತ್ರಿಗಳು ನಿರಾಕರಿಸದೇ ಇರುವುದರಿಂದ ಪ್ರಾಂತೀಯ ಅಪಾಯ ಗಳಾಗುವುದಂತೂ ಸುಸ್ಪಷ್ಟ. ಈಗ ಇವೆಲ್ಲಾ ಸಂಭವಿಸಲು ಪ್ರಾರಂಭವಾಗಿದೆ. ನನ್ನ ಈ ನಿಲುವನ್ನು ಸ್ಪಷ್ಟಪಡಿಸುವ ಅವಕಾಶ ಈ ಮೊದಲೇ ನನಗೆ ಲಭಿಸಿದೆ. ಹಾಗೆಯೇ ಜಂಟಿ ಸಮಿತಿಯಲ್ಲಿ ಇದನ್ನು ನಾನು ಸ್ಪಷ್ಟಪಡಿಸಿಯೂ ಆಗಿದೆ. ಈ ಶಾಸನ ಸಭೆಯ ಒಳಗೆ ಮತ್ತೊಂದು ಚಿಕ್ಕ ಶಾಸನ ಸಭೆ, ಹಾಗೆಯೇ ಸಚಿವ ಸಂಪುಟದ ಒಳಗೆ ಇನ್ನೊಂದು ಚಿಕ್ಕ ಸಂಪುಟದ ಸೃಷ್ಟಿಗೆ ತಾವು ಅವಕಾಶ ಮಾಡಿಕೊಡಕೂಡದು ಹಾಗೂ ಈ ಸದನ ಆ ರೀತಿಯಾಗುವುದಕ್ಕೆ ಅನುಮತಿ ನೀಡಬಾರದೆಂದು. ಈ ವಿಧೇಯಕದ ಮೇಲಿನ ನನ್ನ ಭಿನ್ನಾಭಿಪ್ರಾಯದ ಟಿಪ್ಪಣಿಯಲ್ಲಿಯೂ ಸಹ ನಾನು ಸ್ಪಷ್ಟಪಡಿಸಿರುತ್ತೇನೆ. ಇಲ್ಲಿ ಅಡಕವಾಗಿರುವ ಒಂದು ಪ್ರಮುಖ ಅಂಶದ ಕಡೆಗೆ ಮಾನ್ಯ ಗೃಹ ಸಚಿವರ ಗಮನ ಸೆಳೆಯಲು ಬಯಸುತ್ತೇನೆ. ಈ ಸದನದಲ್ಲಿ ಅವರು ಮಂಡಿಸಿರುವ ಟಿಪ್ಪಣಿಯ 5ನೇ ಪ್ಯಾರಾದ ಬಗ್ಗೆ ನನಗೆ ಸ್ವಲ್ಪಮಟ್ಟಿಗೆ ಆತಂಕವಿರುವುದರಿಂದ ಅದನ್ನು ಇಲ್ಲಿ ಉಲ್ಲೇಖಿಸುತ್ತೇನೆ. ಅವರು ಹೇಳುತ್ತಾರೆ:

"ಆಂಧ್ರದ ಬಗ್ಗೆ ಪ್ರಾಂತೀಯ ಸಮಿತಿಯು ವ್ಯಕ್ತಪಡಿಸಿರುವ ಸಲಹೆಯನ್ನು ಸಾಮಾನ್ಯವಾಗಿ ಸರ್ಕಾರ ಮತ್ತು ರಾಜ್ಯ ವಿಧಾನ ಸಭೆಗಳು ಒಪ್ಪುತ್ತವೆ".

ಈ ಒಂದು ನಿರ್ದಿಷ್ಟ ದಾಖಲೆ ಕುರಿತು ಮಂತ್ರಿಗಳ ಜೊತೆ ಸಮಾಲೋಚನೆ ಹಾಗೂ ಚರ್ಚೆಗಳಿಗಾಗಿ ಸ್ವಲ್ಪ ದಿನಗಳ ಹಿಂದೆ ಮಾನ್ಯ ಗೃಹ ಸಚಿವರು ಆಹ್ವಾನಿಸಿದ್ದಾಗ ಇದು ನನ್ನ ಗಮನಕ್ಕೆ ಬಾರದೇ ಹೋಗಿದ್ದುದಕ್ಕೆ ನಾನು ನಿಜವಾಗಿಯೂ ಪಶ್ಚಾತ್ತಾಪ ಪಡಬೇಕಾಗಿದೆ. ಭಾರತ ಸರ್ಕಾರವು ಇನ್ನೂ ಘೋಷಿಸಬೇಕೆಂದಿರುವ ಆದರ ಇಂಗಿತಕ್ಕೆ ಮೊದಲೇ ಒಂದು ರಾಜ್ಯದ ಶಾಸನಸಭೆ ಹೇಗೆ ಬದ್ಧವಾಗುತ್ತದೆ? ಮಾನ್ಯ ಅಧ್ಯಕ್ಷರೆ, ಯಾವುದೇ ಒಂದು ಸ್ಥಾಯೀ ಸಮಿತಿಯ ಒಳಗೆ ತೆಗೆದುಕೊಳ್ಳಬಹುದಾದ ನಿರ್ಣಯ ಅಥವಾ ಒಪ್ಪಂದಗಳಿಗೆ ಶಾಸನಸಭೆ ಬದ್ಧವಾಗಿರಬಾರದು.

ಒಟ್ಟಿಗೆ ಸೇರಿಸಲಾದ ಕೆಲವು ಪ್ರದೇಶಗಳಿಗೆ ಯುಕ್ತ ಮತ್ತು ನ್ಯಾಯೋಚಿತ ರಕ್ಷಣೆಯನ್ನು ಸಾಕಷ್ಟು ಪ್ರಮಾಣದಲ್ಲಿ ನೀಡುವುದೇ ಈ ಪ್ರಾಂತೀಯ ಸಮಿತಿಯ ಮೂಲ ಉದ್ದೇಶವೆಂದು ನನಗನ್ನಿಸುತ್ತದೆ. ಸೂಕ್ತ ರಕ್ಷಣೆಯನ್ನು ನೀಡಬೇಕೆಂಬ ವಾದವನ್ನು ನಾನು ಸಂಪೂರ್ಣವಾಗಿ ಒಪ್ಪುತ್ತೇನೆ. ಆದರೆ, ಮಾನ್ಯ ಗೃಹಸಚಿವರು ಸದನದಲ್ಲಿ ಮಂಡಿಸಿರುವ ವಿಧೇಯಕದಲ್ಲಿ ಈ ಒಪ್ಪಂದವನ್ನು ನೆಲೆಗೊಳಿಸಲು ಉದ್ದೇಶಿಸಿರುವ ಕ್ರಮ ನನಗೆ 'ಆತಂಕ' ಉಂಟು ಮಾಡಿದೆ.

ಅತ್ಯಂತ ಜವಾಬ್ದಾರಿಯುತವಾಗಿ ಹಾಗೆಯೇ ವಿನಮ್ರತೆಯಿಂದ ಅವರಲ್ಲಿ ಈ ಕಳಕಳಿಯ ಮನವಿ ಮಾಡುತ್ತಿದ್ದೇನೆ. ಇದು ಯಾವುದೇ ಒಂದು ಪಕ್ಷದ ನಿರ್ಣಯವನ್ನು

ಆಧರಿಸಿದ ವಿವಾದ ವಿಷಯವಲ್ಲ. ರಾಜ್ಯಾಂಗ ತಿದ್ದುಪಡಿಗೆ ಸಂಬಂಧಪಟ್ಟಂತೆ, ಎಲ್ಲರ ಮೇಲೂ ಸಮನಾಗಿ ಪರಿಣಾಮ ಬೀರುವಂಥ ವಿಷಯ ಇದು. ಈಗ, ಈ ವಿಧೇಯಕವನ್ನು ಚರ್ಚೆ ಮಾಡುತ್ತಿರುವುದರಿಂದ ಈ ಅಂಶವನ್ನು ಪರಿಗಣಿಸಲೇಬೇಕು. ನನ್ನ ಈ ಉದ್ದೇಶವನ್ನು ಮಾನ್ಯ ಗೃಹ ಸಚಿವರು ತಪ್ಪಾಗಿ ಅರ್ಥೈಸುವುದಿಲ್ಲವೆಂದು ನಾನು ಭಾವಿಸುತ್ತೇನೆ.

ಮತ್ತೊಂದು ವಿಷಯವನ್ನು ಅಂದರೆ ಎರಡನೇ ಸದನಗಳನ್ನು ಕುರಿತು ನಾನು ಪ್ರಸ್ತಾಪಿಸಲು ಇಚ್ಛಿಸುತ್ತೇನೆ. ಈ ವಿಷಯದಲ್ಲಿ ನಾನೊಬ್ಬ ನಾಚಿಗೆಗೆಟ್ಟ ಭಂಡ ವ್ಯಕ್ತಿಯಾಗಿದ್ದೇನೆ. ರಾಜ್ಯ ಸಭೆಗೆ ಸಂಬಂಧಪಟ್ಟಂತೆ ಈ ಸದನದ ಹಕ್ಕು ಮತ್ತು ಪ್ರಕಾರ್ಯಗಳಿಗೆ ಸಂಬಂಧಿಸಿದ ಪ್ರಶ್ನೆಯನ್ನು ಕಳೆದ ಎರಡು ಅಥವಾ ಮೂರು ವರ್ಷಗಳ ಹಿಂದೆಯೇ ಪ್ರಸ್ತಾಪಿಸಿದ್ದುದನ್ನು ಈ ಸದನ ನೆನಪಿಸಿಕೊಳ್ಳಬೇಕು. ಆದರೆ, ಈ ಬಗ್ಗೆ ಒಂದು ರೀತಿಯ ವಿಷಾದಕರ ಪರಿಸ್ಥಿತಿ ನನಗೆ ಗೋಚರವಾಗುತ್ತಿದೆ. ಮಾನ್ಯ ಅಧ್ಯಕ್ಷರೆ, ಇದೊಂದು ಕಾರ್ಯನೀತಿಯ ವಿಷಯವಾಗಿದ್ದು, ನಾವೆಲ್ಲರೂ ಚಿಂತನೆ ಮಾಡಬೇಕಾಗಿದೆ.

ರಾಜ್ಯಗಳ ಪುನರ್ವಿಂಗಡಣಾ ಜಂಟಿ ಸಮಿತಿಯು ವಿಧೇಯಕವನ್ನು ಇತ್ಯರ್ಥಗೊಳಿಸಿದಂಥ ಸಂದರ್ಭದಲ್ಲಿ ಮಧ್ಯ ಪ್ರದೇಶದಲ್ಲಿ ಎರಡನೇ ಸದನವನ್ನು ಪ್ರಾರಂಭ ಮಾಡುವ ಬಗ್ಗೆ ಯಾವುದೇ ಪ್ರಸ್ತಾಪವಿರಲಿಲ್ಲ. ಆದರೆ, ಈ ವಿಧೇಯಕವನ್ನು ಪರ್ಯಾಲೋಚನೆಗಾಗಿ ತೆಗೆದುಕೊಂಡಾಗ ಬೆದರಿಕೆಯ ವಾತಾವರಣ ಉಂಟಾಯಿತೆಂದು ನಾನು ಹೇಳದಿದ್ದರೂ, ಕೆಲವೊಂದು ಬೆಳವಣಿಗೆಗಳು ಲಾಬಿಗಳಲ್ಲಿ ಘಟಿಸಿ ವಿಧಾನಪರಿಷತ್ತನ್ನು ನೀಡುವ ಬಗ್ಗೆ ತಿದ್ದುಪಡಿಯನ್ನು ತಂದು ವಿಧಾನ ಪರಿಷತ್ತನ್ನು ನೀಡಲಾಯಿತು. ಆಂಧ್ರಕ್ಕೆ ವಿಧಾನಪರಿಷತ್ತನ್ನು ನೀಡುವ ಬಗ್ಗೆ ತೀವ್ರ ಒತ್ತಡವನ್ನು ಸರ್ಕಾರದ ಮೇಲೆ ಹಾಗೂ ಮಾನ್ಯ ಗೃಹ ಸಚಿವರ ಮೇಲೆ ತರಲಾಯಿತು ಎಂಬುದು ನನಗೆ ಗೊತ್ತಿದೆ ಹಾಗೂ ಇದನ್ನು ನನ್ನ ಸ್ನೇಹಿತರೂ ಅಲ್ಲಗಳೆಯಲಾರರು. ಆದರೆ ಪ್ರಸ್ತುತ ಭಾರತೀಯ ರಾಷ್ಟ್ರೀಯತೆ, ನಮ್ಮ ಪ್ರಜಾಸತ್ತೆ ಹಾಗೂ ಆರ್ಥಿಕ ಪರಿಸ್ಥಿತಿಗಳ ಹಿನ್ನೆಲೆಯಲ್ಲಿ, ವಿಧಾನ ಪರಿಷತ್ತಿನ ಹೊರೆಯನ್ನು ರಾಜ್ಯಗಳಿಗೆ ಹೊರಿಸಕೂಡದು.

ಪ್ರಾಯಶಃ ಜಂಟಿ ಸಮಿತಿಯಲ್ಲಿ ನಾನು ಪ್ರಶ್ನಿಸಿದಂತೆ ಅವರನ್ನು ಪ್ರಶ್ನಿಸುತ್ತೇನೆ. ಆಂಧ್ರವು ಮದ್ರಾಸಿನ ಒಂದು ಭಾಗವಾಗಿತ್ತು. ಆಗ ನಾವು ವಿಧಾನಪರಿಷತ್ತನ್ನು ಪಡೆದಿದ್ದೆವು. ಆಂಧ್ರವು ಒಂದು ಪ್ರತ್ಯೇಕ ರಾಜ್ಯವಾದಂಥ ಸಂದರ್ಭದಲ್ಲಿ ಅದಕ್ಕೆ ವಿಧಾನ ಪರಿಷತ್ತನ್ನು ನೀಡಲಿಲ್ಲ. ಈಗ ಹೈದರಾಬಾದಿನ ಒಂದು ಭಾಗವನ್ನು ಆಂಧ್ರಕ್ಕೆ ಸೇರಿಸಿ ಆಂಧ್ರ ಪ್ರದೇಶವನ್ನು ರೂಪಿಸಲಾಗುತ್ತಿದೆ. ಆದಕ್ಕೆ ವಿಧಾನ ಪರಿಷತ್ತನ್ನು ನೀಡುವಂಥ ಸಾಧ್ಯತೆಗಳು ಕಂಡುಬರುತ್ತಿವೆ. ಇದನ್ನು ನೀಡಬೇಕೆನ್ನುವುದರಲ್ಲಿ ಯಾವುದೇ ತರ್ಕಬದ್ಧತೆ ನನಗಂತೂ ಕಂಡುಬರುತ್ತಿಲ್ಲ. ಸಾರ್ವತ್ರಿಕ ಚುನಾವಣೆಯಲ್ಲಿ ತಿರಸ್ಕರಿಸಲ್ಪಟ್ಟ ವ್ಯಕ್ತಿಗಳಿಗೆ ಸಾರ್ವಜನಿಕ ಜೀವನದಲ್ಲಿ ಸ್ಥಾನಮಾನಗಳನ್ನು ಕಲ್ಪಿಸಿಕೊಡುವುದರ ಹೊರತು ಈ ವಿಧಾನ ಪರಿಷತ್ತಿನಿಂದ ಬೇರೆ ಯಾವ ಉದ್ದೇಶ ಈಡೇರುವುದೆಂದು ನನಗೆ ತಿಳಿದಿಲ್ಲ. ಈ ಬಗ್ಗೆ ಕಟುಪದಗಳನ್ನು ಉಪಯೋಗಿಸಲು

ನಾನೂ ಇಚ್ಛಿಸುವುದಿಲ್ಲ. 1952ರ ಸಾರ್ವತ್ರಿಕ ಚುನಾವಣೆಯಲ್ಲಿ ಪರಾಭವಗೊಂಡವರಿಗೆ ರಾಜ್ಯಸಭೆಯಲ್ಲಿ ಅವಕಾಶಗಳನ್ನು ಎಲ್ಲ ಪಕ್ಷಗಳೂ ಕಲ್ಪಿಸಿಕೊಟ್ಟಿರುವುದು ನನಗೆ ತಿಳಿದಿದ್ದು, ಆ ಸಂಗತಿಯನ್ನು ಅತ್ಯಂತ ಗೌರವಪೂರ್ವಕವಾಗಿ ಇಲ್ಲಿ ಹೇಳಲು ಇಚ್ಛಿಸುತ್ತೇನೆ. ಇದು ಯಾವುದೇ ಒಂದು ಪಕ್ಷಕ್ಕೆ ಸೀಮಿತವಾಗಿಲ್ಲ. ಇಂಥ ಗೊತ್ತುಗುರಿಯಿಲ್ಲದ ಹೆಸರುಗಳನ್ನು ಡಜನ್‌ಗಟ್ಟಲೆ ನಾನು ಹೇಳುತ್ತಾ ಹೋಗಬಹುದು.

ನಮ್ಮ ರಾಷ್ಟ್ರದ ರಾಜ್ಯಾಂಗವನ್ನು ನಡೆಸಿಕೊಳ್ಳುವ ರೀತಿ ಇದಲ್ಲ. ಈ ಸಂಬಂಧದಲ್ಲಿ ಸನ್ಮಾನ್ಯ ಗೃಹ ಸಚಿವರ ಮೇಲೆ ತರಲಾಗುವ ಇಂಥ ಒತ್ತಾಯಗಳನ್ನು ಕೊನೆಯ ಕ್ಷಣದವರೆಗೂ ಅವರು ನಿಗ್ರಹಿಸಬಲ್ಲರೆಂಬ ಭರವಸೆ ನನಗಿದೆ. ಆಂಧ್ರದಲ್ಲಿ ವಿಧಾನಪರಿಷತ್ತನ್ನು ಪ್ರಾರಂಭಿಸದ ಬಗ್ಗೆ ಈಗಿರುವ ಒಂದು ವರ್ಗದ ಬೇಡಿಕೆಯ ಅರಿವು ನನಗಿದೆ.

ಇದುವರೆಗೆ ನಾನು ಏನು ಹೇಳಿದ್ದೇನೆಯೋ ಅದರಲ್ಲಿ ಯಾವುದೇ ದುರುದ್ದೇಶವಿಲ್ಲ ಎನ್ನುವುದನ್ನು ಇಲ್ಲಿ ಅಂತಿಮವಾಗಿ ಸ್ಪಷ್ಟಪಡಿಸಲು ಇಚ್ಛಿಸುತ್ತೇನೆ. ನನ್ನ ಜವಾಬ್ದಾರಿಯನ್ನರಿತು ನಾನು ನಡೆದುಕೊಂಡಿದ್ದೇನೆ. ಬೊಂಬಾಯಿ ಮತ್ತು ಅಹಮದಾಬಾದು ನಗರಗಳಲ್ಲಿ ನಡೆದ ಘೋರ ಘಟನೆಗಳ ಹಿನ್ನೆಲೆಯಲ್ಲಿ, ಮಾನ್ಯ ಗೃಹ ಸಚಿರರು ಕಳೆದ ಕೆಲವಾರು ತಿಂಗಳಲ್ಲಿ ತೆಗೆದುಕೊಂಡ ಕ್ರಮದ ಪೂರ್ಣ ಅರಿವು ನನಗಿದೆ.

ಬೊಂಬಾಯಿ ರಾಜ್ಯಕ್ಕೆ ಸಂಬಂಧಪಟ್ಟಂತೆ ಅದನ್ನು ಇತ್ಯರ್ಥಪಡಿಸಲು ಕೆಲವು ವಾರಗಳ ಹಿಂದೆ ರಾಜ್ಯ ಪುನರ್ವಿಂಗಡನಾ ವಿಧೇಯಕದಲ್ಲಿ, ತೆಗೆದುಕೊಂಡ ಕ್ರಮದ ಬಗ್ಗೆ ನಾವ್ಯಾರೂ ತಕರಾರು ಮಾಡಲು ಇಚ್ಛಿಸುವುದಿಲ್ಲ. ಇತರ ವಿಷಯಗಳಲ್ಲಿ ಭಾಷಾವಾರು ಪುನರ್ವಿಂಡನಾ ನೀತಿಯನ್ನು ಒಪ್ಪಿಕೊಳ್ಳಲಾಗಿದೆ. ಸದ್ಯದ ಭಾವಾವೇಶಗಳು ಕಳೆದ ನಂತರ, ಕಾಲಾನುಕ್ರಮದಲ್ಲಿ ಮಹಾರಾಷ್ಟ್ರೀಯರು ತಮ್ಮದೇ ಆದ ಪ್ರತ್ಯೇಕ ರಾಜ್ಯವನ್ನೂ ಹಾಗೆಯೇ ಗುಜರಾತಿಗಳು ಕೂಡ ತಮ್ಮದೇ ಆದ ಪ್ರತ್ಯೇಕ ರಾಜ್ಯವನ್ನು ಹೊಂದಬಹುದು. ಪ್ರಸ್ತುತದ ಬೊಂಬಾಯಿ ರಾಜ್ಯವನ್ನು ಹೊರತುಪಡಿಸಿದಂತೆ ಭಾಷಾವಾರು ಪುನರ್ವಿಂಗಡಣಾ ನೀತಿಯನ್ನು ನಿರ್ಲಕ್ಷಿಸಲು ಸಾಧ್ಯವಾಗಿಲ್ಲ ಮತ್ತು ಅದನ್ನು ಒಪ್ಪಿಕೊಳ್ಳಲಾಗಿದೆ ಎಂಬುದನ್ನು ನಿಸ್ಸಂಕೋಚವಾಗಿ ಹಾಗೂ ದೃಡತೆಯಿಂದ ಇಲ್ಲಿ ಹೇಳುತ್ತೇನೆ. ರಾಜ್ಯಗಳ ಪುನರ್ವಿಂಗಡಣೆಗೆ ಸಂಬಂಧಿಸಿದಂತೆ ಭಾಷಾವಾರು ಪ್ರಾಂತ್ಯಗಳೇ ಆಧಾರವೆಂದು ಒಪ್ಪಿಕೊಳ್ಳಲಾಗಿದ್ದು ಅದನ್ನು ಅನುಷ್ಠಾನಕ್ಕೂ ತರಲಾಗಿದೆ. ನಾವೀಗ ಪುನರ್ವಿಂಗಡಣೆಯ ಅಂತಿಮ ಘಟ್ಟಕ್ಕೆ ಬರುತ್ತಿದ್ದೇವೆ. ಈ ಮೂರೂ ವಿಧೇಯಕಗಳನ್ನು ಸಮರ್ಥವಾಗಿ ನಿರ್ವಹಿಸಿರುವ ಮಾನ್ಯ ಗೃಹ ಸಚಿವರನ್ನು ಅವರ ಸಹಕಾರ ಮನೋಭಾವದ ನಡವಳಿಕೆಗಾಗಿ ಮತ್ತೊಮ್ಮೆ ವಂದಿಸುತ್ತೇನೆ.

## 9. ಕಾಶ್ಮೀರಕ್ಕೆ ಸಂಬಂಧಿಸಿದ ನಿರ್ಣಯ*

ಜಮ್ಮು ಮತ್ತು ಕಾಶ್ಮೀರದ ಬಹು ಮುಖ್ಯ ಸಮಸ್ಯೆಯನ್ನು ಕುರಿತಂತೆ ಮಾನ್ಯ ಪ್ರಧಾನ ಮಂತ್ರಿಗಳು ಜುಲೈ 24 ರಂದು ಮಾಡಿದ ಭಾಷಣಗಳನ್ನು ವಿಶೇಷವಾಗಿ ಸ್ವಾಗತಿಸುತ್ತೇನೆ. ಈ ಸದನದಲ್ಲಿ ಅವರು ನೀಡಿದ ಹೇಳಿಕೆಯನ್ನು ಕೇಳಿ ಮತ್ತು ಅದರ ಮುದ್ರಿತ ಪಾಠವನ್ನು ಪರಿಶೀಲಿಸಿದ ನಂತರವೇ ನಾನು ತಿದ್ದುಪಡಿ ಸೂಚನೆಯನ್ನು ನೀಡಿದ್ದು...... ಅದನ್ನು ಈಗ ಮಂಡಿಸಲು ನಾನು ಇಚ್ಛಿಸುತ್ತಿಲ್ಲ. ನಾನು ಆ ಸೂಚನೆಯನ್ನು ಕೊಡಲು ಕಾರಣವೇನೆಂದರೆ ಮಾನ್ಯ ಪ್ರಧಾನ ಮಂತ್ರಿಗಳು ನೀಡಿದ ಹೇಳಿಕೆಯಲ್ಲಿ ಭಾರತ ಸರ್ಕಾರ ಮತ್ತು ಜಮ್ಮು ಮತ್ತು ಕಾಶ್ಮೀರದ ನಿಯೋಗಗಳ ಮಧ್ಯೆ ಇತ್ಯರ್ಥಕ್ಕೆ ಬಂದ ಒಡಂಬಡಿಕೆಯಲ್ಲಿ ಕೇವಲ ದೇಶೀಯ ಅಂಶಗಳನ್ನು ಕ್ರೋಢೀಕರಿಸಿ ಒಂದು ರೀತಿಯ ಯೋಜನೆಯನ್ನು ಸಿದ್ಧಪಡಿಸಿರುವ ಬಗ್ಗೆ ಅವರು ಪ್ರಸ್ತಾಪಿಸಿದರೇ ವಿನಃ ಆ ಸಂದರ್ಭದಲ್ಲಿ ನಾನು ನಿರೀಕ್ಷಿಸಿದ ಮಟ್ಟಕ್ಕೆ ಅಂತರಾಷ್ಟ್ರೀಯ ಸಮಸ್ಯೆಯ ಸ್ವರೂಪದ ಬಗ್ಗೆ ಅವರು ಪ್ರಸ್ತಾಪಿಸಲೇ ಇಲ್ಲ. ಸದನದ ನಾಯಕರು ನೀಡಿರುವ ಹೇಳಿಕೆಯ ಹಿನ್ನೆಲೆಯಲ್ಲಿ ವಿಶ್ವ ಸಂಸ್ಥೆಯ ಕಾರ್ಯಸೂಚಿಯಿಂದ ಕಾಶ್ಮೀರ ಸಮಸ್ಯೆಯನ್ನು ಹಿಂತೆಗೆದುಕೊಳ್ಳುವುದಕ್ಕೆ ಸಂಬಂಧಪಟ್ಟಂತೆ ನಾನು ನೀಡಿದ್ದ ತಿದ್ದುಪಡಿ ಸೂಚನೆಯನ್ನು ಹಿಂತೆಗೆದುಕೊಳ್ಳುವ ಪ್ರಯತ್ನ ಮಾಡಿದ್ದೇನೆ. ಅಂತೆಯೇ ಪ್ರಧಾನ ಮಂತ್ರಿಗಳು ಮತ್ತು ಭಾರತ ಸರ್ಕಾರವನ್ನು ಇಕ್ಕಟ್ಟಿಗೆ ಸಿಕ್ಕಿಸಬಾರದೆಂಬ ಉದ್ದೇಶದಿಂದ ತಿದ್ದುಪಡಿಯನ್ನು ಹಿಂತೆಗೆದುಕೊಂಡಿದ್ದೇನೆ. ಏಕೆಂದರೆ, ನಮ್ಮ ವಿದೇಶೀ ನೀತಿಗಾಗಲೀ ಅಥವಾ ನಮ್ಮ ಬಾಹ್ಯ ರಕ್ಷಣೆಗಾಗಲೀ ಹಾಗೂ ಆಂತರಿಕ ಭದ್ರತೆಗಾಗಲೀ ವಿಪತ್ತನ್ನುಂಟು ಮಾಡಲು ನಮ್ಮ ರಾಷ್ಟ್ರದಲ್ಲಿ ಯಾವೊಬ್ಬ ಪ್ರಜೆಯೂ ತಯಾರಾಗಿಲ್ಲ ಹಾಗೂ ಇಂಥ ಸಮಸ್ಯೆಯ ಮೇಲೆ ನಮ್ಮ ಭಾವನೆಗಳು ತೀಕ್ಷ್ಣವಾಗಿವೆ ಎಂಬುದನ್ನು ಅರಿತು ತಿದ್ದುಪಡಿಯನ್ನು ಹಿಂತೆಗೆದುಕೊಂಡಿದ್ದೇನೆ.

ಇಷ್ಟನ್ನು ಹೇಳುತ್ತಾ, ಮಾನ್ಯ ಪ್ರಧಾನ ಮಂತ್ರಿ ಪಂಡಿತ್ ನೆಹರೂರವರು ಈ ಹಿಂದೆ ಒಂದು ಸಂದರ್ಭದಲ್ಲಿ ನೀಡಿದ ಹೇಳಿಕೆಯ ವಿಷಯದ ಬಗ್ಗೆ ಸಂಕ್ಷಿಪ್ತವಾಗಿ ಹೇಳಲು ನಾನು ಉದ್ದೇಶಿಸಿದ್ದೇನೆ. ಕಾಶ್ಮೀರದ ನಿಯೋಗ ಮತ್ತು ಭಾರತ ಸರ್ಕಾರದ ಮಧ್ಯೆ ಏರ್ಪಟ್ಟ ಒಪ್ಪಂದವನ್ನು ವಿಶೇಷವಾಗಿ ಸ್ವಾಗತಿಸಿರುವುದಾಗಿ ನಾನು ಈಗಾಗಲೇ ಹೇಳಿದ್ದೇನೆ. ವಿಲೀನವು 1947ರ ಅಕ್ಟೋಬರ್‌ನಲ್ಲಿಯೇ ಎಲ್ಲಾ ರೀತಿಯಿಂದಲೂ ಸಂಪೂರ್ಣವಾಗಿದೆ ಎಂಬ ಈ ಸದನದ ನಾಯಕರ (ಪಂಡಿತ್ ನೆಹರೂ) ಸ್ಪಷ್ಟೀಕರಣದಿಂದ ನನಗೆ ಹರ್ಷವಾಗಿದೆ. ಕಾಶ್ಮೀರ ಸಮಸ್ಯೆಯ ಬಗ್ಗೆ ಭಾರತ ತಾಳಿರುವ ನಿಲುವನ್ನು ಕೆಲವು ಅಮೆರಿಕನ್ ಪತ್ರಿಕೆಗಳು ತೀಕ್ಷ್ಣವಾಗಿ ಟೀಕಿಸಿರುವುದನ್ನು ನಾನು ಗಮನಿಸಿದ್ದು, ಸದನದ ನಾಯಕರ ಈ ಹೇಳಿಕೆಯು, ಸಮಸ್ಯೆಯ ಮೇಲಿನ ಎಲ್ಲಾ ಅನುಮಾನಗಳನ್ನು ದೂರ ಮಾಡುತ್ತವೆ ಎಂದು ನಾನು ಭಾವಿಸುತ್ತೇನೆ.

---

* ಕಾಶ್ಮೀರಕ್ಕೆ ಸಂಬಂಧಿಸಿದ ಸರ್ಕಾರಿ ಮಸೂದೆಯ ಮೇಲಿನ ಚರ್ಚೆಯಿಂದ: ಲೋಕಸಭಾ 7ನೇ ಆಗಸ್ಟ್, 1952. ಸಿಸಿ:5793-5800. ನಿರ್ಣಯದ

ಚುನಾಯಿತ ಪ್ರಾತಿನಿಧ್ಯವನ್ನು, ನಾನು ಒಬ್ಬ ಪ್ರಜಾಪ್ರಭುತ್ವವಾದಿಯಾಗಿ ತೆರದ ಹೃದಯದಿಂದ ಸ್ವಾಗತಿಸುತ್ತೇನೆ. ಭಾರತದ ಧ್ವಜದ ಹಾಗೆಯೇ ಕಾಶ್ಮೀರದ ಧ್ವಜಗಳಿಗೆ ಸಂಬಂಧಪಟ್ಟಂತೆ ಸದನದಲ್ಲಿ ಧೀರ್ಘ ಚರ್ಚೆಯಾಗಿ ಭಾರತ ಧ್ವಜದ ಸಾರ್ವಭೌಮತ್ವವನ್ನು ಜಮ್ಮು ಮತ್ತು ಕಾಶ್ಮೀರ ಸರ್ಕಾರ ಹಾಗೂ ಜನತೆ ಒಪ್ಪಿಕೊಂಡಿರುವುದನ್ನು ನೋಡಿ ನನಗೆ ಸಂತೋಷ ಉಂಟಾಗಿದೆ. ಈ ಬಗ್ಗೆ ಈ ಹಿಂದೆ ಸದನದ ನಾಯಕರು ಹೇಳಿದ ಹೇಳಿಕೆ ಬಹು ಸ್ಪಷ್ಟವಾಗಿದ್ದು ನನಗೆ ಅದರಿಂದ ತೃಪ್ತಿಯಾಗಿದೆ. ಮಾನ್ಯ ಪ್ರಧಾನ ಮಂತ್ರಿಗಳ ಜುಲೈ 24ರ ಹೇಳಿಕೆಯಲ್ಲಿ ಉಲ್ಲೇಖಿಸಲಾದ ನಾಲ್ಕನೇ ಬಹು ಮುಖ್ಯ ವಿಷಯಕ್ಕೆ ಸಂಬಂಧಿಸಿದಂತೆ ಅಂದರೆ ಸರ್ವೋಚ್ಚ ನ್ಯಾಯಾಲಯದ ಕಾರ್ಯವ್ಯಾಪ್ತಿಯ ಬಗ್ಗೆ ನನಗೆ ಸ್ವಲ್ಪ ಶಂಕೆಯುಂಟಾಗಿತ್ತು. ಆದರೆ, ನಮ್ಮ ರಾಜ್ಯಾಡಳಿತ ವ್ಯವಸ್ಥೆಯಲ್ಲಿ ಕಾಶ್ಮೀರವು ಹೊಂದಿರುವಂಥ ಅತಿ ಸೂಕ್ಷ್ಮ ಹಾಗೂ ಅಸಾಮಾನ್ಯ ಸ್ಥಿತಿಯ ಕಾರಣದಿಂದಾಗಿ ಈ ಶಂಕೆ ಉಂಟಾಗಿತ್ತು ಎಂದು ಭಾರತದ ಒಬ್ಬ ಪ್ರಜೆಯಾಗಿ ಹೇಳಲು ಸಿದ್ದನಿದ್ದೇನೆ. ಈ ಎಲ್ಲಾ ಆತಂಕಗಳಿಗೆ ಕಾಲವೇ ಪರಿಹಾರ ಸೂಚಿಸುತ್ತದೆ ಆಸ್ತಿಗಳಿಗೆ ನೀಡುವ ಪರಿಹಾರದ ವಿಷಯದಲ್ಲಿ ಸರ್ವೋಚ್ಚ ನ್ಯಾಯಾಲಯದ ಕಾರ್ಯವ್ಯಾಪ್ತಿಯನ್ನು ತೃಪ್ತಿಕರವಾಗಿ ಇತ್ಯರ್ಥಪಡಿಸಲಾಗುವುದೆಂದು ನಂಬಿದ್ದೇನೆ.

ಮುಂದುವರೆದು, ಇನ್ನೂ ಒಂದು ಅತೀ ಮುಖ್ಯವಾದಂಥ ನನ್ನ ಒಂದು ಅಭಿಪ್ರಾಯವನ್ನು ಮಂಡಿಸಲು ಇಚ್ಛಿಸಿದ್ದು, ಮಾನ್ಯ ಪ್ರಧಾನ ಮಂತ್ರಿಗಳು, ಆ ಬಗ್ಗೆ ಸಹಮತಿಸುವರೆಂಬ ದೃಡ ವಿಶ್ವಾಸ ನನಗಿದೆ. ಕಾಶ್ಮೀರವನ್ನು ಪ್ರತ್ಯೇಕವಾಗಿ ನೋಡುವಂಥ ಭಾರತ ಸರ್ಕಾರದ ಮನೋಭಾವವನ್ನು ಕಳೆದ ಎರಡು ವರ್ಷಗಳಿಂದ ನಾನು ಗಮನಿಸಿದ್ದೇನೆ. ಅಂತರಾಷ್ಟ್ರೀಯ ದೃಷ್ಟಿಕೋನದಲ್ಲಿ ಇಂಥ ಹೇಳಿಕೆಗೆ ನನ್ನದೇನೂ ತಕರಾಗಿಲ್ಲ. ಆದರೆ, ಆಂತರಿಕವಾಗಿ ಕಾಶ್ಮೀರದ ಬಗ್ಗೆ ಅದರಲ್ಲಿಯೂ ವಿಶೇಷವಾಗಿ ಚುನಾಯಿತ ಮುಖ್ಯಸ್ಥರು ಹಾಗೂ ಇತರರ ಸಂಬಂಧದಲ್ಲಿ ಏನನ್ನಾದರೂ ಮಾಡಿದಲ್ಲಿ ಅದು ಭಾರತದ ಇತರ ಪ್ರತಿಯೊಂದು ರಾಜ್ಯಗಳ ಮೇಲೆ, ಅದರಲ್ಲಿಯೂ ವಿಶೇಷವಾಗಿ ಹೈದ್ರಾಬಾದಿನ ಮೇಲೆ ಭೀಕರವಾದ ಪರಿಣಾಮ ಬೀರಲಿದೆ ಎಂದು ನಾನು ನನ್ನ ಜವಾಬ್ದಾರಿಯನ್ನರಿತು ಹೇಳುತ್ತೇನೆ. ಈ ಹಿಂದೆ ಸದನದ ನಾಯಕರು (ಪಂಡಿತ್ ನೆಹರೂ) ನಿಜಾಮರ ಅಧಿಕಾರವನ್ನು ಸಧ್ಯಕ್ಕಂತೂ ಯಾವುದೇ ಕಾರಣದಿಂದಲೂ ರದ್ದುಪಡಿಸಲಾಗುವುದಿಲ್ಲವೆಂಬ ಅವರ ನಿಲುವನ್ನು ಸ್ಪಷ್ಟಪಡಿಸಿದ್ದರು. ರಾಜಪ್ರಮುಖ ವ್ಯವಸ್ಥೆಯ ಸ್ಥಿತಿಗತಿಗೆ ಸಂಬಂಧಪಟ್ಟಂತೆ ಹೇಳುವುದಾದರೆ ಕಾಶ್ಮೀರವನ್ನು ಭಾರತದಿಂದ ಪ್ರತ್ಯೇಕವಾಗಿ ಪರಿಗಣಿಸಲು ಸಾಧ್ಯವೇ ಇಲ್ಲವೆಂದು ನಾನು ಇಲ್ಲಿ ಹೇಳಲು ಇಷ್ಟಪಡುತ್ತೇನೆ. ಈ ಅಂಶದ ಬಗ್ಗೆ ಪ್ರಧಾನ ಮಂತ್ರಿಗಳು (ಪಂಡಿತ ನೆಹರೂ) ಎಂದೂ ಮನಸ್ಸು ಮಾಡಿಲ್ಲ ಹಾಗೂ ವಿಶೇಷವಾಗಿ ರಾಜಪ್ರಮುಖ ವ್ಯವಸ್ಥೆಯನ್ನು ಮುಂದುವರಿಸುವ ಸಂಬಂಧದಲ್ಲಿ ಈ ರಾಷ್ಟ್ರದ ಪ್ರಜಾತಂತ್ರ ಸರ್ಕಾರದ ಪ್ರಗತಿಪರ ಧೋರಣೆಗೆ ಅವರು ಅಡ್ಡಿಯನ್ನುಂಟು ಮಾಡುವುದಿಲ್ಲವೆಂಬ ಭರವಸೆ ನನಗಿದೆ. ಅತೀ ಶೀಘ್ರದಲ್ಲಿಯೇ

ಈ ಸಮಸ್ಯೆಯನ್ನು ಕೈಗೆತ್ತಿಕೊಂಡು ರಾಜಪ್ರಮುಖ ವ್ಯವಸ್ಥೆಯನ್ನು ಸಂಪೂರ್ಣವಾಗಿ ರದ್ದುಗೊಳಿಸಲು ಸಾಕಷ್ಟು ಕ್ರಮಗಳನ್ನು ತೆಗೆದುಕೊಳ್ಳುವರೆಂಬ ನಂಬಿಕೆಯೂ ನನಗಿದೆ. ಪ್ರಸ್ತುತ, ರಾಜ ಪ್ರಮುಖ ವ್ಯವಸ್ಥೆಯನ್ನು ರದ್ದುಪಡಿಸುವಲ್ಲಿ ರಾಷ್ಟ್ರದ ವಿವಿಧ ಭಾಗಗಳಲ್ಲಿ ತೀವ್ರತರ ಚಳುವಳಿ ರೂಪಗೊಳ್ಳುತ್ತಿರುವ ಸಂಗತಿ ಮಾನ್ಯ ಪ್ರಧಾನ ಮಂತ್ರಿಗಳ (ಪಂಡಿತ ನೆಹರೂ) ಗಮನಕ್ಕೆ ಬಂದಿರುವುದಾಗಿ ನಾನು ಭಾವಿಸುತ್ತೇನೆ. ಈ ರಾಷ್ಟ್ರದ ಪ್ರಜೆಗಳಾದ ನಾವು, ಅದರಲ್ಲಿಯೂ ವಿಶೇಷವಾಗಿ ಭಾರತ ಸರ್ಕಾರ ತಾನೆಷ್ಟೇ ಸಂಖ್ಯೆಯ ಬಲವನ್ನು ಸದನದ ಒಳಗೆ ಹಾಗೂ ಹೊರಗೆ ಹೊಂದಿದ್ದರೂ ಜನತೆಯ ವಕ್ತಾರರ ನಿಖರ ಹೇಳಿಕೆಗಳ ವಿರುದ್ಧ ಹೋಗಲಾಗದೆಂದು ನನಗನ್ನಿಸುತ್ತದೆ. ನನ್ನ ಎದುರು ಕೂತಿರುವ ಸದಸ್ಯರೂ ಕೂಡ ಇದಕ್ಕೆ ಹೊರತೇನಲ್ಲ. ಜನತೆಯ ಅಪೇಕ್ಷೆಯಂತೆ, ಈ ರಾಷ್ಟ್ರದ ರಾಜ್ಯನೀತಿಯನ್ನು ಭದ್ರ ಬುನಾದಿಯ ಮೇಲೆ ರೂಪಿಸಬೇಕಾದಲ್ಲಿ ಹೈದ್ರಾಬಾದಿಗೆ ಸಂಬಂಧಪಟ್ಟಂತೆ ಅಲ್ಲಿ ನಿಜಾಮರ ಆಳ್ವಿಕೆ ಕೊನೆಗೊಳ್ಳಬೇಕು, ಹಾಗೂ ಆ ರಾಜ್ಯವನ್ನು ಪ್ರತ್ಯೇಕ ಭಾಗಗಳನ್ನಾಗಿ ಮಾರ್ಪಡಿಸಿ ಅದನ್ನು ಪುನರ್ ವಿಂಗಡಣೆ ಮಾಡಬೇಕೆಂದು ನಾನು ಬಲವಾಗಿ ಪ್ರತಿಪಾದಿಸುತ್ತೇನೆ. ರಾಜ್ಯ ಕಾಂಗ್ರೆಸ್ ಕೂಡ ಇದೇ ನಿಲುವನ್ನು ತಾಳಿದ್ದು, ಆ ನಿಲುವು ಹಾಗೆಯೇ ಮುಂದುವರೆದಿದೆ. ಆದ್ದರಿಂದ, ಮಾನ್ಯ ಪ್ರಧಾನ ಮಂತ್ರಿಗಳು ಈ ಸಮಸ್ಯೆಯನ್ನು ಪುನರ್ ಪರಿಶೀಲಿಸಿ ಕಾಶ್ಮೀರದಲ್ಲಿ ಕೈಗೆತ್ತಿಕೊಂಡ ರಾಜಪ್ರಮುಖ ವ್ಯವಸ್ಥೆಯನ್ನು ರದ್ದುಪಡಿಸುವ ಕ್ರಮವನ್ನು ಕೈಬಿಡಲು ಅನುಮತಿ ನೀಡುವುದಿಲ್ಲವೆಂದೂ ಹಾಗೆಯೇ ಈ ಕ್ರಮವನ್ನು ನ್ಯಾಯವಾದ ರೀತಿಯಲ್ಲಿ ಹಂತ ಹಂತವಾಗಿ ರಾಷ್ಟ್ರದ ಇತರ ಭಾಗಗಳಿಗೂ ಅನ್ವಯಿಸುವರೆಂದೂ ನಾನು ಭಾವಿಸುತ್ತೇನೆ ಹಾಗೂ ಆ ವಿಶ್ವಾಸ ನನಗಿದೆ.

ಈ ಸಮಸ್ಯೆಯ ಅಂತರಾಷ್ಟ್ರೀಯ ಸ್ವರೂಪದ ಬಗ್ಗೆ ನನ್ನ ನಿಲುವನ್ನು ಈಗಾಗಲೇ ಸ್ಪಷ್ಟಪಡಿಸಿರುತ್ತೇನೆ. ಈ ಹಿಂದೆ ಮಾನ್ಯ ಪ್ರಧಾನ ಮಂತ್ರಿಗಳು ನೀಡಿದ ಹೇಳಿಕೆಯನ್ನು ಗಮನಿಸಿದ ನಂತರ ಮತ್ತು ಮಾನ್ಯ ಪ್ರಧಾನ ಮಂತ್ರಿಗಳು ಕೇವಲ ಕಾಶ್ಮೀರ ಸರ್ಕಾರ ಮತ್ತು ಭಾರತ ಸರ್ಕಾರಗಳ ಮಧ್ಯೆ ಏರ್ಪಟ್ಟ ಆಂತರಿಕ ಒಪ್ಪಂದದ ಮೇಲಷ್ಟೇ ಒತ್ತು ನೀಡಿ, ಸಮಸ್ಯೆಯ ಅಂತರಾಷ್ಟ್ರೀಯ ಅಂಶಗಳ ಬಗ್ಗೆ ಸಮರ್ಪಕವಾಗಿ ನಿರ್ಣಯಿಸದಿರುವುದನ್ನು ನೋಡಿದ ನಂತರ ನಾನು ತಿದ್ದುಪಡಿ ಸೂಚನೆಯನ್ನು ನೀಡಿದ್ದೆ. ಆದರೆ, ಮಾನ್ಯ ಪ್ರಧಾನ ಮಂತ್ರಿಗಳ ವಿಸ್ತೃತ ಹೇಳಿಕೆಯ ಹಿನ್ನೆಲೆಯಲ್ಲಿ ನನ್ನ ಪ್ರಸ್ತಾವನೆಯನ್ನು ಹಿಂತೆಗೆದುಕೊಳ್ಳಲು ಅನುಮತಿ ಕೋರಿದ್ದರು ಈ ಸಂಬಂಧದಲ್ಲಿ ಒಂದೆರಡು ವಿಷಯಗಳನ್ನು ನಾನು ಹೇಳಿದರೆ ಸದನದ ನಾಯಕರು ನನ್ನನ್ನು ತಪ್ಪಾಗಿ ಭಾವಿಸುವುದಿಲ್ಲವೆಂದು ನಂಬುತ್ತೇನೆ. ನನ್ನ ನಿಲುವು ಅತ್ಯಂತ ಸರಳ ಅಲ್ಲೂ ಆಗಬೇಕು, ಇಲ್ಲೂ ಆಗಬೇಕು ಎಂದರೆ ಭದ್ರತಾ ಸಮಿತಿಯೂ ಸಮಸ್ಯೆಯನ್ನು ಪರಿಹರಿಸಿ ಕೊಡಬೇಕು ನಾವೂ ಕೂಡ ಪರಿಹರಿಸಿಕೊಳ್ಳಬೇಕೆನ್ನುವ ಪ್ರಯತ್ನ ಮಾಡುತ್ತಿದ್ದೇವೆಂಬ ಭಾವನೆ ಹೊರದೇಶದವರಿಗೆ ಬಂದಿದ್ದು, ಸ್ವಲ್ಪ ಮಟ್ಟಿಗೆ ನನಗೂ ಹಾಗೆಯೇ ಅನ್ನಿಸುತ್ತದೆ. ಕಾಶ್ಮೀರದ ಬಗ್ಗೆ ಕೆಲ ವರ್ಷಗಳಷ್ಟು ಹಿಂದೆ ಹೋಗಿ, ಅಲ್ಲಿ

ಏನಾಯಿತು ಎಂಬುದನ್ನು ನೋಡೋಣ. ನಿಸ್ಸೈನೀಕರಣದ ಮೇಲಿನ ಮ್ಯಾಕ್‌ನಾಟನ್‌ರವರ ಪ್ರಸ್ತಾವನೆಗಳನ್ನು ನಾವು ಸಂಪೂರ್ಣವಾಗಿ ತಿರಸ್ಕರಿಸಿದೆವು. ಡಾ. ಗ್ರಾಹಂರವರನ್ನು ನೇಮಕ ಮಾಡಿದ ಭದ್ರತಾ ಮಂಡಲಿಯ ನಿರ್ಣಯದ ನಿರ್ದಿಷ್ಟ ಭಾಗವನ್ನು ಮಾನ್ಯ ಪ್ರಧಾನ ಮಂತ್ರಿಗಳು ತಿರಸ್ಕರಿಸಿದರೆಂದು ನಾನು ಹೇಳಿದರೆ, ಪ್ರಸ್ತಾವನೆಯನ್ನು ನಾನೇ ತಪ್ಪಾಗಿ ಅರ್ಥೈಸುತ್ತಿದ್ದೇನೆಂದು ನನಗೆ ಅನ್ನಿಸುವುದಿಲ್ಲ. ಡಾ. ಗ್ರಾಹಂರವರಿಗೆ ಸಹಕರಿಸಲು ನಾವು ಒಪ್ಪಿದ್ದೆವು ವಾಸ್ತವವಾಗಿ ಅವರೊಂದಿಗೆ ಸಮಾಲೋಚಿಸಲು ಸಧ್ಯದಲ್ಲಿಯೇ ಭಾರತದಿಂದ ಒಂದು ನಿಯೋಗ ಜಿನಿವಾಗೆ ಹೋಗುತ್ತಿದೆ. ಶಿಷ್ಟಾಚಾರ ಮತ್ತಿತರ ವಿಷಯಗಳಲ್ಲಿ ಅನುಸರಿಸಬೇಕಾದ ಕೆಲವು ಅಂತರಾಷ್ಟ್ರೀಯ ನಡವಳಿಕೆಗಳ ಬಗ್ಗೆ ನನಗೂ ನಂಬಿಕೆಯಿದೆ. ಆದರೆ, ಕಳೆದ ಐದು ವರ್ಷಗಳಿಗೂ ಹೆಚ್ಚು ಕಾಲ ಕಾಶ್ಮೀರ ಸಮಸ್ಯೆಯನ್ನು ಜೀವಂತವಾಗಿಟ್ಟುಕೊಂಡು, ಲಭ್ಯವಾಗುವ ಪ್ರತಿಯೊಂದು ಸಂದರ್ಭದಲ್ಲೂ ಸತ್ತ ಕುದುರೆಯನ್ನು ಬಡಿದೆಬ್ಬಿಸುವಂತೆ, ಈ ಒಂದು ನಿರ್ದಿಷ್ಟ ತಂತ್ರದ ಮೂಲಕ ನಮ್ಮ ರಾಷ್ಟ್ರದ ಮೇಲೆ ನಡೆಸಲು ಪ್ರಯತ್ನಿಸುವ ಅಂತರರಾಷ್ಟ್ರೀಯ ಮಸಲತ್ತುಗಳನ್ನು ನಮ್ಮ ಸರ್ಕಾರ ಇನ್ನೂ ಸ್ವಲ್ಪ ಹೆಚ್ಚಿನ ಪ್ರಮಾಣದಲ್ಲಿ ಪ್ರತಿಭಟಿಸಬೇಕಿತ್ತೆಂದು ನನಗನ್ನಿಸುತ್ತದೆ.

ಭದ್ರತಾ ಮಂಡಲಿಯ ಕಾರ್ಯಸೂಚಿಯಿಂದ ಕಾಶ್ಮೀರ ಸಮಸ್ಯೆಯನ್ನು ಹಿಂತೆಗೆದುಕೊಳ್ಳಲು ಯಾವುದೇ ತಾಂತ್ರಿಕ ಕಾರಣಗಳು ಇಲ್ಲದಿರಬಹುದು. ಆದರೆ, "ಸರಿಸುಮಾರು 5 ವರ್ಷಗಳ ಕಾಲ ಆದ ನಿಮ್ಮ ವಿಳಂಬದ ತಂತ್ರ ನಮಗೆ ಅರ್ಥವಾಗಿದೆ ಹಾಗೂ ಈ ಬಗ್ಗೆ ನಮಗೆ ಸಾಕಷ್ಟು ಅನುಭವವೂ ಆಗಿದೆ" ಎಂದು ನೇರವಾಗಿ ಭದ್ರತಾ ಮಂಡಲಿಗೆ ಹೇಳಿಬಿಡುವುದು ಉಚಿತವೆಂದು ನನಗನ್ನಿಸುತ್ತದೆ. ಯಾರಾಗಲು ಸಾಧ್ಯವಾಗದಂಥ ಪರಿಸ್ಥಿತಿಯ ಕಡೆ ನಾವು ದಾಪುಗಾಲು ಹಾಕುತ್ತಿದ್ದು, ಅದರಿಂದ ಹೊರಬರಲು ನಮಗೆ ದಾರಿಯೇ ಇಲ್ಲ. ಪರಿಣಾಮವಾಗಿ, ಭದ್ರತಾ ಮಂಡಲಿಯು ತೆಗೆದುಕೊಳ್ಳುವ ತೀರ್ಮಾನಕ್ಕೂ ನಮಗೂ ಏನೇನೂ ಸಂಬಂಧವಿಲ್ಲವೆಂದು ನಮ್ಮ ನಿಲುವನ್ನು ಸಂಪೂರ್ಣವಾಗಿ ಸ್ಪಷ್ಟಪಡಿಸಲು ನಾವು ತಯಾರಿದ್ದೇವೆ. ವಾಸ್ತವವಾಗಿ, ಕಳೆದೆರಡು ಸಂದರ್ಭಗಳಲ್ಲಿ ಸದರಿ ನಿಲುವನ್ನು ಸ್ಪಷ್ಟಪಡಿಸಿದ್ದೇನೆ. ನಿಸ್ಸೈನೀಕರಣದ ಪ್ರಸ್ತಾವನೆಗಳನ್ನು ತಿರಸ್ಕರಿಸುವ ಬಗ್ಗೆ ಮಾನ್ಯ ಪ್ರಧಾನ ಮಂತ್ರಿಗಳು ಉಲ್ಲೇಖಿಸಿರುವುದು ನನಗೆ ಸಂತೋಷ ತಂದಿದೆ. ಅದೇ ರೀತಿ " ಅಂತರಾಷ್ಟ್ರೀಯ ಚೆಸ್ ಬೋರ್ಡ್‌ನ ದಾಳಗಳಾಗಲೂ ನಾವು ಇನ್ನು ಮುಂದೆ ಯಾವತ್ತೂ ಸಿದ್ಧರಿರುವುದಿಲ್ಲವೆಂದು ಭದ್ರತಾ ಮಂಡಲಿಗೆ ಸ್ಪಷ್ಟವಾಗಿ ಹೇಳಬೇಕಾಗಿದೆ. ಅಂತರರಾಷ್ಟ್ರೀಯ ಒಳಸಂಚು ಮತ್ತು ಬುಡಮೇಲು ಕೃತ್ಯಗಳಿಗೆ ಚಾಲನೆಯ ಸ್ಥಳವಾಗಲು ಕಾಶ್ಮೀರ ಪ್ರದೇಶವನ್ನು ನಾವು ಎಂದಿಗೂ ಬಿಡುವುದಿಲ್ಲ.

ಕಳೆದ ಐದು ವರ್ಷಗಳಲ್ಲಿ ಭದ್ರತಾ ಮಂಡಲಿಯು ನಮ್ಮ ಮುಂದೆ ಮಂಡಿಸಿದ ಅನೇಕ ಪ್ರಸ್ತಾವನೆಗಳ ಮೇರೆಗೆ ಬಹಳಷ್ಟು ನಿಯೋಗಗಳು ಇಲ್ಲಿಗೆ ಬಂದು ನಮ್ಮ ಪ್ರದೇಶದ ಪ್ರತಿ ಇಂಚನ್ನೂ ಬಿಡದೇ ನಕ್ಷೆ ಮಾಡಿರುವ ಅಂಶ ನನ್ನ ಮನಸ್ಸನ್ನು ಕೊರೆಯುತ್ತಿದೆ. ಕಾಶ್ಮೀರ

ವಿವಾದದ ಇತ್ಯರ್ಥಕ್ಕೆ ನಾವು ಬರುವಲ್ಲಿ ಅಡ್ಡಿಯನ್ನುಂಟು ಮಾಡಿ, ಪ್ರಸ್ತಾವನೆಯ ಮೂಲ ಧ್ಯೇಯವನ್ನು ವಿಕಾರಗೊಳಿಸಿ ಹಾಳು ಮಾಡಬೇಕೆಂಬ ಉದ್ದೇಶದಿಂದ ಆ ಪ್ರದೇಶಕ್ಕೆ ಹೊರ ರಾಷ್ಟ್ರಗಳ ಈ ನಿಯೋಗಗಳು ಭೇಟಿ ಮಾಡಿದ ರೀತಿ, ಈ ರಾಷ್ಟ್ರದ ಭದ್ರತೆಗೆ ಬಹುತೇಕ ಅಪಾಯವನ್ನು ತಂದೊಡ್ಡಿದೆ ಎಂಬ ಸಂಗತಿ ನನಗೆ ತುಂಬಾ ನೋವುಂಟು ಮಾಡಿದೆ. ಮಾನ್ಯ ಪ್ರಧಾನ ಮಂತ್ರಿಗಳಲ್ಲಿ ನಾನು ಕೇಳುವುದಿಷ್ಟೆ: ಅವರು ಈ ಸಮಸ್ಯೆಯನ್ನು ಮತ್ತಷ್ಟು ದೃಢವಾಗಿ ಮತ್ತು ನೇರವಾಗಿ ಕೈಗೆತ್ತಿಕೊಳ್ಳಬೇಕು. ಅವರ ದೃಷ್ಟಿಕೋನ ನೇರವಾಗಿಲ್ಲವೆಂದು ನಾನು ಹೇಳುತ್ತಿಲ್ಲ, ನಾನು ಹೇಳುವುದೇನೆಂದರೆ ಈ ಅವಿವೇಕವನ್ನು ಇನ್ನೆಂದಿಗೂ ನಾವು ಸಹಿಸಿಕೊಳ್ಳುವುದಿಲ್ಲವೆಂದು ಭದ್ರತಾ ಮಂಡಲಿಗೆ ಅವರು ಮನವರಿಕೆ ಮಾಡಿಕೊಡಬೇಕು. ಏಕೆಂದರೆ, ನಮ್ಮ ಇತಿಹಾಸದ ಐದು ವರ್ಷಗಳೂ ಈ ಕಾಶ್ಮೀರ ಸಮಸ್ಯೆಯಲ್ಲಿ ಕಳೆದುಹೋಗಿದೆ.

ಯುದ್ಧ ಬೇಕೆನ್ನುವ ವಿಕಾರ ಮನಸ್ಸಿನ ವ್ಯಕ್ತಿ ನಾನಲ್ಲ. ಆದರೆ, ನಾನು ಈ ರಾಷ್ಟ್ರದ ಹಿತಾಸಕ್ತಿಯನ್ನು ರಕ್ಷಿಸಬೇಕೆಂದು ಒತ್ತಾಯಿಸುವ ಒಬ್ಬ ವಾಸ್ತವವಾದಿ. ವಿಲೀನ ಲಿಖಿತಪತ್ರ ಇತ್ಯಾದಿಗಳಿಗೆ ಸಂಬಂಧಿಸಿದ, ವಿಶೇಷವಾಗಿ ಅನುಚ್ಛೇದ 370ನ್ನು ಕುರಿತಂತೆ ಸಂವಿಧಾನ ತಜ್ಞರು ಈ ದಾಖಲೆಯನ್ನು ಹರಿದು ಹಾಕಬಹುದಾದರೂ, ನಾನು ಕಾಶ್ಮೀರದ ಇತ್ಯರ್ಥವನ್ನು ಸ್ವಾಗತಿಸುವೆ. ಕಾಶ್ಮೀರ ಐದು ಅಂತರಾಷ್ಟ್ರೀಯ ಗಡಿಗಳಿಗೆ ಹೊಂದಿಕೊಂಡಿದೆ ಈ ರಾಜ್ಯದ ಭವಿಷ್ಯತ್ತಿನ ಜೊತೆಗೆ ನಮ್ಮ ಭವಿಷ್ಯತ್ತು ಬಿಡಿಸಲಾಗದ ಬೆಸುಗೆಯಾಗಿದೆ. ಕಾಶ್ಮೀರದ ಸದ್ಯದ ಸ್ಥಿತಿಗೆ ಸಾಧ್ಯವಾದ ಎಲ್ಲಾ ಸಹಾನುಭೂತಿಯನ್ನು ತೋರಿಸಬೇಕೆಂದು ಭಾರತದ ಒಬ್ಬ ಪ್ರಜೆಯಾಗಿ ನಾನು ಅಭಿಪ್ರಾಯಪಡುತ್ತೇನೆ. ಭಾರತದ ವಿದೇಶೀ ನೀತಿಗೆ ಅಪಾಯವನ್ನುಂಟು ಮಾಡುವ ಹಾಗೂ ಭಾರತದ ರಕ್ಷಣಾ ವ್ಯವಸ್ಥೆಯನ್ನು ಛಿದ್ರಗೊಳಿಸುವ ಯಾವುದೇ ಪ್ರಯತ್ನವನ್ನು ಖಂಡಿಸಬೇಕಾಗಿದ್ದು, ಆ ಪ್ರಯತ್ನವನ್ನು ಖಂಡಿಸಲು ಈ ಅವಕಾಶವನ್ನು ಉಪಯೋಗಿಸಿಕೊಳ್ಳುತ್ತೇನೆ. ನಮ್ಮ ರಾಷ್ಟ್ರದ ಭದ್ರತೆಗೆ ಮತ್ತು ರಕ್ಷಣಾ ವ್ಯವಸ್ಥೆಗೆ ಅಪಾಯವನ್ನುಂಟು ಮಾಡುವಂಥ ಯಾವುದೇ ಹೇಳಿಕೆಯನ್ನು ನೀಡಬಾರದೆಂದು ವಿಶೇಷವಾಗಿ ಸದನದ ಈ ಭಾಗದಲ್ಲಿ ಕುಳಿತಿರುವ ನನ್ನ ಸ್ನೇಹಿತರಲ್ಲಿ ಮನವಿ ಮಾಡುತ್ತಿದ್ದೇನೆ.

## 10. ರೈಲ್ವೆಗಳು

### ರೈಲ್ವೆ ಒಡಂಬಡಿಕೆ ಸಮಿತಿ I *

ಮೂಲ ನಿರ್ಣಯದ ಬದಲಿಗೆ ಈ ಮುಂದಿನದನ್ನು ಪ್ರತ್ಯಾಯೋಜಿಸಬೇಕು:

"ಸಾಮಾನ್ಯ ಹಣಕಾಸಿನಿಂದ ರೈಲ್ವೆ ಹಣಕಾಸನ್ನು ಬೇರ್ಪಡಿಸುವುದಕ್ಕೆ ಸಂಬಂಧಪಟ್ಟಂತೆ ರೈಲ್ವೆ ಸಂಸ್ಥೆಯು, ಪ್ರಸ್ತುತ, ಸಾಮಾನ್ಯ ರಾಜಸ್ವಗಳಿಗೆ ಹಾಗೂ ಇತರ ಪೂರಕ ಬಾಬುಗಳಿಗೆ ನೀಡಬೇಕಾಗುವ ಲಾಭಾಂಶದ ದರವನ್ನು ಪುನರ್ ಪರಿಶೀಲಿಸಲು ನೇಮಿಸಿದ ಸಮಿತಿಯು 1954ರ ನವೆಂಬರ್ 30ರಂದು ನೀಡಿದ ವರದಿಯನ್ನು ಈ ಸದನ ಪರಿಶೀಲಿಸಿ, ರೈಲ್ವೆಯು ವಿಧಿಸಲು ಉದ್ದೇಶಿಸಿರುವ ಸವಕಳಿ ಕ್ರಮದ ಬಗ್ಗೆ ಮತ್ತಷ್ಟು ತನಿಖೆಯನ್ನು ನಡೆಸಬೇಕೆಂದು ಶಿಫಾರಸು ಮಾಡುತ್ತದೆ, ಹಾಗೆಯೇ ರಾಷ್ಟ್ರದ ಪ್ರತಿಯೊಂದು ಭಾಗಗಳಲ್ಲಿ ಒಂದು ಕೈಗಾರಿಕೆಗೆ ಒಂದೇ ದರದ ನೀತಿಯ ಆಧಾರದ ಮೇಲೆ ಸಾಗಣೆ ದರವನ್ನು ನಿಗದಿ ಮಾಡಲು ಶಿಫಾರಸು ಮಾಡುತ್ತದೆ".

1924ರ ರೈಲ್ವೆ ವಿಂಗಡನಾ ಒಡಂಬಡಿಕೆ ಮತ್ತದರ ತದನಂತರದ ವಿಧಿವಿಧಾನಗಳ ಮುಂದುವರಿಕೆ ಕುರಿತು ರಚಿಸಲಾಗಿದ್ದ ಜಂಟಿ ಸಲಹಾ ಸಮಿತಿಯಲ್ಲಿ ಕಾರ್ಯ ನಿರ್ವಹಿಸಿದ ನನ್ನ ಆತ್ಮೀಯ ಸ್ನೇಹಿತ ಶ್ರೀ ತುಳಸೀದಾಸ್‌ರವರು ಈ ಒಂದು ಬಹು ಮುಖ್ಯ ಚರ್ಚೆಯನ್ನು ಮೊದಲು ಪ್ರಾರಂಭ ಮಾಡಿದ್ದಿದ್ದರೆ ಒಳ್ಳೆಯದಿತ್ತು. ಶ್ರೀ ತುಳಸೀದಾಸ್‌ರವರು ಗಟ್ಟಿ ಹೃದಯದ ವ್ಯವಹಾರಸ್ಥರು, ಹೀಗಾಗಿ ಶ್ರೀಯುತರು ಅವರ ಚರ್ಚೆಗಳಿಗೆ ಸಂಬಂಧಿಸಿದಂತೆ, ರೈಲ್ವೆ ಹಣಕಾಸಿನ ಸ್ಥಿತಿಗತಿ ಉತ್ತಮವಾಗಿದೆಯೆ? ಸನಿಹದಲ್ಲಿಯೇ ಅದರ ನಿರೀಕ್ಷೆಗಳು ಭರವಸೆ ಹುಟ್ಟಿಸುತ್ತವೆಯೇ? ಎಂಬ ಪ್ರಶ್ನೆಗಳನ್ನು ಸಮರ್ಥವಾಗಿ ಪರಿಸೀಲಿಸಿ, ಆ ಪ್ರಶ್ನೆಗಳಿಗೆ ಸಮಂಜಸ ಉತ್ತರಗಳನ್ನು ನೀಡುತ್ತಿದ್ದರು. ಅಷ್ಟೇನೂ ವ್ಯವಹಾರ ಚತುರನಲ್ಲದ ನನಗೆ ಅಂಥ ಚರ್ಚೆಯನ್ನು ಕೇವಲ ಮಿತಿಯೊಳಗಷ್ಟೇ ಮಾಡಲು ಸಾಧ್ಯ. ತಮ್ಮ ಅನುಮತಿ ಮೇರೆಗೆ ನಾನು ಈ ಸಮಸ್ಯೆಯನ್ನು ಒಟ್ಟಾರೆ ಬೇರೆಯದೇ ಆದ ದೃಷ್ಟಿಕೋನದಿಂದ ನೋಡಲು ಉದ್ದೇಶಿಸಿದ್ದೇನೆ. ಉಭಯ ಸದನಗಳ ಸನ್ಮಾನ್ಯ ಸದಸ್ಯರನ್ನೊಳಗೊಂಡಂಥ ಬಹುಮುಖ್ಯವಾದ ಈ ಸಮಿತಿಯ ಗೌರವಾನ್ವಿತ ಅಧ್ಯಕ್ಷರೇ, ಸ್ಥಾಯೀ ಸಮಿತಿ, ಜಂಟಿ ಸಲಹಾ ಸಮಿತಿ ಹಾಗೂ ಇನ್ನಿತರ ಅನೇಕ ಸಮಿತಿಗಳಲ್ಲಿ ತಮ್ಮ ಜೊತೆ ಒಬ್ಬನಾಗಿ ಕೆಲಸ ಮಾಡಿರುವ ನನಗೆ, ತಾವು ಸಮರ್ಥ ರೀತಿಯಿಂದ ಮತ್ತು ಚುರುಕು ದೃಷ್ಟಿಯಿಂದ ಸಾಕ್ಷಿಗಳಿಗೆ ಮತ್ತು ಇತರರಿಗೆ ಪಾಟಿ ಸವಾಲುಗಳನ್ನು ಹಾಕುವುದರ ಮೂಲಕ ಅವರಿಂದ ಹೇಗೆ ಮಾಹಿತಿ ಪಡೆಯುತ್ತಿದ್ದಿರೆಂದು ನನಗೆ ಚೆನ್ನಾಗಿ ತಿಳಿದಿದೆ. ಈ ಬಗ್ಗೆ ಹೇಳಿಕೆಯೊಂದನ್ನು ಸದನದಲ್ಲಿ ನೀಡಲು ನನಗೆ ಒಂದು ರೀತಿಯಲ್ಲಿ ನೋವುಂಟಾಗುತ್ತದೆ. ಆದರೂ, ಈ ಸದನ ಸಹಕರಿಸುವುದೆಂದು ನಾನು

* ರೈಲ್ವೆ ಒಡಂಬಡಿಕಾ ಸಮಿತಿಯ ವರದಿಗೆ ಸಂಬಂಧಪಟ್ಟ ನಿರ್ಣಯದ ಮೇಲಿನ ಚರ್ಚೆಯಿಂದ: ಲೋಕಸಭಾ 16-12-1954 ಸಿಸ: 2929:2920ದ 2929-2940.

ಭಾವಿಸುತ್ತೇನೆ. ಅಂದರೆ, ರೈಲ್ವೆ ಆಡಳಿತ ವ್ಯವಸ್ಥೆಯ ಪ್ರತಿಯೊಂದೂ ಅಂಶವನ್ನು ಈ ವರದಿ ಪ್ರಸ್ತಾಪಿಸಿದೆ. ಆದರೆ, ಬಹುಮುಖ್ಯವಾದ ಸಮಸ್ಯೆಯನ್ನು ಇತ್ಯರ್ಥಗೊಳಿಸುವಲ್ಲಿ ಕನಿಷ್ಠ ಆರು ಸಭೆಗಳನ್ನು ಸಮಿತಿ ನಡೆಸಿಲ್ಲ. ಅನೇಕ ಸಮಿತಿಗಳಲ್ಲಿ ತಮ್ಮ ಜೊತೆ ನಾನು ಕೆಲಸ ಮಾಡಿರುವುದನ್ನು ನೆನಪಿಸುತ್ತಾ, ನಾನು ಈಗಾಗಲೇ ಹೇಳಿರುವಂತೆ ಈ ಸದನದ ಉಪಾಧ್ಯಕ್ಷರೇ ವಿಶೇಷವಾಗಿ ಈ ಸಮಿತಿಯ ಅಧ್ಯಕ್ಷರಾಗಿದ್ದುದರಿಂದ ಸಮಿತಿಯ ಸಿಬ್ಬಂದಿಯವರ ಸಾಮರ್ಥ್ಯ ಅಥವಾ ನಿಷ್ಠೆ ಅಥವಾ ಸಮಿತಿಯ ಕಾರ್ಯ ವಿಧಾನಗಳ ಮೇಲೆ ಸಂಶಯ ವ್ಯಕ್ತಪಡಿಸಲು ನಾನು ಪ್ರಯತ್ನಿಸುತ್ತಿಲ್ಲ. ಆದರೆ, ನನ್ನ ವಿಷಾದವಿಷ್ಟೆ. ಅದೇನೆಂದರೆ, ರೈಲ್ವೆ ವಿಂಗಡನಾ ಒಡಂಬಡಿಕೆಯ ಅನೇಕ ಅಂಶಗಳ ಬಗ್ಗೆ ಒಳಹೊಕ್ಕು ನೋಡುವ ಸಮಿತಿಯ ತಾಂತ್ರಿಕ ಸಾಮರ್ಥ್ಯ ಯಾವ ರೀತಿಯಲ್ಲಿರಬೇಕಾಗಿತ್ತೋ ಆ ರೀತಿಯಲ್ಲಿ ಇರಲಿಲ್ಲ. ಈ ಸಮಸ್ಯೆಯನ್ನು ಇತ್ಯರ್ಥಗೊಳಿಸುವಲ್ಲಿ ಜಂಟಿ ಸಂಸದೀಯ ಸಮಿತಿಗಿಂತಲೂ ತಜ್ಞರ ಸಮಿತಿಯೇ ಹೆಚ್ಚು ಸೂಕ್ತವಾಗುತ್ತಿತ್ತೆಂದು ನನಗನ್ನಿಸುತ್ತದೆ.

ತಮಗೆ ನೆನಪಿರುವಂತೆ, 1924 ರಲ್ಲಿ ಈ ರೈಲ್ವೆ ವಿಂಗಡನಾ ಒಡಂಬಡಿಕೆಯನ್ನು ಸಾಕಾರಗೊಳಿಸಿದಾಗ, ರೈಲ್ವೆ ಆಡಳಿತ ಮತ್ತು ಹಣಕಾಸುಗಳ ಬಗ್ಗೆ ಸುದೀರ್ಘ ಮತ್ತು ವಿವರವಾದ ತಾಂತ್ರಿಕ ವಿಚಾರಣೆಯ ನಂತರ ತೆಗೆದುಕೊಂಡ ತೀರ್ಮಾನದ ಆಧಾರದ ಮೇಲೆ ಅದನ್ನು ರೂಪಿಸಲಾಯಿತು. ಈ ಬಗ್ಗೆ ನನಗೆ ಚೆನ್ನಾಗಿ ಗೊತ್ತಿದ್ದು, ತಾವು ಸಹ ಈ ಅಂಶವನ್ನು ಒಪ್ಪುತ್ತೀರೆಂಬ ಭರವಸೆ ನನಗಿದೆ. ನಾನು ಈಗ ಹೇಳಬೇಕಾಗಿರುವುದೇನೆಂದರೆ ಈ ಸದನ ಮತ್ತು ಆ ಸದನಗಳ ಜಂಟಿ ಸಲಹಾ ಸಮಿತಿಯೇ ಈ ಸಮಸ್ಯೆಯ ಒಳಹೊಕ್ಕು ಶಿಫಾರಸು ಮಾಡಬೇಕು. ಇದು ವಿಧಿಬದ್ಧವಾದ ಸಂಸದೀಯ ಪ್ರಕ್ರಿಯೆ. ಇದರಲ್ಲಿ ಸಂದೇಹವೇ ಇಲ್ಲ. ಹಾಗೆ ಮಾಡಿದಂಥ ಶಿಫಾರಸುಗಳ ಆಧಾರದ ಮೇಲೆ ನನ್ನ ಆತ್ಮೀಯ ಸ್ನೇಹಿತರಾದ ಮಾನ್ಯ ರೈಲ್ವೆ ಸಚಿವ ಶ್ರೀ ಲಾಲ್‌ಬಹದ್ದೂರ್ ಶಾಸ್ತ್ರಿಯವರು ನಿರ್ಣಯವನ್ನು ಮಂಡಿಸಬೇಕಾಗುತ್ತದೆ. ಕೇವಲ 6 ಸಭೆಯ ಉಪವೇಶನಗಳ ಒಳಗೇ ಅತ್ಯಂತ ಜಟಿಲವಾದ ಆರ್ಥಿಕ ಮತ್ತು ಆಡಳಿತ ಸಮಸ್ಯೆಯನ್ನು ಇತ್ಯರ್ಥ ಮಾಡಿದ ಅಂಶ ನನಗೆ ತೀವ್ರ ಆತಂಕ ಉಂಟು ಮಾಡಿದ್ದು, ಸಮಿತಿಯ ಶಿಫಾರಸುಗಳಿಗೆ ಸಂಬಂಧಿಸಿದಂತೆ, ಈ ಕ್ರಮ, ವಿಶಾಲವಾದ ಈ ದೇಶಕ್ಕಷ್ಟೇ ಅಲ್ಲ, ಈ ಸದನದ ಘನತೆಗೂ ತಕ್ಕದ್ದಾಗಿಲ್ಲ ಎನಿಸುತ್ತದೆ.

ವರದಿಯಲ್ಲಿ ಉಲ್ಲೇಖಿಸಿದಂತೆ, ಸಮಿತಿಯ ಕೆಲವು ಅಭಿಪ್ರಾಯಗಳನ್ನು ಪರಿಶೀಲಿಸಲು ಇಚ್ಛಿಸುತ್ತೇನೆ. ರೈಲ್ವೆ ಮಂಡಲಿಯು ಒದಗಿಸಿದ ಮಾಹಿತಿ ಮತ್ತು ಸಲಹೆಗಳ ಮೇಲೆ ಸಮಿತಿ ಅತಿಯಾಗಿ ಅವಲಂಬಿತವಾಗಿದೆ ಎಂದು ಹೇಳಲು ವಿಷಾದವೆನಿಸುತ್ತದೆ. ರಾಜ್ಯಾಂಗ ವ್ಯವಸ್ಥೆ ಜಾರಿಗೆ ಬರುವ ಪೂರ್ವದಲ್ಲಿಯೇ ಸುಮಾರು 25 ವರ್ಷಗಳಷ್ಟು ಸೇವೆಯನ್ನು ಸಲ್ಲಿಸಿರುವ ತಾವು ಈ ಸದನದ ಗೌರವಾನ್ವಿತ ಸದಸ್ಯರಾಗಿದ್ದೀರಿ. ಅಲ್ಲದೆ, ಈ ರೈಲ್ವೆ ಮಂಡಲಿಯ ಸಮಸ್ಯೆಗಳ ಮೇಲೆ ಬೆಳಕು ಚೆಲ್ಲುವಲ್ಲಿ ತಾವು ಸಲ್ಲಿಸಿದ ಅಪೂರ್ವ ಸೇವೆ ನನ್ನ ನೆನಪಿನಲ್ಲಿದೆ. ರೈಲ್ವೆ ಮಂಡಲಿಯು ಒಂದು ಪರಾಧೀನ ಸಾಮ್ರಾಜ್ಯಶಾಹೀ ಸಂಸ್ಥೆ

ಎಂದರೆ ತಪ್ಪಾಗಲಾರದು. ಇದು ತೆರೆಯಲು ಅಸಾಧ್ಯವಾದ ಮುಚ್ಚಿದ ಮನೆಯಾಗಿದೆ. ಇದರ ಕಾರ್ಯ ಚಟುವಟಿಕೆಗಳು ಹಾಗೂ ವಿವಿಧ ಅಂಶಗಳ ಬಗ್ಗೆ ಆಳವಾಗಿ ತಿಳಿಯುವ ಯಾವುದೇ ಪ್ರಯತ್ನಗಳಿಗೆ ಮತ್ತು ಆ ನಿಟ್ಟಿನಲ್ಲಿ ಈ ಸದನದ ಸದಸ್ಯರ ಇಚ್ಛೆಗಳಿಗೆ ಪ್ರೋತ್ಸಾಹದಾಯಕ ಫಲಿತಾಂಶ ಎಂದೂ ದೊರಕುವುದಿಲ್ಲ.

ಈ ಸಂಬಂಧದಲ್ಲಿ ಸಮಿತಿಯು ಸಲ್ಲಿಸಿದ ವರದಿಯ 18ನೇ ಪ್ಯಾರಾದ ಬಗ್ಗೆ ತಮ್ಮ ಗಮನವನ್ನು ಸೆಳೆಯಬೇಕಾಗಿದೆ. ಇದು ಅತಿಯಾದ ಬಂಡವಾಳೀಕರಣದ ಸಮಸ್ಯೆಯನ್ನು ಕುರಿತದ್ದಾಗಿದೆ. ಪ್ಯಾರಾ ಈ ರೀತಿ ಹೇಳುತ್ತದೆ:

> "ಅತಿಯಾದ ಬಂಡವಾಳೀಕರಣದ ಅಂಶವನ್ನು ರೈಲ್ವೆ ಮಂಡಲಿಯು ಸಂಕ್ಷಿಪ್ತವಾಗಿ ನಿಷ್ಕರ್ಷಿಸಬೇಕು".

ಉಭಯ ಸದನಗಳ ಜಂಟಿ ಸಲಹಾ ಸಮತಿಯು ಈ ಒಂದು ತೀರ್ಮಾನಕ್ಕೆ ಬರಬಾರದಿತ್ತು ಎಂದು ಹೇಳಲು ನನಗೆ ವಿಷಾದವಾಗುತ್ತವೆ. ರೈಲ್ವೆ ಹಣಕಾಸು ಮಿತಿಮೀರಿದ ಬಂಡವಾಳದಿಂದ ಕೂಡಿದೆ ಅಥವಾ ಇಲ್ಲ ಎಂಬುದರ ನಿಷ್ಕರ್ಷೆ ರೈಲ್ವೆ ಮಂಡಲಿಗೆ ಸೇರಿದ ವಿಷಯವಲ್ಲ. ಅದು ಸಮರ್ಪಕವಾಗಿದೆಯೇ ಅಥವಾ ಇಲ್ಲವೇ ಎಂಬುದನ್ನು ನಿಷ್ಕರ್ಷಿಸುವುದು ಸಮಿತಿಗೆ ಬಿಟ್ಟ ವಿಷಯ. ಅರ್ಥಾತ್ ಈ ಸದನಕ್ಕೆ ಸೇರಿದ್ದು. ಈ ಸದನದ ಮುಂದೆ ಸಮಿತಿಯ ಶಿಫಾರಸುಗಳನ್ನು ಮಂಡಿಸಿದ ಕ್ರಮ ಹಾಗೂ ಆ ಶಿಫಾರಸುಗಳ ಆಧಾರದ ಮೇಲೆ ನನ್ನ ಸ್ನೇಹಿತರಾದ ಮಾನ್ಯ ರೈಲ್ವೆ ಸಚಿವರು ನಿರ್ಣಯವನ್ನು ಸದನದ ಮುಂದೆ ತಂದ ರೀತಿ ನನಗೆ ಕಳವಳ ಉಂಟು ಮಾಡಿದ್ದರಿಂದ ಈ ನನ್ನ ಅಭಿಪ್ರಾಯವನ್ನು ಹೇಳಬೇಕಾಯಿತು. ಅದಕ್ಕಾಗಿ ತಮ್ಮ ಕ್ಷಮೆ ಕೋರುತ್ತೇನೆ. ನಿರ್ಣಯದ ಭಾಷೆ ಅತ್ಯಂತ ಸ್ಪಷ್ಟವಾಗಿದೆ:

> "............. ಸಾಮಾನ್ಯ ಹಣಕಾಸಿನಿಂದ ರೈಲ್ವೆ ಹಣಕಾಸನ್ನು ಬೇರ್ಪಡಿಸುವುದಕ್ಕೆ ಸಂಬಂಧಪಟ್ಟಂತೆ ರೈಲ್ವೆ ಸಂಸ್ಥೆಯು ಪ್ರಸ್ತುತ, ಸಾಮಾನ್ಯ ರಾಜಸ್ವಗಳಿಗೆ ಹಾಗೂ ಪೂರಕ ಹಣಕಾಸುಗಳಿಗೆ ನೀಡಬೇಕಾಗುವ ಲಾಭಾಂಶದ ದರವನ್ನು ಪರಿಶೀಲಿಸಲು ನೇಮಿಸಿದ ಸಮಿತಿಯ ವರದಿಯಲ್ಲಿ ಒಳಗೊಂಡಿರುವ ಶಿಫಾರಸುಗಳನ್ನು ಅನುಮೋದಿಸಿದೆ............".

ವರದಿಯ ಶಿಫಾರಸ್ಸುಗಳಷ್ಟೇ ಅಲ್ಲದೆ, ಈ ವರದಿಯಲ್ಲಿನ ಪ್ರತಿಯೊಂದು ವಾಕ್ಯಗಳಲ್ಲಿ ಅಡಗಿರುವ ಅನೇಕ ಇಂಗಿತಗಳ ಬಗ್ಗೆ ತಮಗೆ ವೈಯಕ್ತಿಕವಾಗಿ ತಿಳಿದಿದೆ. ಪರಿಣಾಮವಾಗಿ, ಉಭಯ ಸದನಗಳ ಜಂಟಿ ಸಲಹಾ ಸಮತಿಯ ವರದಿಯನ್ನು ಒಂದು ರೀತಿಯಲ್ಲಿ ಸಂಶಯಾಸ್ಪದ ದೃಷ್ಟಿಯಿಂದ ನೋಡಬೇಕಾಗುತ್ತದೆ.

ಈ ವಿಷಯಕ್ಕೆ ಸಂಬಂಧಪಟ್ಟ ಅಪಾರ ಸಾಹಿತ್ಯವನ್ನು ಓದಲು ನಾನು ತೆಗೆದುಕೊಂಡ ಕ್ರಮವನ್ನು ತಿಳಿಯಪಡಿಸುವ ಸಲುವಾಗಿ ಹಾಗೂ ಸಮಸ್ಯೆಯ ಗಹನತೆಯನ್ನು ಸ್ಪಷ್ಟಪಡಿಸುವ ದೃಷ್ಟಿಯಿಂದ ಪ್ಯಾರಾ 30ರ ಕಡೆಗೆ ಈ ಸದನದ ಗಮನವನ್ನು ವಿಶೇಷವಾಗಿ

ಸೆಳೆಯಬಯಸುತ್ತೇನೆ. ಆ ಪ್ಯಾರಾ ಏನನ್ನು ಹೇಳುತ್ತದೆ? ಈ ವಾಕ್ಯವು 14ನೇ ಪುಟದ ಕೆಳಭಾಗದಲ್ಲಿ ಕಂಡುಬರುತ್ತಿದ್ದು 15ನೇ ಪುಟಕ್ಕೂ ಅದು ಮುಂದುವರೆದಿದೆ:

> "ಒಂದು ವೇಳೆ ಅಭಿವೃದ್ಧಿ ನಿಧಿಯು ತನ್ನದೇ ಆದ ಸಂಪನ್ಮೂಲಗಳಿಂದ, ನಿಧಿಯ ಖರ್ಚಿಗೆ ಹಾಕಬಹುದಾದ ವೆಚ್ಚಗಳನ್ನು ಭರಿಸುವ ಸ್ಥಿತಿಯಲ್ಲಿ ಇಲ್ಲದಿದ್ದಲ್ಲಿ, ಸಾಮಾನ್ಯ ರಾಜಸ್ವಗಳಿಂದ ಅಭಿವೃದ್ಧಿ ಸ್ವರೂಪದ ಯೋಜನೆಗಳು ಅಥವಾ ಕಾಮಗಾರಿಗಳ ಉಪಯೋಗಕ್ಕಾಗಿ ರೈಲ್ವೆಗೆ ಹಣವನ್ನು ಮುಂಗಡವಾಗಿ ನೀಡಬೇಕೆಂದು, ಸಾಕಷ್ಟು ಚರ್ಚೆಯ ನಂತರ ಸಮಿತಿಯು ಅಂತಿಮ ತೀರ್ಮಾನಕ್ಕೆ ಬಂದಿದೆ".

ಸವಕಳಿ ನಿಧಿ, ಮೀಸಲು ನಿಧಿ, ಅಭಿವೃದ್ಧಿ ನಿಧಿ ಇತ್ಯಾದಿ., ಇತ್ಯಾದಿ.,ಗಳಿಗೆ ಅಗತ್ಯ ಹಣ ತೊಡಗಿಸಲು ಮಾನ್ಯ ರೈಲ್ವೆ ಮತ್ತು ಸಾರಿಗೆ ಸಚಿವರು ನಿರ್ಣಯಿಸಿದಂಥ ಸಂದರ್ಭದಲ್ಲಿ ಅನೇಕ ಬದಲಾವಣೆ ಮತ್ತು ಹೊಂದಾಣಿಕೆಗಳು ಆಗಿವೆ ಎಂದು ನನಗನಿಸುತ್ತದೆ.**

ಈ ಒಂದು ನಿರ್ದಿಷ್ಟ ನಿರ್ಣಯವನ್ನು ಮಾತ್ರವೇ ಏಕೆ ಸದನದಲ್ಲಿ ತರಬೇಕಾಗಿತ್ತು ಎಂಬುದಕ್ಕೆ ಅನೇಕ ಕಾರಣಗಳಿವೆ. ಕಾರ್ಯಕಲಾಪಗಳ ಸಲಹಾ ಸಮಿತಿಯ ಸದಸ್ಯನಾಗಿರುವ ನನಗೆ ಆ ಕಾರಣಗಳು ಗೊತ್ತಿವೆ. ಕೊನೆಯ ಹಂತದಲ್ಲಿ ಇದನ್ನು ಮಂಡಿಸಲಾಗಿದೆ. ಅವುಗಳ ಬಗ್ಗೆ ವಿವರವಾಗಿ ವಿವೇಚಿಸಲು ನನಗೆ ಸಾಧ್ಯವಾಗುತ್ತಿಲ್ಲ. ಆದರೆ, ಒಂದು ಸಂಸ್ಥೆಯ ಭವಿಷ್ಯವನ್ನು ಅಂದರೆ 900 ಕೋಟಿ ರೂಪಾಯಿಗಳನ್ನೊಳಗೊಂಡಂಥ ಒಂದು ಸಂಸ್ಥೆಯ ಭವಿಷ್ಯವನ್ನು ಈ ರೀತಿಯಲ್ಲಿ ಇತ್ಯರ್ಥಪಡಿಸಲು ಉದ್ದೇಶಿಸಲಾಗಿದೆ. ರೈಲ್ವೆ ಮತ್ತು ಸಾಮಾನ್ಯ ಹಣಕಾಸುಗಳಿಗೆ ಸಂಬಂಧಪಟ್ಟಂತೆ ಅರ್ಹ ತಾಂತ್ರಿಕ ಪರಿಣಿತರಿಂದ ವಿಚಾರಣೆಯನ್ನು ನಡೆಸಬಹುದಿತ್ತೆಂದೂ ನಾನು ಪುನರುಚ್ಚರಿಸುತ್ತೇನೆ.***

ಇನ್ನು 5 ವರ್ಷಗಳವರೆಗೆ ಯಥಾಸ್ಥಿತಿಯನ್ನು ಮುಂದುವರಿಸಿಕೊಂಡು ಹೋಗಬೇಕೆಂಬುದು ಪರಿಣಾಮಕಾರಿಯಾದ ಶಿಫಾರಸು. ಈ ಒಂದು ನಿರ್ದಿಷ್ಟವಾದ ಶಿಫಾರಸಿನ ಕಡೆಗೆ ಈ ಸದನದ ಗಮನವನ್ನು ಸೆಳೆಯಲು ನಾನು ಪ್ರಯತ್ನಿಸಿರುವೆ. ಇದನ್ನು ಅವರ ಶಿಫಾರಸುಗಳ ಪಟ್ಟಿಯಲ್ಲಿ ಕ್ರಮಸಂಖ್ಯೆ 181 (ಪ್ಯಾರಾ - 37) ಕಾಣಬಹುದು. ಈ ಐದು ವರ್ಷಗಳಲ್ಲಿ ರೈಲ್ವೆಯು ನಿರ್ವಹಿಸಿದ ಸಾಮಾನ್ಯ ಕಾರ್ಯ ನಿರ್ವಹಣೆಯ ಒಂದು ಪರಿಶೀಲನಾ ವರದಿಯನ್ನು ರೈಲ್ವೆ ಮಂತ್ರಾಲಯವು ಮುಂದಿನ ಸಮಿತಿಯವರ ಪರಿಗಣನೆಗೆ

---

** ಈ ಹಂತದಲ್ಲಿ, ಮಾನ್ಯ ಉಪ ಸಭಾಧ್ಯಕ್ಷರು, ಸಮಿತಿಯ ಅಧ್ಯಕ್ಷರಾಗಿದ್ದುದರಿಂದ, ಆ ವಿಷಯದಲ್ಲಿ ವೈಯಕ್ತಿಕ ಆಸಕ್ತಿ ಇರುವುದಾಗಿಯೂ ಮತ್ತು ಯಾವುದೇ ಇಕ್ಕಟ್ಟಿನ ಪ್ರಸಂಗ ಉದ್ಭವಿಸುವುದಿಲ್ಲವೆಂದೂ ಅಭಿಪ್ರಾಯಪಟ್ಟರು.

*** ರೈಲ್ವೆ ಆಯವ್ಯಯದ ಮೇಲಿನ ಸಾಮಾನ್ಯ ಚರ್ಚೆಯಿಂದ; ಲೋಕಸಭಾ 5ನೇ ಮಾರ್ಚ್ 1958 ಸಿಸಿ. 1621-31.

ಸಲ್ಲಿಸಬೇಕು. ಇನ್ನೊಂದು ಅರ್ಥದಲ್ಲಿ ಹೇಳುವುದಾದರೆ, ರೈಲ್ವೆ ಮಂಡಲಿಯ. ಭಾರತದಲ್ಲಿ ರೈಲ್ವೆ ವ್ಯವಸ್ಥೆಯ ಆಡಳಿತವನ್ನು ಇದುವರೆಗೆ ಹೇಗೆ ನಡೆಸಿಕೊಂಡು ಬಂದಿರುತ್ತದೆಯೋ ಹಾಗೆ ಮುಂದಿನ ಪೂರ್ತಿ ಐದು ವರ್ಷಗಳವರೆಗೆ ನಡೆಸುವಂತೆ ರೈಲ್ವೆ ಮಂಡಲಿಗೆ ನೀಡುವ ಪೂರ್ಣಾಧಿಕಾರದ ಪತ್ರ ಇದು. ಇದನ್ನು ಯಾವ ರೀತಿಯಲ್ಲಿ ನಿರ್ವಹಿಸಬೇಕಾಗಿತ್ತೋ ಆ ರೀತಿಯಲ್ಲಿ ನಿರ್ವಹಿಸದಿರುವುದು ವಿಷಾದಕರ ಸಂಗತಿ. ಪ್ರತಿ ವರ್ಷ ಮಾಡುವ ರೈಲ್ವೆ ಬೇಡಿಕೆಗಳ ಮೇಲಿನ ಚರ್ಚೆಯ ಸಮಯದಲ್ಲಿ, ನಮ್ಮ ರಾಷ್ಟ್ರದ ಬಹುದೊಡ್ಡ ಜನೋಪಯೋಗಿ ಸಂಸ್ಥೆಯ ಅನೇಕ ಆಡಳಿತಾತ್ಮಕ ಹಾಗೂ ಆರ್ಥಿಕ ಸಮಸ್ಯೆಗಳನ್ನು ಕುರಿತು ಚರ್ಚಿಸುವ ಸದವಕಾಶ ಈ ಸದನಕ್ಕಿದೆ ಎಂಬುದು ನನಗೆ ಗೊತ್ತಿದೆ. ಇದು ಪರಿಣಿತರಿಗಾಗಿ ಬಿಟ್ಟಂಥ ವಿಷಯವಾಗಿದ್ದು ಯಾವ ರೀತಿಯಲ್ಲಿ ಇದನ್ನು ನಿರ್ವಹಿಸಬೇಕೆಂದು ಉದ್ದೇಶಿಸಲಾಗಿದೆಯೋ ಅದರಂತೆ ಇತ್ಯರ್ಥಗೊಳಿಸುವುದು ಸಲ್ಲ. ನನ್ನ ತಿದ್ದುಪಡಿಯನ್ನು ಕುರಿತಂತೆ, ನಾನು ಇನ್ನೂ ವಿವರವಾಗಿ ಚರ್ಚಿಸಲು ಇಷ್ಟಪಡುತ್ತೇನೆ. ಈ ಹಂತದಲ್ಲಿ ಮಾನ್ಯ ಉಪಾಧ್ಯಕ್ಷರು, ಒಡಂಬಡಿಕಾ ಸಮಿತಿಯು, ಅರ್ಥಾತ್ ಸಂಸತ್ತಿನ ಉಭಯ ಸದನಗಳ ಸಮಿತಿಯು ಸಭೆ ಸೇರಿ ಚರ್ಚಿಸುವ ಮೊದಲೇ ರೈಲ್ವೆ ಮಂಡಲಿಯು ಮನವಿ ಇತ್ಯಾದಿಗಳನ್ನು ಅದರ ಮುಂದೆ ಮಂಡಿಸಿದರೂ ಸಹ, ಒಡಂಬಡಿಕಾ ಸಮಿತಿಯು ಸ್ವತಂತ್ರವಾಗಿ ನಿರ್ಣಯ ತೆಗೆದುಕೊಳ್ಳಲು ಅನುಕೂಲವಾಗುವಂತೆ ಪರಿಣಿತ ಸಮಿತಿಯಿಂದ ವಿವರವಾದ ತನಿಖೆ ನಡೆಯಬೇಕೆಂಬುದು ಮಾನ್ಯ ಸದಸ್ಯರ ಇಚ್ಛೆ ಎಂದು ಈ ಸದನ ಅರ್ಥೈಸಿಕೊಳ್ಳಬಹುದೇ ಎನ್ನುವುದನ್ನು ಸ್ಪಷ್ಟಪಡಿಸಬೇಕೆಂದು ನನ್ನನ್ನು ಕೇಳಿದರು.

ನಾನು ಒಪ್ಪಿ ಹೇಳಿದೆ. "ಇದೇ ಮುಖ್ಯವಾದ ಅಂಶ". ಅತ್ಯಂತ ಗೊಂದಲಮಯವಾದ ಹಾಗೂ ಕಷ್ಟಕರವಾದ ಸಮಸ್ಯೆಗಳು ಇಲ್ಲಿದ್ದು, ಅವುಗಳನ್ನು ನಿಭಾಯಿಸುವ ಕಾರ್ಯಕ್ಕೆ ಸಮಿತಿಯು ಕೊಡಬಹುದಾದ ಸಮಯ ಹಾಗೂ ತಾಂತ್ರಿಕ ನೈಪುಣ್ಯತೆಗಳು ಸರಿಸಾಟಿಯಾಗಲಾರವು. ಇದೇ ನನ್ನ ವಾದದ ಅತೀ ಮುಖ್ಯ ಹಾಗೂ ಅಷ್ಟೇ ಪ್ರಧಾನವಾದ ಅಂಶ.

ನಾನು ಹೇಳುವುದರಲ್ಲಿ ವಾಸ್ತವಿಕವಾದಂಥ ತಪ್ಪುಗಳು ಕಂಡುಬಂದರೆ, ಅವುಗಳನ್ನು ಸನ್ಮಾನ್ಯ ಸ್ನೇಹಿತರಾದ ರೈಲ್ವೆ ಸಚಿವರು ಹಾಗೆಯೇ ಉಪ ರೈಲ್ವೆ ಸಚಿವರು ಸರಿಪಡಿಸಬಹುದು. ಸಾಗಣೆ ದರಗಳ ಸ್ವರೂಪವನ್ನು ಈಗ ನೋಡೋಣ. ನನ್ನ ಸ್ನೇಹಿತರಾದ ಶ್ರೀ ತುಳಸೀದಾಸ್ ಕಲಾಚಂದ್‌ರವರು ಈ ಅಂಶವನ್ನೇ ಸಾಮಾನ್ಯವಾಗಿ ಉಲ್ಲೇಖಿಸಿದರು. ಕಲ್ಲಿದ್ದಲು ಸಾಗಣೆ ಮೇಲಿನ ಸಾಗಣೆ ದರ ಅಸನ್ಸೋಲ್‌ದಿಂದ ಕಲ್ಕತ್ತದವರೆಗೆ, ಅಂದರೆ ಫಣಿಗಂಜ್ ಕಲ್ಲಿದ್ದಲು ಗಣಿಗಳಿಂದ 125 ಮೈಲುಗಳ ಅಂತರಕ್ಕೆ ರೂ. 5-7-0 ಇದೆ. 161 ಮೈಲುಗಳ ಅಂತರವಿರುವ ಧನಬಾದ್‌ನಿಂದ ಕಲ್ಕತ್ತದವರೆಗಿನ ದರ ರೂ. 7.- ಆಂಡ್ರಾದಿಂದ ಅದೇ ಸ್ಥಳಕ್ಕೆ 177 ಮೈಲುಗಳ ಅಂತರಕ್ಕೆ ಸಾಗಣೆದರ 7-10-0. ಮಾನ್ಯ ಸದಸ್ಯರುಗಳು ಈ ಒಂದು ಅಂಶವನ್ನು ನೆನಪಿನಲ್ಲಿಟ್ಟುಕೊಳ್ಳಬೇಕೆಂಬುದು ನನ್ನ ಬಯಕೆ. ಈಗ ಎರಡು ಬಗೆಯ ದರ ವ್ಯವಸ್ಥೆಗಳನ್ನು ಅಥವಾ ವಾಸ್ತವ ಸಾಗಣೆದರಗಳನ್ನು ತಮ್ಮ ಮುಂದಿಡುತ್ತೇನೆ. ಅವುಗಳು, ಈ ಎಲ್ಲಾ

ಸ್ಥಳಗಳಿಂದ ಬೊಂಬಾಯಿವರೆಗೆ ಹಾಗೂ ಎರಡನೆಯದಾಗಿ ಈ ಎಲ್ಲಾ ಸ್ಥಳಗಳಿಂದ ಅಹಮದಾಬಾದ್ ಮತ್ತು ಬರೋಡಗಳವರೆಗೆ, ಅಸ್ಸನ್ಸೋಲದಿಂದ ಬೊಂಬಾಯಿಯವರೆಗಿನ ಸಾಗಣೆ ದರ ರೂ. 18-3-0, ಒಟ್ಟು ಅಂತರ 1,216 ಮೈಲುಗಳು. ಅಸನ್ಸೋಲಿನಿಂದ ಅಹಮದಾಬಾದಿನವರೆಗಿರುವ 1,197 ಮೈಲುಗಳ ಅಂತರಕ್ಕೆ ಸಾಗಣೆ ದರ 20-3-0 ರೂ.ಗಳು. ಅನ್ಸೋಲಿನಿಂದ ಬರೋಡದವರೆಗಿನ 1,192 ಮೈಲುಗಳ ಅಂತರಕ್ಕೆ ರೂ. 20-3-0. ಅಂದರೆ, ಬೊಂಬಾಯಿಗಿಂತಲೂ ಕಡಿಮೆ ಅಂತರದಲ್ಲಿರುವ ಅಹಮದಾಬಾದ್ ಮತ್ತು ಬರೋಡಗಳಿಗೆ ಹೆಚ್ಚು ಸಾಗಣೆ ದರವನ್ನು ಕೊಡಬೇಕಾಗಿದೆ. ಕೇವಲ ಕೆಲವೇ ಕೆಲವು ಸೀಮಿತ ಪ್ರಕರಣಗಳನ್ನಷ್ಟೇ ಬೊಟ್ಟು ಮಾಡಿ ತೋರಿಸುತ್ತಿದ್ದೇನೆಂಬ ಶಂಕೆ ಬಾರದಿರಲು ಇನ್ನೂ ಎರಡು ಪ್ರಕರಣಗಳನ್ನು ಇಲ್ಲಿ ಉದಾಹರಿಸಲು ಇಚ್ಛಿಸುತ್ತೇನೆ. ಧನಬಾದಿನಿಂದ ಬೊಂಬಾಯಿಯವರೆಗೆ ಇರುವ 1,180 ಮೈಲುಗಳ ಅಂತರಕ್ಕೆ ಸಾಗಣೆ ದರ ರೂ. 18-3-0 ಕೇವಲ 1,155 ಮೈಲುಗಳಷ್ಟು ದೂರವಿರುವ ಧನಬಾದ್ ಮತ್ತು ಬರೋಡಾಗಳಿಗೆ ವಿಧಿಸುತ್ತಿರುವ ಸಾಗಣೆದರ 19-12-0. ರೂ.ಗಳು; ಧನಬಾದ್‌ನಿಂದ ಅಹಮದಾಬಾದ್‌ನವರೆಗೆ, ಅಂದರೆ 1,160 ಮೈಲುಗಳ ಅಂತರಕ್ಕೆ ಸಾಗಣೆ ದರ ರೂ. 19-14-0. ಇಂದೂರಿಗೆ ಸಂಬಂಧಪಟ್ಟಂತೆ ದರಗಳನ್ನು ಹೋಲಿಸಿ ನೋಡಿದಲ್ಲಿ ನನ್ನ ವಿವರಣೆಗಳು ಸಾರ್ವತ್ರಿಕವಾಗಿದ್ದು ಇದೇ ರಾಷ್ಟ್ರಕ್ಕೆ ಇವು ಅನ್ವಯವಾಗುತ್ತದೆಯೆಂಬುದು ಗೊತ್ತಾಗುತ್ತದೆ. ಪ್ರಯಾಣ ಮತ್ತು ಸಾಗಣೆ ದರಗಳ ಪರಿಷ್ಕರಣೆಯಲ್ಲಿ ಹೆಚ್ಚಳವಿರಬೇಕೆಂದು ಸಮಿತಿಯ ವರದಿಯಿಂದ, ಆ ಬಗ್ಗೆ ನಿರ್ದಿಷ್ಟವಾಗಿ ಸ್ಪಷ್ಟಪಡಿಸದಿದ್ದರೂ, ಒಂದು ಸಾಮಾನ್ಯ ಭಾವನೆ ಉಂಟಾಗುತ್ತದೆ.

ಈಗ ಪ್ಯಾರಾ 23ರ ಬಗ್ಗೆ ಉಲ್ಲೇಖಿಸಲು ಇಚ್ಛಿಸುತ್ತೇನೆ. ಈ ಸಂಬಂಧದಲ್ಲಿ ನನ್ನ ವಿವೇಚನೆಯಲ್ಲಿರುವ ಎರಡು ಮುಖ್ಯ ಅಂಶಗಳೆಂದರೆ, ವರದಿಯಲ್ಲಿ ತಿಳಿಸಿದಂತೆ ರೈಲ್ವೆ ಹಣಕಾಸುಗಳ ಸ್ಥಿತಿಗತಿ ಅಷ್ಟೇನು ಪ್ರೋತ್ಸಾಹದಾಯಕವಾಗಿಲ್ಲ. ಬಹಳ ಗೊಂದಲಮಯವಾಗಿವೆ. ರೂ. 5 ಕೋಟಿಯವರೆಗೆ ಕೊಡುಗೆಯನ್ನು ಹೆಚ್ಚಿಸಬೇಕೆಂಬ ಸೂಚನೆ ಖಂಡಿತವಾಗಿಯೂ ಪ್ರಯಾಣ ದರ ಮತ್ತು ಸಾಗಣೆ ದರಗಳ ಹೆಚ್ಚಳವನ್ನು ಅವಲಂಬಿಸಿದ್ದು, ಪರಿಣಾಮವಾಗಿ ಎಲ್ಲಾ ಬಾಬುಗಳಲ್ಲೂ 30 ಕೋಟಿ ರೂಪಾಯಿಗಳಿಂದ 35 ಕೋಟಿ ರೂಪಾಯಿಗಳ ಹೆಚ್ಚಳ ಆಗಬಹುದು.

ವರದಿಯ 7ನೇ ಪುಟದ ಪ್ಯಾರಾ 14 ರಲ್ಲಿ ಈ ರೀತಿಯಲ್ಲಿ ಹೇಳಲಾಗಿದೆ:-

"ಇಷ್ಟಾದರೂ, ಅವರು ಹೇಳಿರುವುದೇನೆಂದರೆ, ಸಾಮಾನ್ಯವಾಗಿ ಶುಲ್ಕ ದರವನ್ನು ಹೆಚ್ಚಿಸದ ಹೊರತು ಅಥವಾ ಲಾಭಾಂಶದ ದರವನ್ನು ಕಡಿಮೆಗೊಳಿಸುವುದರ ಮೂಲಕ ಲಾಭಾಂಶದ ಹೊಣೆಗಾರಿಕಾ ಮೊತ್ತವನ್ನು ಕಡಿಮೆ ಮಾಡದ ಹೊರತು ಮುಂದಿನ ಐದು ವರ್ಷಗಳಿಗೆ ಅಭಿವೃದ್ಧಿ ವೆಚ್ಚಗಳಿಗೆ ಆರ್ಥಿಕ ಸಹಾಯ ನೀಡುವ ಸಲುವಾಗಿ ಅಭಿವೃದ್ಧಿ ನಿಧಿಗೆ ಧನವಿನಿಯೋಗಿಸಲು ನಿಧಿಗಳು ಇದರಿಂದ ಲಭ್ಯವಾಗುವುದಿಲ್ಲ".

ರೈಲ್ವೆ ಹಣಕಾಸಿನ ಒಟ್ಟಾರೆ ಸ್ವರೂಪ ಈ ರಾಷ್ಟ್ರದ ಆರೋಗ್ಯ ಪೂರ್ಣ ಅರ್ಥ ವ್ಯವಸ್ಥೆಯ ಆಧಾರದ ಮೇಲೆ ನಿಂತಿದೆ. ಇದಕ್ಕೆ ಸಂಬಂಧಪಟ್ಟಂಥ ವಿವಿಧ ಬಾಬುಗಳನ್ನು ಎರಡು ವಿಸ್ತಾರವಾದ ವರ್ಗಗಳ ಅಡಿಯಲ್ಲಿ ತರಬಹುದು. ಅವುಗಳು ಪ್ರಯಾಣ ದರ ಮತ್ತು ಸಾಗಣೆ ದರ. ಇವೆರಡರಿಂದ ಮಾತ್ರ ರೈಲ್ವೆ ಆಡಳಿತದ ಹಣಕಾಸುಗಳಿಗೆ ದೃಢತೆ ನೀಡಲು ಸಾಧ್ಯ.

ಪ್ರಯಾಣ ದರ ಹಾಗೂ ಸಾಗಣೆದರ, ಅದರಲ್ಲಿಯೂ ವಿಶೇಷವಾಗಿ ಇದುವರೆವಿಗೂ ಸಾಗಣೆ ದರಗಳನ್ನು ಸಮಂಜಸ ಗೊಳಿಸದಿರುವುದು ನನಗೆ ಬಹಳ ಆತಂಕ ಉಂಟು ಮಾಡಿದೆ. ಇಂದು ಬೆಳಿಗ್ಗೆ ತಾನೆ ನನ್ನ ಸ್ನೇಹಿತರಾದ ಮಾನ್ಯ ಸಾರಿಗೆ ಮತ್ತು ರೈಲ್ವೆ ಉಪ ಮಂತ್ರಿಗಳು ರೈಲ್ವೆ ದರಗಳ ಟ್ರಿಬ್ಯುನಲ್‌ನ ಕಾರ್ಯವೈಖರಿಗೆ ಸಂಬಂಧಿಸಿದ ಒಂದು ಪ್ರಶ್ನೆಗೆ ಉತ್ತರಿಸಿದರು. ಈ ಸಂಬಂಧದಲ್ಲಿ ಸದರಿ ಟ್ರಿಬುನಲ್ ಬಗ್ಗೆ ಏನಾದರೂ ಉಲ್ಲೇಖವಿದೆಯೇ ಎಂದು ಅವರನ್ನು ಪ್ರಶ್ನಿಸಿದಾಗ ನಕಾರಾತ್ಮಕವಾಗಿ ಅವರು ಉತ್ತರಿಸಿದರು. ಅವರನ್ನು ಮತ್ತಷ್ಟು ಒತ್ತಾಯಿಸಿ ಕೇಳಿದಾಗ, ಈ ವಿಷಯ ಆಲೋಚನೆಯಲ್ಲಿದೆ ಎಂದಷ್ಟೇ ಹೇಳಿದರು. ಆದರೆ, ಈ ವಿಷಯ ಸುಮಾರು ವರ್ಷಗಳಿಂದಲೂ ಆಲೋಚನೆಯಲ್ಲಿಯೇ ಇದೆ. ಪ್ರಾಯಶಃ ಈ ವಿಷಯದ ಬಗ್ಗೆ ಒಂದು ನಿರ್ಣಯಕ್ಕೆ ಬರಲು ರೈಲ್ವೆ ಮಂಡಲಿ ಮತ್ತು ರೈಲ್ವೆ ಮಂತ್ರಾಲಯಗಳಿಗೆ ಇಷ್ಟವಿಲ್ಲವೆಂದು ನಾನು ಹೇಳುತ್ತಿಲ್ಲವಾದರೂ, ಅವುಗಳಿಗೆ ಸಾಧ್ಯವಾಗುತ್ತಿಲ್ಲ ಎಂದು ಹೇಳುತ್ತೇನೆ.

ರೈಲ್ವೆ ಮಂಡಲಿಯು ಆಯ್ಕೆ ಮಾಡಿಕೊಳ್ಳಬಹುದಾದ ಎರಡು ಮಾರ್ಗೋಪಾಯಗಳು ಇಲ್ಲಿವೆ. "ಟ್ರಿಬುನಲ್‌ಗೆ ಅಷ್ಟೇನು ಕೆಲಸವಿಲ್ಲ" ಈ ಪದಗಳನ್ನೇ ಅವರು ಉಪಯೋಗಿಸಿದರು. ಆರ್ಥಿಕ , ಕೈಗಾರಿಕಾ ಹಾಗೂ ಮತ್ತಿತರ ಸ್ಥಿತಿಗತಿಗಳಿಗನುಗುಣವಾಗಿ ಅವರೇಕೆ ಸಾಗಣೆ ದರಗಳನ್ನು ನಿರಂತರವಾಗಿ ಪರಿಶೀಲಿಸಬಾರದು? ಟ್ರಿಬುನಲ್ಲಿಗೆ ಮನವಿಗಳನ್ನೇಕೆ ಸಲ್ಲಿಸಬೇಕು? ಈ ನೆಲದ ಆರ್ಥಿಕ ಮತ್ತು ಕೈಗಾರಿಕಾ ಸ್ಥಿತಿಗತಿಗನುಸಾರ ನಿರಂತರ ಪರಿಶೀಲಿಸುವ ಪ್ರಕ್ರಿಯೆಯನ್ನು ಏಕೆ ಇಟ್ಟುಕೊಳ್ಳಬಾರದು? ರೈಲ್ವೆ ಸಾಗಣೆ ದರದ ಸ್ವರೂಪ ಸಂಪೂರ್ಣವಾಗಿ ಪರಿಷ್ಕೃತವಾಗಬೇಕು. ನಿಗದಿಪಡಿಸಲಾದ ಪ್ರಯಾಣ ದರ ಮತ್ತು ಸಾಗಣೆ ದರಗಳಲ್ಲಿ ಸಮಂಜಸತೆ ಇಲ್ಲ. ಈ ಒಂದು ದೃಷ್ಟಿಯಿಂದಲೇ ನಾನು ಒಂದು ರೈಲು ನಿಲ್ದಾಣದಿಂದ ಮತ್ತೊಂದು ರೈಲು ನಿಲ್ದಾಣಕ್ಕಿರುವ ಅಂಕಿ ಅಂಶಗಳನ್ನು ಉದಾಹರಿಸಿದ್ದೇನೆ ವಿನಃ ಈ ಸದನದ ಅಮೂಲ್ಯ ಸಮಯವನ್ನು ಪೋಲು ಮಾಡಬೇಕೆಂಬ ಉದ್ದೇಶದಿಂದಲ್ಲ.

ರೈಲ್ವೆ ದರಗಳ ಟ್ರಿಬುನಲ್ ತನಗೆ ದೂರುಗಳನ್ನು ಸಲ್ಲಿಸಲೆಂದು ನಿರೀಕ್ಷಿಸುತ್ತದೆ. ಸಾಗಣೆ ದರಗಳನ್ನು ಸಮಂಜಸಗೊಳಿಸುವ ಪ್ರಶ್ನೆಯನ್ನು ರೈಲ್ವೆ ದರಗಳ ಟ್ರಿಬುನಲ್ ನಿರ್ವಹಿಸಬಾರದೆಂಬ ಇಚ್ಛೆ ನನ್ನ ಸ್ನೇಹಿತರಾದ ರೈಲ್ವೆ ಸಚಿವರಿಗಿದ್ದಲ್ಲಿ ಅವರು ಬೇರೆಯದೇ ಆದ ಒಂದು ಸಂಸ್ಥೆಯನ್ನು ನೇಮಿಸಲಿ. ಟ್ರಿಬುನಲ್ ಒಂದು ಶಾಸನಾತ್ಮಕ ಸಂಸ್ಥೆಯಾಗಿದ್ದು,

ಸಂವಿಧಾನವನ್ನು ತಿದ್ದುಪಡಿ ಮಾಡದ ಹೊರತು, ಅದನ್ನು ನಿರ್ವಹಿಸಿಕೊಂಡು ಬರುವ ಹೊಣೆಗಾರಿಕೆ ನಮ್ಮ ಮೇಲಿದೆ. ಸಾಗಣೆ ದರಗಳನ್ನು ಸಮಂಜಸಗೊಳಿಸುವ ಅವಶ್ಯಕತೆ ತುರ್ತಾಗಿದ್ದು, ಅದನ್ನು ಈಡೇರಿಸದೇ ಇದ್ದಲ್ಲಿ ಕೈಗಾರೀಕರಣ ವಾತಾವರಣದ ಮೇಲೆ ತೀವ್ರ ಪ್ರತಿಕೂಲ ಪರಿಣಾಮ ಉಂಟಾಗುತ್ತದೆ. ಪರಿಣಾಮವಾಗಿ, ಮುಂದಿನ ವರ್ಷಗಳಲ್ಲಿ ಪಂಚವಾರ್ಷಿಕ ಯೋಜನೆ ಅಡಿಯಲ್ಲಿ ಯೋಜನೆಗಳನ್ನು ಸಮರ್ಪಕವಾಗಿ ಕಾರ್ಯರೂಪಕ್ಕೆ ತರಲು ಸರ್ಕಾರಕ್ಕೆ ಸಾಧ್ಯವಾಗುವುದಿಲ್ಲವೆಂಬ ಕಾರಣದಿಂದ ನಾನು ಒತ್ತಾಯಿಸುತ್ತಿದ್ದೇನೆ.

ನನ್ನ ಇನ್ನೆರಡು ಅಭಿಪ್ರಾಯಗಳನ್ನು ಇಲ್ಲಿ ಹೇಳಲು ಇಚ್ಛಿಸುತ್ತೇನೆ. ರೈಲ್ವೆಗಳು ವಾಣಿಜ್ಯ ಸಂಸ್ಥೆಗಳೋ ಅಥವಾ ಸಾರ್ವಜನಿಕ ಉಪಯೋಗಿ ಸಂಸ್ಥೆಗಳೋ ಎನ್ನುವ ಯುಕ್ತ ನಿರ್ಣಯಕ್ಕೆ ಜಂಟಿ ಸದನವು ಬರಲಾಗದಿದ್ದುದು ನನಗೆ ವ್ಯಥೆಯನ್ನುಂಟು ಮಾಡಿದೆ. ಏಕೆಂದರೆ, ನನ್ನ ವಾದದ ತಿರುಳೇ ಅದು. ಒಂದು ರೀತಿಯಲ್ಲಿ ಲೆಕ್ಕಪತ್ರಗಳ ಕೈಚಳಕವಿದೆಂದು ನಾನು ವಿನಮ್ರತೆಯಿಂದ ಹಾಗೂ ಅಷ್ಟೇ ಗಂಭೀರವಾಗಿ ಹೇಳುತ್ತೇನೆ. ಕೈಚಳಕ ಎಂಬುದನ್ನು ನಾನು ಸಾಮಾನ್ಯ ಅರ್ಥದಲ್ಲಿ ಉಪಯೋಗಿಸಿದ್ದೇನೆ ವಿನಃ ಹಣಕಾಸು ದುರುಪಯೋಗ ಎಂಬರ್ಥದಲ್ಲಿ ಅಲ್ಲ. ಅಂದರೆ ವಿವಿಧ ಅನುಕೂಲತೆಗಳಿಗಾಗಿ ಈ ಎಲ್ಲಾ ನಿಧಿಗಳನ್ನು ಒದಗಿಸಿ ನಂತರ ಅವುಗಳನ್ನು ಪುನರ್ ಹೊಂದಾಣಿಕೆ ಮಾಡಿಕೊಳ್ಳುವುದು ಎಂಬರ್ಥದಲ್ಲಿ ಹೇಳಿದ್ದೇನೆ. ಸಾರ್ವಜನಿಕ ಉಪಯೋಗಿ ಸಂಸ್ಥೆಯೇ ಅಥವಾ ವಾಣಿಜ್ಯ ಸಂಸ್ಥೆಯೇ ಎಂಬ ಅಂತಿಮ ನಿರ್ಧಾರಕ್ಕೆ ತಾವು ಬರದ ಹೊರತು, ಈ ಸಮಸ್ಯೆಗಳನ್ನು ಬಗೆಹರಿಸುವಂಥ ಕಾರ್ಯನೀತಿಗಳನ್ನು ರೂಪಿಸಲು ತಮಗೆ ಸಾಧ್ಯವಾಗುವುದಿಲ್ಲ.

ನಿಸ್ಸಂದೇಹವಾಗಿ ಹಾಗೂ ನಿಚ್ಚಳವಾಗಿ ಇದೊಂದು ಸಾರ್ವಜನಿಕ ಉಪಯೋಗಿ ಸಂಸ್ಥೆ. ಬೇರೆ ಸಂಸ್ಥೆಗಳನ್ನೇ ತೆಗೆದುಕೊಳ್ಳಿ. ದೂರವಾಣಿಗಳು ಸಾರ್ವಜನಿಕ ಉಪಯೋಗಿಗಳು, ಅಂಚೆಯೂ ಸಹ ಸಾರ್ವಜನಿಕ ಉಪಯೋಗಿ. ಗಜಿಯಾಬಾದ್‌ಗಾಗಲೀ ಅಥವಾ ಧನುಷ್‌ಕೋಟಿಗಾಗಲೀ ನಾನು ಪತ್ರವನ್ನು ಪೋಸ್ಟ್ ಮಾಡಿದರೆ ಅದರಲ್ಲಿ ಯಾವುದೇ ವ್ಯತ್ಯಾಸ ಕಂಡುಬರದು. ಮುಖ್ಯವಾದ ವ್ಯತ್ಯಾಸವನ್ನಷ್ಟೇ ನಾನು ಮಾಡುತ್ತಿದ್ದೇನೆ. ಇವುಗಳು ಸಾರ್ವಜನಿಕ ಉಪಯೋಗಿ ಸಂಸ್ಥೆಗಳು. ಈ ಅಂಶದ ಮೇಲೆ ಈ ಸದನವೇ ಸ್ಪಷ್ಟಪಡಿಸಬೇಕು.

ಇವೆರಡರ ಸಂಯೋಜನೆ ಎನ್ನುವ ನೀರಸ ಶಿಫಾರಸಿನಿಂದ ಅಥವಾ ಸಮಿತಿಯ ಅಂತಿಮ ನಿರ್ಣಯದಿಂದ ನನಗೆ ತೃಪ್ತಿಯಾಗಿಲ್ಲ. ಸಾರ್ವಜನಿಕ ಉಪಯೋಗಿ ಸಂಸ್ಥೆ ಎಂದು ಹೇಳುವಂಥ ಅವಕಾಶಕ್ಕಾಗಿ ಎದಿರು ನೋಡುತ್ತಿದ್ದೇನೆ ಹಾಗೂ ಈ ನಿಟ್ಟಿನಲ್ಲಿ ನಾನು ಸಮರ್ಪಕವಾಗಿ ಹೇಳಿದ್ದೇನೆಂದು ಭಾವಿಸುತ್ತೇನೆ.

ಎರಡನೆಯದಾಗಿ, ಲಾಭಾಂಶ ದರದ ಪ್ರಶ್ನೆಯನ್ನು ಕುರಿತಂತೆ ಹೇಳುವುದಾದರೆ, ಶೇ. 4 ರಷ್ಟರ ದರ ತೀರಾ ಹೆಚ್ಚಾಯಿತೆಂಬುದು ನನ್ನ ಭಾವನೆ. ಶೇ 3 ರಷ್ಟು ಸರಿಸಮನಾದ ದರವೆಂದು ಹೇಳಲು ಇಷ್ಟಪಡುತ್ತೇನೆ. ಒಂದು ವೇಳೆ ಪಾವತಿ ಮಾಡಲು ರೈಲ್ವೆಗಳಿಗೆ

ಸಾಧ್ಯವಾಗದಿದ್ದಲ್ಲಿ ಅದನ್ನು ಸಾಮಾನ್ಯ ರಾಜಸ್ವಗಳಿಂದ ಪುನಃ ಪಾವತಿಮಾಡುವಂತೆ ಕೇಳಲಾಗುವುದೆಂದು ಉಲ್ಲೇಖಿಸಲಾದ ಪ್ಯಾರಾ 30ರ ಬಗ್ಗೆ ನಾನೀಗಾಗಲೇ ಗಮನ ಸೆಳೆದಿದ್ದೇನೆ. ರೈಲ್ವೆಯಿಂದ ಸಾಮಾನ್ಯ ರಾಜಸ್ವಗಳಿಗೆ ಹಾಗೂ ಸಾಮಾನ್ಯ ರಾಜಸ್ವಗಳಿಂದ ರೈಲ್ವೆಗಳಿಗೆ ಎಂಬ ಬಳಸು ಮಾರ್ಗ ಏಕೆ?

ಈ ವಿಷಯದಲ್ಲಿ ಸದನಕ್ಕೆ ತನ್ನ ಸ್ಪಷ್ಟ ಅಭಿಪ್ರಾಯವನ್ನು ವ್ಯಕ್ತಪಡಿಸುವ ಅಧಿಕಾರವಿದೆ. ಆದರೂ, ಈ ತಿದ್ದುಪಡಿಯ ನಿರ್ಣಯ ಕೇವಲ ಚರ್ಚೆಯನ್ನು ಪ್ರಾರಂಭಿಸಲು ಮಾತ್ರ ಎಂಬುದು ನನ್ನ ನಂಬಿಕೆ ಈ ತಿದ್ದುಪಡಿಗಳಲ್ಲಿ ಅಡಗಿರುವ ಗಹನ ವಿಷಯಗಳನ್ನು ಮನನ ಮಾಡಿಕೊಳ್ಳಬೆಕೆಂಬುದು, ತಿದ್ದುಪಡಿಗಳನ್ನು ಮಂಡಿಸಿದಂಥ ಸದನದ ಆಕ್ಷೇಪಣೆಯಾದ್ದರಿಂದ ಈ ತಿದ್ದುಪಡಿಗಳು ಪ್ರಮುಖ ವಿಷಯದ ಮೇಲೆ ಗಮನ ಕೇಂದ್ರೀಕರಿಸಲು ತಂದಿರುವ ತಿದ್ದುಪಡಿಗಳೆಂದು ನಾನು ಅದಾಗಲೇ ತಿಳಿದಿರುವುದರಿಂದ ಇವುಗಳ ಮೇಲೆ ಸದನ ವಿಭಜನೆ ಬಯಸುವುದಿಲ್ಲ.

## ರೈಲ್ವೆ ಕಾರ್ಮಿಕರ ವೇತನ ಸ್ವರೂಪ II *

ನಮ್ಮ ರಾಷ್ಟ್ರದ ಅಗ್ರ ಪಂಕ್ತಿಯಲ್ಲಿಯಿರುವ ಸಾರ್ವಜನಿಕ ಉಪಯೋಗಿ ಸಂಸ್ಥೆಯ ಅತೀ ತುರ್ತು ಮತ್ತು ಒತ್ತಡದ ಸಮಸ್ಯೆ ಎಂದರೆ ರೈಲ್ವೆ ಮಂಡಲಿಯ ನೇಮಕ ನೀತಿಯ ಸಮಸ್ಯೆ ಎನ್ನುವುದು ನನ್ನ ಸ್ನೇಹಿತರಾದ ಮಾನ್ಯ ರೈಲ್ವೆ ಸಚಿವರಿಗೆ ಇದುವರೆಗೂ ಮನದಟ್ಟಾಗದಿದ್ದಲ್ಲಿ, ಇಂದು ನಡೆದ ಚರ್ಚೆಯ ಪ್ರಗತಿಯನ್ನು ಗಮನಿಸಿರುವ ಅವರಿಗೆ ಈ ಸಮಸ್ಯೆಯ ಅರಿವಾಗಿದೆ ಎಂಬುದು ನನ್ನ ದೃಢ ನಂಬಿಕೆ. ಸಾಮಾನ್ಯವಾಗಿ ನಾನು ರೈಲ್ವೆ ಆಯವ್ಯಯದ ಬಗ್ಗೆ ಅದರ ಎಲ್ಲಾ ಅಂಶಗಳಿಗೆ ಸಂಬಂಧಿಸಿದಂತೆ ಮಾತನಾಡಲು ಪ್ರಯತ್ನಿಸುತ್ತಿದ್ದೆ. ಆದರೆ, ಇಂದು ಈ ವಿಷಯದ ಬಗ್ಗೆ ಒಂದು ವಿಶೇಷ ಜವಾಬ್ದಾರಿ ನನ್ನ ಮೇಲಿದೆ. ಅಖಿಲ ಭಾರತ ರೈಲ್ವೆ ಲಿಪಿಕ ಸಿಬ್ಬಂದಿ ಸಂಘದ ಅಧ್ಯಕ್ಷನಾಗಿ ರೈಲ್ವೆ ಮಂಡಲಿ "ವೇತನ ಸತ್ಯಾಗ್ರಹ" ದ ನೋಟೀಸನ್ನು ಜಾರಿ ಮಾಡಿರುವುದರಿಂದ, ರೈಲ್ವೆ ಆಡಳಿತದ ಉದ್ಯೋಗ ನೀತಿಯನ್ನು ಕುರಿತಂತೆ ನನ್ನ ಚರ್ಚೆಯನ್ನು ಪ್ರತ್ಯೇಕವಾಗಿ ಅದಕ್ಕಾಗಿಯೇ ಮುಡುಪಾಗಿಡಲು ಈ ಸದನದ ಅನುಮತಿಯನ್ನು ಕೋರುತ್ತಿದ್ದೇನೆ.

ರೈಲ್ವೆ ವ್ಯವಸ್ಥೆಯು ಪ್ರಸ್ತುತ ನೇಮಿಸಿಕೊಂಡಿರುವ ಈ ರಾಷ್ಟ್ರದ ಒಂದು ಮಿಲಿಯನ್ - ಹತ್ತು ಲಕ್ಷ ನೌಕರರ ಸಮಸ್ಯೆಗೆ ತೃಪ್ತಿದಾಯಕ ಅಂತಿಮ ಪರಿಹಾರವನ್ನು ಕಂಡುಹಿಡಿಯಲು ಇದು ಸಕಾಲವೆನ್ನುವ ಒಮ್ಮತದ ಅಭಿಪ್ರಾಯವನ್ನು, ಚರ್ಚೆಯನ್ನು ಆರಂಭಿಸಿದ ನನ್ನ ಗೌರವಾನ್ವಿತ ಮಿತ್ರರಾದ ಶ್ರೀ ವಿ.ವಿ. ಗಿರಿಯವರನ್ನೂ ಒಳಗೊಂಡು ನನ್ನ ಸ್ನೇಹಿತರಾದ ಶ್ರೀ ಅಶೋಕ ಮೆಹ್ತಾ ಮತ್ತು ಗೋಪಾಲನ್‌ರವರು ವ್ಯಕ್ತಪಡಿಸಿರುವುದನ್ನು ಮಾನ್ಯ ರೈಲ್ವೆ ಸಚಿವರಾದ ಶ್ರೀ ಲಾಲ್‌ಬಹುದ್ದೂರ್ ಶಾಸ್ತ್ರಿಯವರು ಗಮನಿಸಿರಬಹುದು. ರೈಲ್ವೆ ಸಚಿವರು ತಮ್ಮ ಬಜೆಟ್ ಭಾಷಣದ ಪ್ಯಾರಾ 48 ರಲ್ಲಿ ಹೇಳುತ್ತಾರೆ.

"ಭಾರತೀಯ ರೈಲ್ವೆ ನೌಕರರ ರಾಷ್ಟ್ರೀಯ ಮಹಾಮಂಡಲಿ ಮತ್ತು ರೈಲ್ವೆ ಮಂಡಲಿಯ ಮಧ್ಯೆ ಈ ವರ್ಷವಿಡೀ ಮಧುರ ಬಾಂಧವ್ಯವಿತ್ತು ...... ಬಿನ್ನಾಭಿಪ್ರಾಯಗಳೇನಾದರೂ ಇದ್ದಲ್ಲಿ ಎದಿರುಬದಿರು ಕುಳಿತು ಚರ್ಚೆಯ ಮೂಲಕ ಅವುಗಳನ್ನು ಸಮರ್ಪಕವಾಗಿ ಪರಿಹರಿಸಿಕೊಳ್ಳುವುದರಲ್ಲಿ ನನಗೆ ದೃಢವಾದ ನಂಬಿಕೆ ಇದೆ. ಈ ಬಗ್ಗೆ ಮಹಾಮಂಡಲಿ ಮತ್ತು ರೈಲ್ವೆ ಮಂಡಲಿಗಳ ಮಧ್ಯೆ ಅತಿ ಶೀಘ್ರದಲ್ಲಿಯೇ ಒಂದು ಸಭೆಯನ್ನು ಏರ್ಪಡಿಸುವ ಭರವಸೆ ನೀಡುತ್ತೇನೆ".

ರಾಜಕೀಯ ಗುಂಪುಗಾರಿಕೆಯಲ್ಲಿ ಎಲ್ಲರೂ ಒಳಗೊಂಡಿರುವಂಥ ಈ ಸಮಯದಲ್ಲಿ ರೈಲ್ವೆ ಮಂಡಲಿಯು, ಒಂದು ವರ್ಗದ ವಿರುದ್ಧ, ಇನ್ನೊಂದು ವರ್ಗವನ್ನು ತೃಪ್ತಿಗೊಳಿಸುವ

---

* ರೈಲ್ವೆ ಆಯವ್ಯಯದ ಮೇಲಿನ ಸಾಮಾನ್ಯ ಚರ್ಚೆಯಿಂದ - ಲೋಕಸಭೆ 5ನೇ ಮಾರ್ಚ್ 1956, ಸಿ.ಸಿ. 1621-31.

ನೀತಿಯನ್ನೇನಾದರೂ ಅನುಸರಿಸಿದ್ದೇ ಆದಲ್ಲಿ ರೈಲ್ವೆ ಸಚಿವರು ಇಂದು ಯಾರ ಸಲಹೆ ಪಡೆಯತ್ತಿದ್ದರೆಂದು ಅಖಿಲ ಭಾರತ ರೈಲ್ವೆ ಲಿಪಿಕ ಸಿಬ್ಬಂದಿ ಸಂಘದ ಅಧ್ಯಕ್ಷನಾದ ನನಗೇ ತಿಳಿದಿಲ್ಲ. ರೈಲ್ವೆ ಕಾರ್ಮಿಕರ ರಾಷ್ಟ್ರೀಯ ಮಹಾಮಂಡಲಿಯ ಎರಡು ಘಟಕಗಳು ಮಹಾಮಂಡಲಿಯನ್ನು ತಮ್ಮ ಹಿಡಿತದಲ್ಲಿಟ್ಟುಕೊಳ್ಳಲು ಪೈಪೋಟಿಯಿಂದ ಕಚ್ಚಾಡುತ್ತಿವೆ. ನನಗೆ ದೀರ್ಘವಾದ ಅನುಭವವಿದೆ ಮತ್ತು ನಾನು ನನ್ನ ಜವಾಬ್ದಾರಿಯನ್ನರಿತು ಅಧಿಕಾರಯುತವಾಗಿ ಮಾತನಾಡಬಲ್ಲೆ, ಅದನ್ನು ವಿರೋಧಿಸುವಂಥ ಪ್ರಯತ್ನವನ್ನು ನನ್ನ ಸ್ನೇಹಿತರಾದ ರೈಲ್ವೆ ಸಚಿವರು ಮಾಡುವುದಿಲ್ಲವೆಂಬ ಭರವಸೆ ನನಗಿದೆ. ನನ್ನ ಅನುಭವ ಏನೆಂದರೆ ರೈಲ್ವೆ ವ್ಯವಸ್ಥೆಯ ಕಾರ್ಯನಿರತ ಸಿಬ್ಬಂದಿಯ ಮತ್ತು ಮಾಲೀಕರ ಸಂಬಂಧಗಳಿಗೆ ಸಂಬಂಧಿಸಿದಂತೆ ರೈಲ್ವೆ ಆಡಳಿತವು ಒಂದು ಘಟಕಕ್ಕೆ ತೋರಿಸುತ್ತಿರುವ ಪಕ್ಷಪಾತ ಈ ಎಲ್ಲಾ ತೊಂದರೆಗಳು ಉಂಟಾಗಿವೆ. ನಾಳೆ ಅಥವಾ ನಾಳಿದ್ದು, ಮಾನ್ಯ ರೈಲ್ವೆ ಸಚಿವರು ಮಾತುಕತೆಗಾಗಿ ಯಾರನ್ನೂ ಆಹ್ವಾನಿಸುತ್ತಾರೆಂಬುದು ನನಗೆ ಗೊತ್ತಿಲ್ಲ.

ಬೇಜವಾಡ ಒಪ್ಪಂದವನ್ನು ಮಾನ್ಯತೆ ಮಾಡಿ, ಬೆಜವಾಡೇತರ ಘಟಕದ ಅಭಿಪ್ರಾಯಗಳನ್ನು ಮೂಲೆಗೆ ತಳ್ಳಲಾಗಿದೆ ಎಂಬುದರ ಬಗ್ಗೆ ನನ್ನ ಸ್ನೇಹಿತರಾದ ಶ್ರೀ ಗಿರಿಯವರು ಏನು ಹೇಳಿದರೋ ಅದು ಅಕ್ಷರಶಃ ನಿಜ. ನಾನು ವೈಯಕ್ತಿಕವಾಗಿ ಅತ್ಯಂತ ಗೌರವವನ್ನು ಹೊಂದಿರುವಂಥ ನನ್ನ ಸ್ನೇಹಿತರಾದ ರೈಲ್ವೆ ಸಚಿವರಲ್ಲಿ ಕೇಳುವುದಿಷ್ಟೆ: ಈ ರೀತಿಯ ರಾಜಕೀಯ ಗುಂಪುಗಾರಿಕೆ ಕುಮ್ಮಕ್ಕು ರೈಲ್ವೆ ವ್ಯವಸ್ಥೆಯಲ್ಲಿ ಮುಂದುವರಿಯಲು ಅವರು ಅವಕಾಶ ನೀಡಕೂಡದು ಹಾಗೆಯೇ ಯಾವುದೇ ಒಂದು ನಿರ್ದಿಷ್ಟಘಟಕವು ತನಗಿಷ್ಟವಾದ ರೀತಿಯಲ್ಲಿ ನಡೆಯಲು ಅವರು ಪ್ರೋತ್ಸಾಹ ನೀಡಕೂಡದು.

ಇನ್ನೂ ಹೆಚ್ಚಿನ ವಿವರಗಳನ್ನು ನಾನು ಇಲ್ಲಿ ಹೇಳಬಹುದು, ಆದರೆ ರೈಲ್ವೆ, ನೌಕರರ ವಿವಿಧ ವರ್ಗಗಳ ಆಂತರಿಕ ಕಲಹಗಳೆಂದು ಏನು ನೀವು ಹೇಳುತ್ತೀರೋ ಅಂಥ ವಿಷಯಗಳನ್ನು ಪ್ರಸ್ತಾಪಿಸಿ ಈ ಸದನದ ಸಹನೆಯನ್ನು ಕೆಣಕಲು ಇಚ್ಛಿಸುವುದಿಲ್ಲ. ಪ್ಯಾರಾ 48 ರಲ್ಲಿ ಮಾನ್ಯ ಸಚಿವರು ಹೇಳಿದ್ದಾರೆ:

"ರೈಲ್ವೆ ನೌಕರರು ನಿರ್ವಹಿಸಬೇಕಾದ ಸಮಸ್ಯೆಗಳ ಸಂಕೀರ್ಣತೆಯ ಜೊತೆಗೆ ಅವರ ಕಾರ್ಯಬಾಹುಳ್ಯ ಮತ್ತು ಹೊಣೆಗಾರಿಕೆಗಳು ಏಕಕಾಲದಲ್ಲಿ ಹೆಚ್ಚಾಗುತ್ತಿವೆ. ಮುಂಬರುವ ವರ್ಷಗಳಲ್ಲಿ ಈ ನಿಟ್ಟಿನಲ್ಲಿ ಇವು ಮತ್ತಷ್ಟು ಹೆಚ್ಚಾಗಲಿವೆ"

ಇದರ ನಂತರ ಅವರು ಹೇಳುತ್ತಾರೆ:

"ಕೆಳದರ್ಜೆಯ ಹುದ್ದೆಗಳನ್ನು ವಿವೇಚನಾಯುಕ್ತವಾಗಿ ಕಡಿತಮಾಡಿ ಅವುಗಳಿಗೆ ಪೂರಕವಾಗಿ ಕಚೇರಿ ಗುಮಾಸ್ತರು ಟ್ರೈನ್ ಗುಮಾಸ್ತರು, ಇತ್ಯಾದಿ ಮೇಲು ದರ್ಜೆಯ ವರ್ಗಗಳ ಹುದ್ದೆಗಳ ಸಂಖ್ಯೆಗಳನ್ನು ಹೆಚ್ಚಿಸಿ ಕೆಳ ದರ್ಜೆಯ ಹುದ್ದೆಗಳ ಮರು ವಿಂಗಡಣೆ

ಮತ್ತು ಸ್ಟೇಷನ್ ಮಾಸ್ಟರ್ ಹುದ್ದೆಗಳಲ್ಲಿ ಸಮುಚಿತ ರೀತಿಯಲ್ಲಿ ಹೊಂದಾಣಿಕೆ ಮಾಡಿರುವುದರಿಂದ 3ನೇ ದರ್ಜೆಯ ಸೇವೆಗಳಲ್ಲಿರುವ ಕೆಳಮಟ್ಟದ ಹೆಚ್ಚಿನ ಸಂಖ್ಯೆಯ ನೌಕರರು ಹೆಚ್ಚಿನ ಜವಾಬ್ದಾರಿಯನ್ನು ಹೊರುತ್ತಿದ್ದಾರೆಂಬ ಸಂಗತಿಯನ್ನು ಮನಗಾಣ ಬಹುದಾಗಿದೆ".

ರೈಲ್ವೆಗಳ ಆಯವ್ಯಯದ ಹೇಳಿಕೆಯಲ್ಲಿ ಪ್ರಥಮ ಬಾರಿಗೆ ಕಾಣಿಸಿರುವ ಈ ಸೂತ್ರದಲ್ಲಿ ಅಡಗಿರುವ ಖಚಿತ ಇಂಗಿತಗಳನ್ನು ವಿವರಿಸಿ ಹೇಳಬೇಕೆಂದು ಮಾನ್ಯ ರೈಲ್ವೆ ಸಚಿವರನ್ನು ಕೋರುತ್ತೇನೆ. ನನಗಿರುವ ಅನುಭವ ಮತ್ತು ಪರಿಣತಿಯ ಆಧಾರದ ಮೇಲೆ ಸಮಸ್ತ ರೈಲ್ವೆ ಗುಮಾಸ್ತರ ಪರವಾಗಿ ಹೇಳುವುದಾದರೆ, ಯಾರ ಹಿತಕ್ಕಾಗಿ ಈ ಒಂದು ನಿರ್ದಿಷ್ಟ ಸೂತ್ರವನ್ನು ರೂಪಿಸಲಾಗಿದೆಯೋ, ಆ ನಿರ್ದಿಷ್ಟ ಸೂತ್ರವನ್ನು ರೈಲ್ವೆ ಗುಮಾಸ್ತರು ಅರ್ಥ ಮಾಡಿಕೊಂಡಿದ್ದು ಅದು ಅವರಿಗೆ ತೃಪ್ತಿ ತಂದಿಲ್ಲ ಎನ್ನುವುದನ್ನು ಇಲ್ಲಿ ಹೇಳಲು ಇಚ್ಛಿಸುತ್ತೇನೆ. ಮಾನ್ಯ ರೈಲ್ವೆ ಸಚಿವರು, ಒಂದು ವೇಳೆ ಶನಿವಾರ ಸಂಜೆ ನಗರದಲ್ಲಿ ಇದ್ದಿದ್ದರೆ, ಈ ರೈಲ್ವೆ ಗುಮಾಸ್ತರು ಗಮನಾರ್ಹವಾಗಿ ವ್ಯಕ್ತಪಡಿಸಿದ ಅವರ ಭಾವನೆಗಳನ್ನು ನೋಡಬಹುದಿತ್ತು. ಪಾರ್ಲಿಮೆಂಟ್ ಸದನದ ಮುಂದೆ ತದನಂತರ ಅವರ ನಿವಾಸದ ಮುಂದೆ ನಡೆಸಿದ ಪ್ರದರ್ಶನದ ರೀತಿಯನ್ನು ನನ್ನ ಮೂವತ್ತು ವರ್ಷಗಳ ದೀರ್ಘ ಅನುಭವದಲ್ಲಿ ಊಹಿಸಿಕೊಳ್ಳಲೂ ಸಾಧ್ಯವಾಗುತ್ತಿಲ್ಲ. ರೈಲ್ವೆ ಸಚಿವರು ಅವರ ನಿವಾಸದಲ್ಲಿದ್ದಿದ್ದರೆ ಮಾತ್ರ. ಅವರು ಅದನ್ನು ನೋಡಬಹುದಿತ್ತು.

ರಾಜಕೀಯ ಪಕ್ಷಗಳ ಸ್ವಪ್ರಯೋಜನಕ್ಕಾಗಿ ತೊಡಗಿಸಿಕೊಳ್ಳಲು ತಾವೇ ಅದೇ ನೀಡಿದಂಥ ಆಸ್ಪದ ಪ್ರದರ್ಶನ ನಡೆಸಿದರೆಂದು ಹೇಳಲು ನನಗೆ ಅತ್ಯಂತ ವಿಷಾದವಾಗುತ್ತದೆ. ಆದರೂ, ವಿವಿಧ ರೈಲ್ವೆ ಸಂಘ ಸಂಸ್ಥೆಗಳ ಬಗ್ಗೆ ನನ್ನ ಅನುಭವದ ಆಧಾರದ ಮೇಲೆ ಹಾಗೂ ನನ್ನ ಹೊಣೆಯನ್ನರಿತು ನಾನಿದನ್ನು ಹೇಳುತ್ತಿದ್ದೇನೆ. ಈ ದಿನ ರೈಲ್ವೆ ನೌಕರರ ರಾಷ್ಟ್ರಮಟ್ಟದ ಐದು ದಿನಗಳ ವೇತನ ಸತ್ಯಾಗ್ರಹದ ಕೊನೆಯ ದಿನವೆಂದು ಈ ಸದನಕ್ಕೆ ಹೇಳಬೇಕಾಗಿದೆ. ನಾನು ಹೇಳುತ್ತಿರುವ ಅಂಕಿಸಂಖ್ಯೆಗಳಲ್ಲಿ ವ್ಯತ್ಯಾಸಗಳು ಇದ್ದಲ್ಲಿ, ಅವುಗಳನ್ನು ಮಾನ್ಯ ರೈಲ್ವೆ ಸಚಿವರು ವಿರೋಧಿಸಲೆಂದು ವಿನಂತಿಸುತ್ತೇನೆ. ಬಹುತೇಕ ಎಲ್ಲಾ ಪ್ರಮುಖ ಸ್ಥಳಗಳಿಂದ ಈ ಅಂಕಿಸಂಖ್ಯೆಗಳನ್ನು ಸಂಗ್ರಹಿಸಿದ್ದೇನೆ.

ದೆಹಲಿ ಕ್ಷೇತ್ರದ 6463 ಮೂರನೇ ದರ್ಜೆ ನೌಕರರಲ್ಲಿ 6003 ನೌಕರರು ವೇತನ ಸತ್ಯಾಗ್ರಹದಲ್ಲಿ ಭಾಗವಹಿಸಿದ್ದಾರೆ ಹಾಗೂ ತಮ್ಮ ವೇತನಗಳನ್ನು ನಿರಾಕರಿಸಿದ್ದಾರೆ. ಖರಗ್‌ಪುರ ಮೊರದಾಬಾದ್, ಉದಯಪುರ, ಖರ್ದಾ ರಸ್ತೆ ಮತ್ತು ವಾಲ್ಟೇರ್ ಸ್ಥಳಗಳ 2727 ಮೂರನೇ ದರ್ಜೆ ನೌಕರರಲ್ಲಿ 2597 ನೌಕರರು ತಮ್ಮ ವೇತನಗಳನ್ನು ನಿರಾಕರಿಸಿದ್ದಾರೆ. ಅಜಮೀರ್, ಅಸನ್ಸೋಲ್, ಝಾನ್ಸಿ ಅಹಮದಾಬಾದ್, ಕಾನ್ಪುರ ಇತ್ಯಾದಿಗಳಲ್ಲಿರುವ 6249 ಮೂರನೇ ದರ್ಜೆ ನೌಕರರಲ್ಲಿ 6180 ನೌಕರರು ತಮ್ಮ ವೇತನಗಳನ್ನು ನಿರಾಕರಿಸಿದ್ದಾರೆ. ಜಮಾಲಪುರದಲ್ಲಿರುವ 756 ಮೂರನೇ ದರ್ಜೆ ನೌಕರರಲ್ಲಿ ಎಲ್ಲಾ 756 ನೌಕರರೂ ತಮ್ಮ

ವೇತನಗಳನ್ನು ಸ್ವೀಕರಿಸಲು ನಿರಾಕರಿಸಿದ್ದಾರೆ. ವಾಲ್ಟೇರ್‌ನಲ್ಲಿ ನೌಕರರ ಸಂಖ್ಯೆ ಸುಮಾರು 50,000 ಇದ್ದು, ಕೇವಲ ಒಬ್ಬನೇ ಒಬ್ಬ, ರೈಲ್ವೆ ಸಚಿವರಿಗೆ ಸಂತೋಷವನ್ನುಂಟು ಮಾಡಲೆಂದು ಹೊರಗುಳಿದಿದ್ದಾನೆ. ಇಂಥ ಉದಾಹರಣೆಗಳನ್ನು ಇನ್ನೂ ಹೇಳುತ್ತಲೇ ಹೋಗಬಹುದು. ಆದರೆ, ಈ ಒಂದು ಅಂಶವನ್ನು ಇಲ್ಲಿ ಸ್ಪಷ್ಟಪಡಿಸಬೇಕಾಗಿದೆ. ಅಂದರೆ, ರೈಲ್ವೆ ಗುಮಾಸ್ತರ ಜೊತೆ ನಾಲ್ಕು ವರ್ಷಗಳ ನಿಕಟ ಸಂಪರ್ಕ ಹೊಂದಿರುವ ನನಗೆ ಇವರ್‍ಯಾರೂ ನೇರ ಕ್ರಮದ ಹಾದಿ ಹಿಡಿಯದಂತೆ ಅವರನ್ನು ನಿಯಂತ್ರಿಸುವ ಭಾಗ್ಯ ಒದಗಿಬಂದಿತು. ರೈಲ್ವೆ ಆಡಳಿತಕ್ಕೆ ಇರಿಸುಮುರಿಸನ್ನುಂಟು ಮಾಡುವುದಾಗಲೀ ಅಥವಾ ಭಂಗವನ್ನು ತರುವುದಾಗಲೀ ನಮಗ್ಯಾರಿಗೂ ಬೇಕಾಗಿಲ್ಲ. ರೈಲ್ವೆ ಗುಮಾಸ್ತರ ಬೇಡಿಕೆಗಳನ್ನಷ್ಟೇ ನಾನಿಲ್ಲಿ ವಿವರಿಸುತ್ತೇನೆ. ಈ ಹೇಳಿಕೆಗಳನ್ನು ಎರಡು ವರ್ಗಗಳಾಗಿ ವಿಂಗಡಿಸುತ್ತೇನೆ.

ಮೊದಲನೆಯದು ಶೇ. 96 ರಷ್ಟಿರುವ ವಿಲೇವಾರಿ ಗುಮಾಸ್ತರಿಗೆ ಕೇಂದ್ರ ವೇತನ ಆಯೋಗವು ಶಿಫಾರಸು ಮಾಡಿರುವ ವೇತನ ಶ್ರೇಣಿ ರೂ. 80-220ನ್ನು ಅನುಷ್ಠಾನಗೊಳಿಸುವುದಕ್ಕೆ ಸಂಬಂಧಪಟ್ಟಿದೆ. ಜವಾಬ್ದಾರಿಯುತವಾದ ಈ ಕಾರ್ಯ ನಿರ್ವಹಿಸಲು ಬಹುತೇಕ ಇವರನ್ನೇ ಈ ಹುದ್ದೆಗಳಿಗೆ ನೇಮಕ ಮಾಡಲಾಗಿದೆ ಎಂಬ ವಿನಂತಿಯ ಮೇರೆಗೆ ಕೇಂದ್ರ ವೇತನ ಆಯೋಗವು ಈ ವೇತನ ಶ್ರೇಣಿಯನ್ನು ನಿಗದಿಪಡಿಸಿದೆ. ಸಲಹಾ ಸಮಿತಿಯೂ ಸಹ ಈ ಸಂಗತಿಯನ್ನು ಒಪ್ಪಿಕೊಂಡಿದೆ. ಈ ಒಂದು ಅಂಶದ ಬಗ್ಗೆ ಮಾನ್ಯ ರೈಲ್ವೆ ಸಚಿವರು ಖಂಡಿತವಾಗಿಯೂ ಉತ್ತರಿಸಬೇಕಾಗುತ್ತದೆ. ಕೇಂದ್ರ ವೇತನ ಆಯೋಗವು ಶಿಫಾರಸು ಮಾಡಿದ ರೂ. 80-220 ರ ವೇತನ ಶ್ರೇಣಿಯನ್ನು ರೂ. 80-160 ಮತ್ತು ರೂ. 160-200 ಗಳೆಂದು ಎರಡು ವಿವಿಧ ರೀತಿಯ ವೇತನಶ್ರೇಣಿಗಳನ್ನಾಗಿ ಏಕೆ ವಿಭಜಿಸಲಾಯಿತು? ಈ ವಿಷಯದಲ್ಲಿ ಬಹಳಷ್ಟು ರೈಲ್ವೆ ನೌಕರರು ಅದರಲ್ಲಿಯೂ ಹೆಚ್ಚೂ ಕಡಿಮೆ ಎಲ್ಲಾ ಲಿಪಿಕ ಸಿಬ್ಬಂದಿ ವರ್ಗದವರು ಅಸಮಾಧಾನಗೊಂಡಿದ್ದಾರೆ. ರೈಲ್ವೆ ಮಂಡಲಿಯ ಸದಸ್ಯರ ಜೊತೆಗೆ ನಾನು ಅತ್ಯಂತ ಮಧುರ ಬಾಂಧವ್ಯವನ್ನು ಹೊಂದಿದ್ದು ವ್ಯಕ್ತಿಗತವಾಗಿ ಯಾರ ವಿರುದ್ಧವೂ ನನಗೆ ದ್ವೇಷವಿಲ್ಲ. ಆದರೆ, ರೈಲ್ವೆ ವ್ಯವಸ್ಥೆಯ ವಿರುದ್ಧ ಬಹಳಷ್ಟು ಹೇಳುವುದಿದೆ. ಮಾಂಟಗೊರವರ ಶಬ್ದಗಳಲ್ಲಿ ಉದಾಹರಿಸುವುದಾದರೆ ಈ ವ್ಯವಸ್ಥೆ ಗೊಡ್ಡು ಸಂಪ್ರದಾಯದಿಂದ ಕೂಡಿದೆ, ತೀರಾ ನಿಸ್ತೇಜವಾಗಿದೆ, ಹಾಗೂ ತೀರಾ ನಿಷ್ಕರುಣೆಯಾಗಿದೆ. ಕಲ್ಪನಾಶಕ್ತಿ ಅಥವಾ ದೂರದೃಷ್ಟಿಯಿಲ್ಲದ ಒಂದು ಸಂಕುಚಿತ ನಿಗಮವಾಗಿ ಇದು ಪರಿಣಮಿಸಿದೆ. ರೈಲ್ವೆ ಮಂಡಲಿಯ ಅಧಿಕಾರಗಳ ವಿರುದ್ಧ ವ್ಯಕ್ತಿಗತವಾಗಿ ನನಗೆ ಯಾವುದೇ ತಕರಾರಿಲ್ಲವೆಂದು ಮತ್ತೊಮ್ಮೆ ನಾನು ವೈಯಕ್ತಿಕವಾಗಿ ಸ್ಪಷ್ಟಪಡಿಸಲು ಇಚ್ಛಿಸುತ್ತೇನೆ. ಆದರೆ, ಇಡೀ ವ್ಯವಸ್ಥೆಯೇ ಹದಗೆಟ್ಟಿದೆ. ಈ ರೀತಿಯ ನಡವಳಿಕೆಗಳು ಬಹಳ ದಿನ ಮುಂದುವರೆಯದಂತೆ ನೋಡಿಕೊಳ್ಳಬೇಕೆಂದು ನನ್ನ ಸನ್ಮಾನ್ಯ ಸ್ನೇಹಿತರಾದ ರೈಲ್ವೆ ಸಚಿರರನ್ನು ಕೇಳುತ್ತೇನೆ. ಮೊದಲನೇ ಹಂತವಾಗಿ ಅಂದರೆ ಐದು ದಿನಗಳ ವೇತನ ಸತ್ಯಾಗ್ರಹ ಇಂದು ಸಂಜೆ ಮುಗಿದಿದೆ. ಈ ಪ್ರದರ್ಶನದ ಭಾಗ ಮುಗಿದ ನಂತರ ನಾಳೆ ಆತ್ಮೀಯ ಹಾಗೂ ಹರ್ಷದಾಯಕ ಸಂಬಂಧಗಳು

ಇರುವುದೆಂಬ ಭರವಸೆ ನನಗಿದೆ. ಈಗಾಗಲೇ ಪ್ರದರ್ಶನದ ಭಾಗ ಮುಗಿದಿರುವುದರಿಂದ, ಈ ಐದು ದಿನಗಳಿಂದ ಈ ಕ್ಷಣದವರೆಗೆ ಈ ಜನರಿಂದ ಏನಾದರೂ ಲೇಖನಿಸ್ಥಗಿತ ಅಥವಾ ಮಂದಗತಿಯ ಮುಷ್ಕರ ನಡೆಯಿತೇ ಎಂಬುದನ್ನು ನನ್ನ ಸ್ನೇಹಿತರಾದ ರೈಲ್ವೆ ಮಂತ್ರಿಗಳು ನನಗೆ ಸ್ಪಷ್ಟಪಡಿಸಬೇಕೆಂದು ಕೋರುತ್ತೇನೆ. ಆ ರೀತಿಯ ಯಾವ ಘಟನೆಯೂ ಸಂಭವಿಸಿಲ್ಲ. ಅತ್ಯಂತ ಸಂತೋಷದಿಂದ ನಾನಿಲ್ಲಿ ಹೇಳಲು ಇಷ್ಟಪಡುವುದೇನೆಂದರೆ, ವಾಸ್ತವವಾಗಿ ಹಿಂದಿಗಿಂತ ಈ ಐದು ದಿನಗಳಲ್ಲಿ, ಪ್ರತಿಯೊಬ್ಬ ರೈಲ್ವೆ ಬಾಬು ಅತ್ಯಂತ ಶ್ರಮವಹಿಸಿ ದುಡಿದಿದ್ದಾರೆ. ಏಕೆಂದರೆ, ರಾಷ್ಟ್ರೀಯ ಮಟ್ಟದಲ್ಲಿ ಅವರಿಗೆ ಆ ರೀತಿ ಸೂಚನೆಗಳನ್ನು ನೀಡಲಾಗಿತ್ತು. ಅದೇನೆಂದರೆ, ಅವರೆಲ್ಲರೂ ಕೇವಲ ಸಾಂಕೇತಿಕ ಮುಷ್ಕರದಲ್ಲಿ ಮಾತ್ರ ನಿರತರಾಗಬೇಕು ಎಂದು. ಪ್ರಪ್ರಥಮವಾಗಿ ಇವರೆಲ್ಲರೂ ಒಗ್ಗಟ್ಟಾದುದು ಇದರಿಂದ ಕಂಡುಬಂದಿದೆ. ಇವರನ್ನು ಮತ್ತಷ್ಟು ಉದ್ರೇಕಗೊಳಿಸದೇ, ಆದಷ್ಟು ಶೀಘ್ರವಾಗಿ ಅವರ ನ್ಯಾಯಸಮ್ಮತ ಹಾಗೂ ಕಾನೂನುಬದ್ಧ ಕುಂದುಕೊರತೆಗಳನ್ನು ಬಗೆಹರಿಸಲು ಪ್ರಯತ್ನಿಸಬೇಕೆಂದು ನನ್ನ ಸ್ನೇಹಿತರಾದ ಶ್ರೀ ಲಾಲ್‌ಬಹದ್ದೂರ್ ಶಾಸ್ತ್ರಿಯವರನ್ನು ಕಳಕಳಿಯಿಂದ ವಿನಂತಿಸುತ್ತೇನೆ.

ಇಂಥ ಹಲವಾರು ಪ್ರಕರಣಗಳು ನನ್ನ ಬಳಿ ಇವೆ. ರೈಲ್ವೆ ನೌಕರರ ಜೊತೆಗಿನ ಮಧುರ ಬಾಂಧವ್ಯ ಕುರಿತು ನನ್ನ ಸನ್ಮಾನ್ಯ ಸ್ನೇಹಿತರಾದ ರೈಲ್ವೆ ಸಚಿವರು ಸಹಭಾಗಿತ್ವದ ಬಗ್ಗೆಯೂ ಅವರು ಅವರ ಭಾಷಣದ 49ನೇ ಪ್ಯಾರಾದಲ್ಲಿ ಹೇಳಿದ್ದಾರೆ. ಅತ್ಯಂತ ಒಳ್ಳೆಯ ಯೋಚನೆ'. ನೌಕರರ ಮತ್ತು ಮಾಲೀಕರ ಮಧ್ಯೆ ಸಹಬಾಗಿತ್ವವನ್ನು ಮೂಡಿಸುವ ಅವರ ಪ್ರಯತ್ನದಲ್ಲಿ ನಾವೆಲ್ಲರೂ ಅವರ ಹಿಂದೆ ಇದ್ದೇವೆ. ಆದರೆ, ಇವೆಲ್ಲಾ ಯಾವ ಪ್ರಕರಣಗಳು? ಇಂಥ ರಾಷ್ಟ್ರೀಯ ಮಟ್ಟದ ಅನೇಕ ಪ್ರಕರಣಗಳ ಕಡತಗಳು ನನ್ನ ಬಳಿಯಿದ್ದು, ಮಂಡಿಸಲಾದ ಬೇಡಿಕೆಗಳ ನಿವೇದನೆ ಮನವಿಯೊಂದಿಗೆ ಪ್ರತ್ಯೇಕವಾಗಿ ಅವುಗಳನ್ನು ನನ್ನ ಸ್ನೇಹಿತರಿಗೆ ಕಳುಹಿಸಿಕೊಡುವ ಪ್ರಯತ್ನ ಮಾಡುತ್ತೇನೆ. ಪ್ರಾಯಶಃ ಅಂಥ ನಾಲ್ಕು ಅಥವಾ ಐದು ಪ್ರಕರಣಗಳನ್ನು ನಾನಿಲ್ಲಿ ಪಟ್ಟಿ ಮಾಡಬಹುದಾಗಿದ್ದು, ರೈಲ್ವೆ ನೌಕರರ ಸಮಸ್ಯೆಗಳಿಗೆ ಸಂಬಂಧಪಟ್ಟಂತೆ ಎಲ್ಲವೂ ಸರಿಯಾಗಿಲ್ಲವೆಂಬುದನ್ನು ಈ ಸದನಕ್ಕೆ ಅವು ತಿಳಿಸುತ್ತವೆ.

ನಂತರ, ಸ್ಟೋರ್ಸ್ ಹಾಗೂ ಸಹಾಯಕ ಸ್ಟೇಷನ್ ಮಾಸ್ಟರ್‌ಗಳ ಬೇಡಿಕೆಗಳ ಕಡೆಗೆ ಬರೋಣ. ಅವರ ಸ್ಥಿತಿಗತಿಗಳೇನು? ಅವರಿಗೆ ಬೇಕಾಗಿರುವುದು ರೂ. 150-250ರ ವೇತನ ಶ್ರೇಣಿ, ಬಡ್ತಿಗೆ ಸಾಕಷ್ಟು ಅವಕಾಶಗಳು, ಏಕರೂಪ ನಿಯಮಗಳ ಜಾರಿ, ದೃಷ್ಟಿ ಪರೀಕ್ಷೆ ಎಂದು ಏನು ಹೇಳಲಾಗುತ್ತಿದೆಯೋ ಅದರಿಂದ ವಿನಾಯಿತಿ ಹಾಗೂ ಇತರರಿಗೆ ಲಭ್ಯವಾಗುವ ಅಧಿಕೃತ ರಜಾ ದಿನಗಳನ್ನು ಅವರಿಗೂ ಒದಗಿಸಿ ಕೊಡುವುದು. ಇವೆಲ್ಲವೂ ಅನುಚಿತ ಬೇಡಿಕೆಗಳೇನು? ಇವುಗಳನ್ನು ನಿರ್ಣಯಿಸುವಂಥ ಅಧಿಕಾರ ಈ ಸದನ ಮತ್ತು ಈ ರಾಷ್ಟ್ರಕ್ಕೆ ಬಿಟ್ಟದ್ದು.

ಇನ್ನು ವೇತನ ಗುಮಾಸ್ತರ ಸಮಸ್ಯೆಯನ್ನು ನೋಡೋಣ. ಈ ಬಡಪಾಯಿಗಳು ಭದ್ರತಾ ಠೇವಣಿಯಾಗಿ ರೂ. 2,000-00 ರೂ.ಗಳನ್ನು ನೀಡಬೇಕಾಗಿದೆ. ಆದರೆ, ಅವರ ವೇತನ ಶ್ರೇಣಿಯಾದರೂ ಏನು? ಯಾರೂ ಕೂಡ ಇವರ ಬಗ್ಗೆ ಅಸೂಯೆಪಡದಂಥ ಸ್ಥಿತಿಯಲ್ಲಿ ಇವರಿದ್ದಾರೆ. ಪೂರ್ವ, ಪಶ್ಚಿಮ ಮತ್ತು ಉತ್ತರ ರೈಲ್ವೆಗಳಲ್ಲಿ ಸಕ್ರಿಯ ಪಾತ್ರ ವಹಿಸುತ್ತಿರುವವರಲ್ಲಿ ಒಬ್ಬನಾಗಿ ನಾನಿಲ್ಲಿ ಹೇಳುವುದಿಷ್ಟೆ, ಇವರ ಪ್ರಕರಣ ವಿಶೇಷ ಪರಿಗಣನೆಗೆ ಅರ್ಹತೆಯನ್ನು ಪಡೆದಿದೆ.

ಸಮಯಾಭಾವದಿಂದ ಈ ಎಲ್ಲಾ ವಿಷಯಗಳ ಆಳಕ್ಕೆ ನಾನು ಹೋಗುತ್ತಿಲ್ಲ. ಆದರೆ, ಪೂರ್ಣ ಪ್ರಕರಣದ ಪೂರ್ಣ ಕಡತ ನನ್ನ ಬಳಿಯಿದೆ. ಕೇವಲ ಈ ದಿನದ ಭಾಷಣಕ್ಕಾಗಿ ಮಾತ್ರ ನಾನಿದನ್ನು ಪ್ರಸ್ತಾಪಿಸಿದ್ದೇನೆಂಬ ಕಾರಣದಿಂದಷ್ಟೇ ಅಲ್ಲದೆ, ನಾನು ಈ ಸಂಘದ ಪ್ರಧಾನ ಕಾರ್ಯನಿರ್ವಾಹಕನಾಗಿರುವುದರಿಂದ ದಿನದ ಚರ್ಚೆಯಲ್ಲಿ ನಾನು ಏನು ಹೇಳಬೇಕೆಂದಿದ್ದೇನೋ ಅದಕ್ಕೆ ಈ ಸದನ ತನ್ನ ಪ್ರೋತ್ಸಾಹ ನೀಡುವುದೆಂದು ಭಾವಿಸುವೆನು. ನಂತರ ಶರಾಫ್‌ರು ಹಾಗೂ ನಗದು ಗುಮಾಸ್ತರಿದ್ದಾರೆ. ಗುತ್ತಿಗೆ ವ್ಯವಸ್ಥೆಯಿಂದ ಅವರನ್ನು ಇತರೆ ವ್ಯವಸ್ಥೆಗೆ ವಿಲೀನಗೊಳಿಸಿದ್ದರೂ ಅವರಿಗೆ ರೈಲ್ವೆ ಪಾಸುಗಳೂ ಕೂಡ ದೊರೆಯುತ್ತಿಲ್ಲ. ಅದೇರೀತಿ, ಅಜಮೀರ್ ಹಾಗೂ ದೇಶದ ಇತರ ಭಾಗಗಳಲ್ಲಿರುವ ರೈಲ್ವೆ ತರಬೇತಿ ಶಾಲೆಗಳ ಬೋಧಕರ ಸಮಸ್ಯೆಗಳೂ ಇವೆ. ಅಲ್ಲಿಯೂ ಸಹ ಇದೇ ಪರಿಸ್ಥಿತಿ ಮುಂದುವರೆದಿದೆ. ಹಾಗೆಯೇ ಮಾಜೀ - ಯೋಧ ಗುಮಾಸ್ತರುಗಳ ಸಮಸ್ಯೆಯೂ ಇದೆ. ನನ್ನ ಸನ್ಮಾನ್ಯ ಮಿತ್ರರಾದ ರೈಲ್ವೆ ಸಚಿವ ಶ್ರೀ ಲಾಲ್‌ಬಹುದ್ದೂರ್ ಶಾಸ್ತ್ರಿಯವರು ಎಂದಾದರೂ ಈ ಸಮಸ್ಯೆಗಳ ಬಗ್ಗೆ ಇಣುಕು ಹಾಕಿದ್ದಾರೆಯೇ, ಹಾಗೂ ಅವರ ಸ್ಥಿತಿಗತಿಗಳೇನೆಂದು ನೋಡಿದ್ದಾರೆಯೇ ಎಂಬ ಅನುಮಾನ ನನಗಿದೆ.

ಇನ್ನು, ಉಗ್ರಾಣ ಲೆಕ್ಕಪತ್ರ ಗುಮಾಸ್ತರ ಸಮಸ್ಯೆಗಳತ್ತ ಗಮನಹರಿಸೋಣ. 1945ರ ನಂತರದ ಸೇವಾ ನೇಮಕಾತಿಯ ಸ್ಥಿತಿ ಎಂದು ಏನು ನಾವು ಹೇಳುತ್ತೇವೆಯೋ ಅದಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ ಅಂಥ ಸುಮಾರು 200 ಜನರು ಪಶ್ಚಿಮ ರೈಲ್ವೆಯಲ್ಲಿಯೂ ಹಾಗೂ ನೂರಾರು ಜನರು ಇತರೆ ರೈಲ್ವೆಗಳಲ್ಲಿ ಇದ್ದಾರೆ. ಸ್ವಜನಪಕ್ಷಪಾತ ಅಲ್ಲಿ ತಾಂಡವವಾಡುತ್ತಿದೆ. ಇಂಥ ಅನೇಕ ಪ್ರಕರಣಗಳ ಕಡತಗಳು ನನ್ನ ಬಳಿ ಇವೆ.ಒಂದು ಹುದ್ದೆಗೆ ನೇಮಕಗೊಂಡ ಒಬ್ಬ ವ್ಯಕ್ತಿಯ ನೇಮಕವನ್ನೇ ರದ್ದುಪಡಿಸಲಾಯಿತು. ಅವನ ನೇಮಕಾತಿಯಲ್ಲಿ ತಪ್ಪನ್ನು ಎಸಗಲಾಗಿದೆ ಎಂಬ ಕಾರಣದಿಂದಲೇ ಆತನ ನೇಮಕ ರದ್ದಾಯಿತು. ಅಂಥ ಸಾಕಷ್ಟು ಪ್ರಕರಣಗಳನ್ನು ನಾನು ನನ್ನ ಸ್ನೇಹಿತರಾದ ರೈಲ್ವೆ ಸಚಿವರಿಗೆ ಒದಗಿಸಿಕೊಡಬಲ್ಲೆ.

ಪ್ರಾಯಶಃ ರೈಲ್ವೆ ವ್ಯವಸ್ಥೆಯಲ್ಲಿಯೇ ಅತ್ಯಂತ ಹೀನಾಯ ಪ್ರಕರಣವೆಂದರೆ ಪದವೀಧರರ ಪ್ರಕರಣ. ಇವರನ್ನು ಮೆಟ್ರಿಕ್ಯುಲೇಟರ್‌ಗಳೊಂದಿಗೆ ಸೇರಿಸಲಾಗಿದೆ. ಇವರ ವೇತನ ಶ್ರೇಣಿ ರೂ. 50-130.

ಔಷಧ ತಯಾರಕರ ಪ್ರಕರಣವೂ ಇಲ್ಲಿದೆ. ರೈಲ್ವೆ ಆಸ್ಪತ್ರೆಯ ಔಷಧಾಲಯಗಳಲ್ಲಿ ಸುಮಾರು 4000 ಔಷಧ ತಯಾರಕರು ಕಾರ್ಯನಿರ್ವಹಿಸುತ್ತಿದ್ದಾರೆ. ಇವರೆಲ್ಲರ ಬೇಡಿಕೆ ಎಂದರೆ ರೂ. 80-200 ರ ವೇತನ ಶ್ರೇಣಿ ಹಾಗೂ ರೂ. 80-220ರ ಆಯ್ಕೆ ಶ್ರೇಣಿ. 18 ವಿವಿಧ ರೀತಿಯ ಕಾರ್ಯಗಳನ್ನು ನಿರ್ವಹಿಸುವ ನೌಕರರ ವರ್ಗ ಇದೊಂದೇ ಎಂದು ನಿಮಗೆ ಗೊತ್ತಾದಲ್ಲಿ ಆಶ್ಚರ್ಯವಾಗಬಹುದು. ಆದರೂ, ಇದರ ಬಗ್ಗೆ ಏನನ್ನೂ ಹೇಳಿಲ್ಲ. ರೈಲ್ವೆ ನೌಕರರ ವಿವಿಧ ವರ್ಗಗಳ ಕುಂದುಕೊರತೆಗಳಿಗೆ ಸಂಬಂಧಪಟ್ಟಂತೆ ಖಂಡ ಖಂಡವಾಗಿ ಪ್ರಕರಣಗಳ ಸರಮಾಲೆಯನ್ನೇ ಕಟ್ಟಬಹುದು.

10 ಲಕ್ಷ ರೈಲ್ವೆ ನೌಕರರು ಈ ರಾಷ್ಟ್ರಕ್ಕೆ ದಕ್ಷ ಹಾಗೂ ವಿನಮ್ರ ಸೇವೆಯನ್ನು ಸಲ್ಲಿಸುತ್ತಿರುವರೆಂಬ ಭರವಸೆಯನ್ನು ಮೂಡಿಸುವ ನಿಟ್ಟಿನಲ್ಲಿ ಅವರ ಸಮಸ್ಯೆಗಳಿಗೆ ವಿವೇಚನಾಯುಕ್ತ ಹಾಗೂ ಸಮರ್ಪಕವಾದ ದೃಷ್ಟಿಕೋನವನ್ನು ತಾಳಬೇಕೆಂದಷ್ಟೇ ನನ್ನ ನಿವೇದನೆ. ರೈಲ್ವೆಯಲ್ಲಿ ತಮಗೆ 35 ವರ್ಷಗಳ ಅನುಭವವಿರುವುದಾಗಿ ನನ್ನ ಸನ್ಮಾನ್ಯ ಸ್ನೇಹಿತರಾದ ಶ್ರೀ ವಿ.ವಿ. ಗಿರಿಯವರು ಹೇಳಿದರು. ಅವರಿಗಿರುವಷ್ಟು ಅನುಭವ ನನಗಿಲ್ಲದಿದ್ದರೂ ಸರಿಸುಮಾರು 27 ರಿಂದ 28 ವರ್ಷಗಳ ಅನುಭವ ಹೊಂದಿರುವ ನಾನು, ನಮ್ಮ ರೈಲ್ವೆ ನೌಕರರೂ ರಾಷ್ಟ್ರ ಪ್ರೇಮಿಗಳೇ, ಅವರ ಬೇಡಿಕೆಗಳನ್ನು ಪರಿಗಣಿಸಿದಲ್ಲಿ ತಮ್ಮ ಕಾರ್ಯಗಳನ್ನು ಅಚ್ಚುಕಟ್ಟಾಗಿ ಖಂಡಿತವಾಗಿಯೂ ನಿರ್ವಹಿಸಲು ಸಿದ್ಧರಿದ್ದಾರೆ ಎಂಬುದನ್ನು ನನ್ನ ಅನುಭವದ ಆಧಾರದ ಮೇಲೆ ದೃಢಪಡಿಸಲು ಇಚ್ಛಿಸುತ್ತೇನೆ. ಈ ಬೇಡಿಕೆಗಳನ್ನು ಲೆಕ್ಕವಿಲ್ಲದಷ್ಟು ಸಾರಿ ಈ ಸದನದ ಗಮನಕ್ಕೆ ತಂದಿದ್ದೇನೆ. ಅಲ್ಲದೆ, ಈ ವಿಷಯ ಪ್ರತಿ ವರ್ಷವೂ ಬರುತ್ತಲೇ ಇದೆ. ಇವರೆಲ್ಲರ ನೇರ ಪ್ರತಿಭಟನಾ ಕ್ರಮದಿಂದಾಗಿ ರೈಲ್ವೆ ಮಂತ್ರಾಲಯಕ್ಕೆ ಈಗ ಗಮನಹರಿಸಬೇಕಾದಂಥ ಪ್ರಸಂಗ ಒದಗಿಬಂದಿದೆ. 2ನೇ ಪಂಚವಾರ್ಷಿಕ ಯೋಜನೆಯನ್ನು ಆರಂಭಿಸುವಂಥ ಈ ಸಮಯದಲ್ಲಿ ಪ್ರಸ್ತುತ ರೈಲ್ವೆ ವ್ಯವಸ್ಥೆಗೆ ಗಂಡಾಂತರವನ್ನುಂಟು ಮಾಡಬಾರದೆಂಬ ನಮ್ಮಂಥವರ ಕಳಕಳಿಯ ಮೇರೆಗೆ ಹಾಗೂ ನಮ್ಮಂಥ ಜನರ ಸಲಹೆ ಮೇರೆಗೆ ಪ್ರತಿಭಟನೆ ಎಂಬ ಬ್ಯಾಲೆಟ್‌ನ್ನು ಪದೇ ಪದೇ ತಡೆಹಿಡಿಯಲಾಯಿತು ಎನ್ನುವುದನ್ನು ಇಲ್ಲಿ ಪುನಃ ಉಚ್ಚರಿಸುತ್ತಿದ್ದೇನೆ.

ಈ ವರ್ಷದಲ್ಲೂ ರೈಲ್ವೆಗಳು ಸಾಕಷ್ಟು ಲಾಭಗಳನ್ನು ಗಳಿಸಿದೆ. ಈ ಹಿನ್ನೆಲೆಯಲ್ಲಿ ರೈಲ್ವೆ ನೌಕರರ ಕಾರ್ಯದಕ್ಷತೆ ಮತ್ತು ನಿಷ್ಠೆಗಳ ಬಗ್ಗೆ ಅನುಮಾನಪಡಲು ಸಾಧ್ಯವೆ? ಕುತೂಹಲ ಹುಟ್ಟಿಸುವ ಈ ಸೂತ್ರದಿಂದ ಇವರೆಲ್ಲರನ್ನೂ ತೃಪ್ತಿಪಡಿಸಬಹುದೆಂದು ನಿರೀಕ್ಷಿಸುವುದು ಖಂಡಿತ ಸಾಧ್ಯವಿಲ್ಲ. ಈ ಸೂತ್ರವನ್ನು ರೂಪಿಸುವಲ್ಲಿ ರೈಲ್ವೆ ಮಂಡಲಿಯಷ್ಟೇ ಊಹಿಸಬಹುದಾದ ಅತ್ಯಂತ ಕುಶಾಗ್ರಮತಿಯ ಸಲಹೆಯನ್ನು ತನ್ನ ಸ್ನೇಹಿತರು (ಶ್ರೀ ಲಾಲ್ ಬಹದ್ದೂರ್ ಶಾಸ್ತ್ರಿ) ಮಂಡಲಿಯಿಂದ ಪಡೆದಿದ್ದಾರೆಂಬುದು ನನ್ನ ದೃಢ ನಂಬಿಕೆ. ಈ ಒಂದು ಸೂತ್ರದಿಂದ ಅವರು ಏನನ್ನು ಸಾಧಿಸಲು ಉದ್ದೇಶಿಸಿದ್ದಾರೆ ಹಾಗೂ ಅದನ್ನು ಎಷ್ಟು ಶೀಘ್ರವಾಗಿ ಅನುಷ್ಠಾನಗೊಳಿಸುತ್ತಾರೆ ಎನ್ನುವುದನ್ನು ಈ ಸದನಕ್ಕೆ ಅವರು ವಿವರಿಸಬೇಕು.

ಇಂದು ಕೈಗೆತ್ತಿಕೊಳ್ಳಬೇಕೆಂದಿರುವ ಮತ್ತೊಂದು ಪ್ರಸ್ತಾವನೆ ಅಂದರೆ ಇನ್ನೊಂದು ವೇತನ ಆಯೋಗವನ್ನು ರಚಿಸಬೇಕೆಂದು ಶ್ರೀ ವಿ.ವಿ. ಗಿರಿಯವರು ಮಾಡಿರುವ ಸಲಹೆ ನನಗೆ ವೈಯಕ್ತಿಕವಾಗಿ ನಂಬಿಕೆ ಹುಟ್ಟಿಸಿಲ್ಲ. ಕೇಂದ್ರ ವೇತನ ಆಯೋಗದ ಶಿಫಾರಸುಗಳ ಅನುಷ್ಠಾನದ ಗತಿ ಏನಾಯಿತು? ಈಗಾಗಲೇ ಅನೇಕ ವರ್ಷಗಳು ಕಳೆದಿದ್ದರೂ ಅವರ ಶಿಫಾರಸುಗಳನ್ನು ಸಾಕಷ್ಟು ಪ್ರಮಾಣದಲ್ಲಿ ಈಡೇರಿಸಿಲ್ಲ. ಒಂದು ವೇಳೆ ಇನ್ನೊಂದು ವೇತನ ಆಯೋಗವನ್ನು ರಚಿಸಬೇಕೆಂದಾದಲ್ಲಿ ಎಷ್ಟು ವರ್ಷಗಳ ಅವಧಿಯನ್ನು ಅದು ತೆಗೆದುಕೊಳ್ಳುತ್ತದೆ ಎನ್ನುವುದು ದೇವರಿಗೆ ಗೊತ್ತು..... ಕೊಂಚಮಟ್ಟಿನ ಮಧ್ಯಂತರ ಪರಿಹಾರದ ಬಗ್ಗೆ ಮಾತುಕತೆಗಳೇನಾದರೂ ಆಗಿದ್ದಲ್ಲಿ, ಮಧ್ಯಂತರ ಪರಿಹಾರದ ರೂಪದಲ್ಲಿ ಯಾವ ರೀತಿಯ ಸೂತ್ರವನ್ನು ರೂಪಿಸಲಾಗುವುದು ಎನ್ನುವುದನ್ನು ನನ್ನ ಸ್ನೇಹಿತ ಸಚಿವರು ನನಗೆ ಹೇಳಬೇಕು.

ಕೊನೆಯದಾಗಿ, ರೈಲ್ವೆ ಬಾಬುಗಳಿಗೆ ಸಂಬಂಧಪಟ್ಟಂತೆ ಹೇಳುವುದಾದರೆ, ಅವರುಗಳನ್ನು ರೈಲ್ವೆ ಸಚಿವರ ಬಳಿ ಕರೆದುಕೊಂಡು ಹೋಗುವಂಥ ಒಂದು ನಿದರ್ಶನವನ್ನು ಜ್ಞಾಪಿಸಿದಲ್ಲಿ ನನ್ನ ಸ್ನೇಹಿತರಾದ ರೈಲ್ವೆ ಸಚಿವರು ನನ್ನನ್ನು ಅನ್ಯಥಾ ಭಾವಿಸುವುದಿಲ್ಲವೆಂದು ನಂಬಿದ್ದೇನೆ. ಏಕೆಂದರೆ ಈ ರೈಲ್ವೆ ಬಾಬುಗಳ ಅಹವಾಲು ಕೇಳುವುದೂ ಸಹ ಈ ಹಿಂದೆ ಅವರಿಗೆ ಸಮಸ್ಯೆಯಾಗಿತ್ತು. ಇಂಥ ಅನೇಕ ಪೂರ್ವ ನಿದರ್ಶನಗಳು ನನ್ನ ಬಳಿ ಇದ್ದು, ಲೆಕ್ಕವಿಲ್ಲದಷ್ಟು ಬಾರಿ ಅವುಗಳನ್ನು ಅವರ ಗಮನಕ್ಕೆ ತಂದಿದ್ದೇನೆ. ಹಾಗಿದ್ದಲ್ಲಿ, ಈ ಪೂರ್ವ ನಿದರ್ಶನಗಳಾದರೂ ಎಂಥವುಗಳು?

ಶೀಘ್ರಲಿಪಿಗಾರರ ಸಂಘವೊಂದಿದೆ. ಇದಲ್ಲದೆ, ಈಶಾನ್ಯ ಮಜ್ದೂರ್ ಸಂಘ, ಈಶಾನ್ಯ ರೈಲ್ವೆ ನೌಕರರ ಸಂಘ ಹಾಗೂ ಇತರೆ ವಿಭಾಗಮಟ್ಟದ ಸಂಘಗಳ ಜೊತೆಗೆ ರೈಲ್ವೆ ವ್ಯವಸ್ಥೆಯದೇ ಆದ ಎರಡನೇ ದರ್ಜೆ ಅಧಿಕಾರಿಗಳ ಸಂಘವೂ ಇದೆ. ನನ್ನ ಸಂಘ, ಅನೇಕ ಬಾರಿ ನನ್ನ ಸ್ನೇಹಿತರಾದ ರೈಲ್ವೆ ಸಚಿವರಿಗೆ ಮನವಿ ಮಾಡಿಕೊಂಡಿದೆ. ಆದರೆ, ನನ್ನ ಸ್ನೇಹಿತರಿಗೆ ರೈಲ್ವೆ ಬಾಬುಗಳೊಂದಿಗೆ ಮಾತನಾಡಲೂ ಸಾಧ್ಯವಾಗುತ್ತಿಲ್ಲ. ಪರಿಣಾಮವಾಗಿ ಅವರನ್ನು ಅಲ್ಲಿಂದಿಲ್ಲಿಗೆ ಅಲೆದಾಡಿಸಲಾಗುತ್ತದೆ. ನಾನು ಪ್ರಾರಂಭದಲ್ಲಿಯೇ ಹೇಳಿದ ಹಾಗೆ ರೈಲ್ವೆ ಸಂಘದ ಅಂದರೆ ರಾಷ್ಟ್ರೀಯ ಸಂಸ್ಥೆಯೊಂದರ ಎರಡು ಪಕ್ಷಗಳು ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿಯನ್ನು ಸಲ್ಲಿಸಿರುವುದರೊಂದಿಗೆ ತಮಗೆ ತಾವೇ ಹೊಡೆದಾಡುತ್ತಿವೆ ಎಂದು ಪುನರುಚ್ಚರಿಸುತ್ತೇನೆ. ಹೀಗಿದ್ದಲ್ಲಿ, ಈ ಜನರಿಗೆ ಪರಿಹಾರವಾದರೂ ಎಲ್ಲಿದೆ?

ನಾನು ಒಪ್ಪಿಕೊಳ್ಳಲು ಸಿದ್ಧನಿದ್ದೇನೆ. ಆದರೆ, ನಾನು ನಿಖರವಾಗಿ ಪ್ರತಿಪಾದಿಸಲು ಪ್ರಯತ್ನಿಸುತ್ತಿರುವ ಅಂಶವೇ ನನ್ನ ಸ್ನೇಹಿತರಿಗೆ ಅರ್ಥವಾಗಿಲ್ಲವೆಂದು ನನಗನ್ನಿಸುತ್ತದೆ. ಒಂದು ರೈಲ್ವೆ ಸಂಘವಿದೆ ಹಾಗೂ ಕೆಲವು ವಿಭಾಗೀಯ ಸಂಘಗಳೂ ಇವೆ. ಅವುಗಳಲ್ಲಿ ನಾಲ್ಕರ ಹೆಸರುಗಳನ್ನು ನಾನೀಗಾಗಲೇ ಹೇಳಿದ್ದೇನೆ. ಇತರೆ ನಿದರ್ಶನಗಳನ್ನೂ ನಾನು ನೀಡಬಲ್ಲೆ. ಆದರೆ, ಈ ವಿಭಾಗೀಯ ಸಂಘಗಳು ಸರ್ಕಾರದಿಂದ ಮಾನ್ಯತೆ ಪಡೆದಿರುವುದಿಲ್ಲ.

ಉದಾಹರಣೆಗಾಗಿ ಅಖಿಲ ಭಾರತ ಲಿಪಿಕ ಸಿಬ್ಬಂದಿ ಸಂಘ - ಇವರಿಗೆ ನಾಲ್ಕನೇ ದರ್ಜೆ ನೌಕರರ ಜೊತೆ ಸೇರುವುದು ಬೇಕಾಗಿರುವುದಿಲ್ಲ. ರೈಲ್ವೆ ಆಡಳಿತವು ರಾಷ್ಟ್ರೀಯ ಸಂಸ್ಥೆಯ ಒಂದು ಪಕ್ಷದ ಜೊತೆಗೆ ಪಕ್ಷಪಾತದ ನಿಲುವನ್ನು ತಾಳಿದೆ ಎಂದು ತೋರಿಸಲು ನಾನು ಅನೇಕ ಉದಾಹರಣೆಗಳನ್ನು ಕೊಡಬಲ್ಲೆ. ಇದೇ ನನ್ನ ಮುಖ್ಯವಾದ ಅಂಶ.

ನನ್ನ ಸ್ನೇಹಿತರಾದ ರೈಲ್ವೆ ಸಚಿವರು (ಶ್ರೀ ಲಾಲ್‌ಬಹದ್ದೂರ್ ಶಾಸ್ತ್ರಿ) ಹೇಳಿದ ಅಂಶವನ್ನು ನಾನು ಖಂಡಿತ ಮಾನ್ಯ ಮಾಡುತ್ತೇನೆ. ಹಿಂದಿನ ದಿನ ಅವರು ಅಜಮೀರ್‌ನಲ್ಲಿದ್ದರು. ಇತ್ತೀಚೆಗಷ್ಟೆ ನಾನೂ ಅಲ್ಲಿಗೆ ಹೋಗಿದ್ದೆ. ವಾಸ್ತವವಾಗಿ ಕಳೆದ ಭಾನುವಾರವಷ್ಟೇ ನಾನು ಅಲ್ಲಿದ್ದೆ. ಅಜಮೀರ್‌ನಲ್ಲಿ ನನ್ನ ಸ್ನೇಹಿತರು ಸಾವಿರಾರು ಜನರ ಒಂದು ನಿಯೋಗದ ಅಹವಾಲನ್ನು ಸ್ವೀಕರಿಸಿದರು. ಈ ಅಂಶದ ಬಗ್ಗೆ ಖಂಡಿತವಾಗಿಯೂ ನನ್ನ ತಕರಾರೇನೂ ಇಲ್ಲ. ವಾಸ್ತವವಾಗಿ ಸ್ವಲ್ಪ ಸಮಯದ ಹಿಂದಷ್ಟೇ ರೈಲ್ವೆ ಬಾಬುಗಳು ಅವರ ನಿವಾಸದಲ್ಲಿ ಬೇಡಿಕೆಗಳ ಪಟ್ಟಿಯನ್ನು ಸಲ್ಲಿಸಿದರು.

ಈ ಸದನ ತಾಳ್ಮೆಯಿಂದ ನನ್ನ ಮಾತನ್ನು ಆಲಿಸುತ್ತಿದೆ. ವಾಸ್ತವವಾಗಿ ಈ ವಿಷಯಕ್ಕೆ ಸಂಬಂಧಪಟ್ಟಂತೆ ನಾವು ಶೂನ್ಯಗಳ ಮಧ್ಯೆ ಸಂಚರಿಸುತ್ತಿದ್ದೇವೆ. ಅಖಿಲಭಾರತ ರೈಲ್ವೆ ಲಿಪಿಕ ಸಿಬ್ಬಂದಿ ಸಂಘವು ತನ್ನದೇ ಆದಂಥ ಒಂದು ಸಂಘ ಅದರ ಹೆಸರೇ ಸಂಘ ಎನ್ನುವುದನ್ನು ದೃಢಪಡಿಸುತ್ತದೆ. ಆದರೆ, ಆ ಅಂಶವನ್ನು ಸಾರಿಸಾರಿ ಹೇಳುವಂಥ ಪ್ರಯತ್ನಕ್ಕೆ ನಾನು ಕೈಹಾಕುತ್ತಿಲ್ಲ. ನಾನು ಸ್ಪಷ್ಟಪಡಿಸಬೇಕೆಂದಿರುವ ಅಂಶವೇನೆಂದರೆ ಔಪಚಾರಿಕವಾಗಿಯಾದರೂ ಅದರ ಅಹವಾಲನ್ನು ಏಕೆ ಕೇಳುತ್ತಿಲ್ಲ? ಇರುವ ತೊಂದರೆಯಾದರೂ ಏನು? ಇಂಥ ಒಂದು ನೋಂದಾಯಿತ ಸಂಸ್ಥೆಯು ತಮ್ಮ ಬಳಿ ಬಂದು ಸಚಿವರೇ ನಮ್ಮ ಸಮಸ್ಯೆಗಳು ಇವು ಎಂದು ತಮ್ಮ ಅಹವಾಲುಗಳನ್ನು ಹೇಳಿಕೊಂಡರೆ, ತಮ್ಮ ಘನತೆಗೆ ಕುಂದು ಎಂದು ತಾವಾದರೂ ಏಕೆ ಭಾವಿಸಬೇಕು? ರೈಲ್ವೆ ಮಂಡಲಿಗೆ ಮನವಿಗಳನ್ನು ಅರ್ಪಿಸಲು ಬಂದಾಗ ಪಾಪ, ಏಕೆ ತೆಗೆದುಕೊಳ್ಳುವುದಿಲ್ಲ? ಇಂಥ ಹಲವಾರು ಪ್ರಕರಣಗಳನ್ನು ನಾನು ಪಟ್ಟಿ ಮಾಡಬಲ್ಲೆ. ರೈಲ್ವೆ ಮಂಡಲಿಯೂ ಕೂಡ ಏಕೆ ತೆಗೆದುಕೊಳ್ಳುವುದಿಲ್ಲ.?ನನ್ನ ಸ್ನೇಹಿತರಾದರೂ ಇದನ್ನು ಸ್ವಾಭಿಮಾನದ ವಿಷಯವಾಗಿ ಏಕೆ ಪರಿಗಣಿಸಬೇಕು? ಇದೇ ನಾನು ಅವರಿಗೆ ಕೇಳಬೇಕೆಂದಿರುವ ಪ್ರಶ್ನೆ. ಅವರಿಗೆ ಸಮಸ್ಯೆಯನ್ನುಂಟು ಮಾಡಲು ನಾನಿಲ್ಲಿ ನಿಂತಿಲ್ಲ. ಈ ಸಂಘ ಕೇವಲ ಮನವಿಗಳನ್ನು ಸಲ್ಲಿಸಲು ಮಾತ್ರವಷ್ಟೇ ಅವರ ಮನೆಯ ಹಾಗೂ ರೈಲ್ವೆ ಮಂಡಲಿಯ ಬಾಗಿಲುಗಳನ್ನು ಪದೇ ಪದೇ ತಟ್ಟುತ್ತಿದೆ ಎಂಬುದನ್ನು ನಿವೇದಿಸಲು ನಾನಿಲ್ಲಿದ್ದೇನೆ ಅವಕಾಶವನ್ನೇ ನೀಡುತ್ತಿಲ್ಲ. ಬಿಳಿ ಕತ್ತುಪಟ್ಟಿಯ ಜನರಾದ ಈ ರೈಲ್ವೆ ಬಾಬುಗಳದು ಮೊಂಡುತನವೆಂದು ತಾವು ಏನು ಹೇಳುತ್ತಿರೋ ಅಂಥವರ ಪ್ರವೃತ್ತಿಯನ್ನು ಪ್ರಪಂಚದ ಎಲ್ಲ ಕಡೆಯೂ ಕಾಣಬಹುದಾಗಿದೆ ಎಂಬುದನ್ನು ಪುನಃ ಉಚ್ಚರಿಸುತ್ತೇನೆ. ಕಾರ್ಮಿಕ ಸಂಘಟನೆಯ ಉದ್ದೇಶಗಳ ಪರವಾಗಿ ವರಿದ್ದಾರೆ. ಪ್ರಪ್ರಥಮ ಬಾರಿಗೆ ನೀವು ಏನು ಒಕ್ಕೊರಲು ಎಂದು ಹೇಳುತ್ತೀರೋ, ಹಾಗೆ ಅವರು ಒಟ್ಟುಗೂಡಿದ್ದಾರೆ. ಇತರೆ ನೌಕರರ

ಟೆಲಿಗ್ರಾಫ್ ರುಜುವಾತುಗಳೂ ನನ್ನ ಬಳಿ ಇವೆ. ಈ ಒಂದು ನಿರ್ದಿಷ್ಟ ಅಂಶದ ಮೇಲಷ್ಟೇ ನಾನು ಒತ್ತು ಕೊಡುತ್ತಿದ್ದೇನೆ. ಯಾವುದೇ ರೀತಿಯ ಬಲಾತ್ಕಾರವನ್ನು ಮಾನ್ಯ ಸಚಿವರ ಮೇಲೆ ನಾನು ಹೇರುತ್ತಿಲ್ಲ. ಮುಂದಿನ ಅಗತ್ಯ ಕ್ರಮಗಳನ್ನು ತೆಗೆದುಕೊಳ್ಳಲು ಅವರನ್ನು ಪ್ರೇರೇಪಿಸಲೆಂದೇ ಅವರಲ್ಲಿ ಮನವಿಯನ್ನು ಮಾಡುತ್ತಿದ್ದೇನೆ. ರೈಲ್ವೆ ಮಂಡಲಿ ಮತ್ತು ಮಂತ್ರಾಲಯ ಒಟ್ಟಿಗೆ ಕುಳಿತು, - "ಇದೇ ನನ್ನ ಆಶಯ ನಾನು ನಿಮಗಾಗಿ ಏನು ಮಾಡಲು ಸಿದ್ಧನಿದ್ದೇನೋ ಅದನ್ನು ಕೂಡಲೇ ಅನುಷ್ಠಾನಗೊಳಿಸುತ್ತೇನೆ". ಎಂದು ಹೇಳಲಿ. ಕಳೆದ ಮೂರು ವರ್ಷಗಳಿಂದ ನಾನು ನಿರೀಕ್ಷಿಸುತ್ತಲೇ ಇದ್ದೇನೆ. ಇಲ್ಲದಿದ್ದಲ್ಲಿ ಈ ವೇಳೆಗಾಗಲೇ ಅವರು ಮುಷ್ಕರದ ಬ್ಯಾಲೆಟನ್ನು ಕೈಗೆತ್ತಿಕೊಳ್ಳುತ್ತಿದ್ದರು. ಈ ಬಗ್ಗೆ ಸ್ನೇಹಿತರಾದ ಶ್ರೀ ಲಾಲ್‌ಬಹದ್ದೂರ್ ಶಾಸ್ತ್ರಿಯವರಿಗೆ ಗೊತ್ತಿದೆ. ಸತ್ಯಾಗ್ರಹ ಮುಷ್ಕರವಲ್ಲ. ತೊಂದರೆಯ ಮಟ್ಟಕ್ಕೆ ಈಗಾಗಲೇ ಬೆಳವಣಿಗೆಗಳು ಆಗಿದ್ದು ಅವುಗಳನ್ನು ಇತ್ಯರ್ಥಪಡಿಸಲೇಬೇಕಾಗಿದೆ. ನಾಳೆಯೇ ಮಾನ್ಯ ಸಚಿವರು ಮಂಜೂರು ಮಾಡಿದಲ್ಲಿ ತೀರಾ ಒಳ್ಳೆಯದು. ಇದು ಕೇವಲ ವೇತನ ಸತ್ಯಾಗ್ರಹ ಮಾತ್ರ. ನಾಳೆಯೇ ಅವರಿಗೆ ಮಂಜೂರು ಮಾಡಲು ಮಾನ್ಯ ಸಚಿವರು ಸೂಕ್ತ ವ್ಯವಸ್ಥೆ ಮಾಡುವರೆಂದು ನಾನು ನಂಬುತ್ತೇನೆ. ರಾಷ್ಟ್ರಪಿತನ ಹೆಸರಿನಲ್ಲಿ ಮತ್ತು ಅವರ ಸಿದ್ಧಾಂತದ ಪ್ರಕಾರ 50,000 ರೈಲ್ವೆ ಬಾಬುಗಳಿಗೆ ನೀಡಬಹುದಾದಂಥ ಒಂದು ಸಾಂಕೇತಿಕ ಕೊಡುಗೆ ಇದು. ವೈಯಕ್ತಿಕವಾಗಿ ನಾನು ಶ್ರೀ ಲಾಲ್‌ಬಹದ್ದೂರ್ ಶಾಸ್ತ್ರಿಯವರಲ್ಲಿ ಮನವಿ ಮಾಡುತ್ತಿದ್ದೇನೆ. ನಾನು ಹೇಳಿರುವುದರ ಬಗ್ಗೆ ಅವರು ತಪ್ಪು ಭಾವಿಸಬಾರದು. ನಾನು ಚರ್ಚಾಸ್ಪದ ಅಂಶವನ್ನು ಎತ್ತಲು ಇಲ್ಲಿ ನಿಂತಿಲ್ಲ. ಈ ವಿಷಯದಲ್ಲಿ ಮುಂದಿನ ಕ್ರಮಗಳನ್ನು ಅವರು ತೆಗೆದುಕೊಳ್ಳುವಂತೆ ಉತ್ತೇಜಿಸುತ್ತಿದ್ದೇನೆ, ಅಷ್ಟೆ. ರೈಲ್ವೆ ಮಂಡಲಿಯ ಮಹಾಶಯರನ್ನು ಭೇಟಿ ಮಾಡಲು ಹಾಗೂ ಕಂಡಕಂಡ ಕಡೆ ಈ ಬಗ್ಗೆ ಸುತ್ತಲೂ ಸಾಕಷ್ಟು ದಿನಗಳನ್ನು ಕಳೆದಿದ್ದೇನೆ. 10 ಲಕ್ಷ ರೈಲ್ವೆ ನೌಕರರಲ್ಲಿ ಅತ್ಯಂತ ಮೇಧಾವಿ, ಶೈಕ್ಷಣಿಕ ಹಾಗೂ ಹುರುಪಿನ ವರ್ಗವು, 2ನೇ ಪಂಚವಾರ್ಷಿಕ ಯೋಜನೆಯ ಆರಂಭದಲ್ಲಿಯೇ ಕೈತಪ್ಪಿಹೋಗದಂತೆ ನೋಡಿಕೊಳ್ಳಲು, ರೈಲ್ವೆ ಆಯವ್ಯಯದ 48ನೇ ಪ್ರಕರಣದಲ್ಲಿ ರೂಪಿಸಲಾದ ಸೂತ್ರದ ಬಗ್ಗೆ ಅವರು ಗಮನಹರಿಸುವರೆಂದು ನಾನು ದೃಢವಾಗಿ ನಂಬಿದ್ದೇನೆ. ಇದಿಷ್ಟೇ ನನ್ನ ವಾದ.

---

* ಯಾವುದೇ ವಿಭಾಗೀಯ ಸಂಘವನ್ನು, ಮಾನ್ಯತೆ ಮಾಡಿಲ್ಲವೆಂದು ಹೇಳಲು ಮಾನ್ಯ ರೈಲ್ವೆ ಸಚಿವರು ಮಧ್ಯೆ ಪ್ರವೇಶಿಸಿದಾಗ ಇದೇ ಅವರ ಕರಾರುವಕ್ಕಾದ ಆಪಾದನೆ ಎಂದು ಸದಸ್ಯರು ಹೇಳಿದರು ಈ ಸಂಗತಿಯನ್ನು ಅಲ್ಲಗಳೆಯುತ್ತಾ, ಪ್ರಾಯಶಃ ನನ್ನ ಸ್ನೇಹಿತರಿಗೆ ಗೊತ್ತಿರಲಿಕ್ಕಿಲ್ಲ, ನಾನು ಸಾವಿರಾರು ಗುಮಾಸ್ತರನ್ನು ಹಾಗೂ ಅದೇ ವರ್ಗದ ಇತರೇ ನೌಕರರನ್ನು ಭೇಟಿ ಮಾಡಿ ಅವರ ಜೊತೆ ಚರ್ಚೆಮಾಡಿ ಸುಮಾರು ಒಂದೂವರೆ ಘಂಟೆಯಷ್ಟು ಕಾಲ ಅವರ ಜೊತೆ ಮಾತನಾಡಿರುವೆ ಎಂದು ರೈಲ್ವೆ ಸಚಿವರು ಹೇಳಿದರು..." ಮಾತುಕತೆಗಳು ಮುಂದುವರೆಯುತ್ತವೆ. ಮಾನ್ಯತೆ ನೀಡುವುದೇ ಬೇರೆ ಹಾಗೂ ನೌಕರರನ್ನು ಭೇಟಿ ಮಾಡಿ ಅವರ ಜೊತೆ ಮಾತನಾಡುವುದೇ ಬೇರೆ ಎಂದು ನನ್ನ ಸ್ನೇಹಿತರು ಹೇಳದಿರುವುದಕ್ಕೆ ವಿಷಾದಿಸುತ್ತೇನೆ.

## 11. ಪತ್ರಿಕೆಗಳ ಪಾತ್ರ*

ಪತ್ರಿಕಾ (ಆಕ್ಷೇಪಾರ್ಹ ವಿಷಯ) ತಿದ್ದುಪಡಿ ಮಸೂದೆಯನ್ನು ನಾನು ವಿರೋಧಿಸುತ್ತಿದ್ದೇನೆ ಕಾನೂನು ಮತ್ತು ಸಂವಿಧಾನಾತ್ಮಕ ವಾದ ವಿವಾದಗಳಲ್ಲಿ ಭಾಗಿಯಾಗಲು ಇಚ್ಛಿಸದೇ $12\frac{1}{2}$ ಗಂಟೆಯಷ್ಟು ಕಾಲ ನಡೆದ ಚರ್ಚೆಯನ್ನು ಕುಳಿತು ಕೇಳಿದ್ದೇನೆ. ಕಳೆದ 25 ವರ್ಷಗಳಿಂದ ಹಾಗೂ ಈಗಲೂ ಕೂಡ ನಾನು ಒಬ್ಬ ಕಾರ್ಯನಿರತ ಪತ್ರ ಕರ್ತ. ಈ ದಿನವೂ ಪತ್ರಕರ್ತನಾಗಿ ಮಾತನಾಡುವುದಾಗಿ ಈ ಸದನದ ಗಮನಕ್ಕೆ ತರುತ್ತಿದ್ದೇನೆ. ಸದನ ನನಗೆ ಸಹಕರಿಸುತ್ತದೆಂದು ನಂಬುತ್ತೇನೆ. ದಿವಂಗತ ಭೂಲಭಾಯಿ ದೇಸಾಯಿ, ದಿವಂಗತ ಸತ್ಯಮೂರ್ತಿ, ದಿವಂಗತ ಜಿನ್ನಾ ಹಾಗೂ ಕ್ರೇಕ್, ಮ್ಯಾಕ್ಸವೆಲ್, ಮತ್ತು ಮೂಡಿ ಇವರುಗಳ ಮಧ್ಯೆ ಆಗುತ್ತಿದ್ದ ಮೇಲ್ಪಟ್ಟದ ವಾಕ್ ಯುದ್ಧಗಳನ್ನು ಸತತ 10 ವರ್ಷಗಳ ಕಾಲ ಆ ಕಡೆಯ ಗ್ಯಾಲರಿಯಿಂದ ನೋಡುವ ಸೌಭಾಗ್ಯ ನನ್ನದಾಗಿತ್ತು. 1937 ರಲ್ಲಿನ ಚಾರಿತ್ರಿಕ ಸಂದರ್ಭ ನನಗೆ ನೆನಪಿದೆ. ನನಗನಿಸುತ್ತದೆ, ಪಿ. ಸತ್ಯಮೂರ್ತಿಯವರು ಇದೇ ಪೀಠದಲ್ಲಿ ನಿಂತು ಸತತ 7 ಗಂಟೆ ಕಾಲ ಮಾತನಾಡಿದ್ದರು. ಪ್ರಾಯಶಃ ಅವರು ದಮನಕಾರಿ ಕಾನೂನುಗಳನ್ನು ನಿರಸನಗೊಳಿಸುವ ಕುರಿತು ಮಾತನಾಡಿದ್ದರು. ವೃತ್ತಪತ್ರಿಕೆಯ ಸಂಪಾದಕನಾಗಿ ಹಾಗೂ ಮಾಲೀಕನಾಗಿ ಮತ್ತು ಈ ಗ್ಯಾಲರಿಯಲ್ಲಿ ಕಾರ್ಯ ನಿರ್ವಹಿಸಲು ನನಗೆ ದೊರೆತ ಅವಕಾಶದಿಂದಾಗಿ ಇದನ್ನು ನಾನು ಹೇಳುತ್ತಿದ್ದೇನೆ. ಐದು ಆಕ್ಷೇಪಣೆಗಳನ್ನು ನಾನು ಮಾಡುತ್ತಿದ್ದು, ಅವುಗಳನ್ನು ಓದಿ ಹೇಳುವ ಮುನ್ನ, ತಮ್ಮ ಮುಂದೆ ಸಂಕ್ಷಿಪ್ತವಾಗಿ ವಿವರಿಸುತ್ತಿದ್ದೇನೆ. ಹಿರಿಯ ರಾಜತಂತ್ರಜ್ಞರಾದಂಥ ನನ್ನ ಗೌರವಾನ್ವಿತ ಸ್ನೇಹಿತ ಡಾ. ಕಾಟ್ಜುರವರಿಗೆ ಈ ಸದನಕ್ಕೆ ನೀಡಲಾದ ಭರವಸೆಗಳು ಹಾಗೂ ಮಾಡಲಾದ ವಾಗ್ದಾನಗಳ ಬಗ್ಗೆ ಕಿಂಚಿತ್ತೂ ಬೆಲೆ ಇಲ್ಲವೆಂಬುದನ್ನು ನಾನಿಲ್ಲಿ ನಿವೇದಿಸಲು ವಿಷಾದವಾಗುತ್ತದೆ. ಈ ಸದನದ ಸಮಯವನ್ನು ವೃಥಾ ವ್ಯಯ ಮಾಡುವ ಇಚ್ಛೆ ನನಗಿಲ್ಲ. ಆದರೆ, ಸಂವಿಧಾನ ತಿದ್ದುಪಡಿ ಮಸೂದೆಯ ಮೇಲೆ ಚರ್ಚೆ ನಡೆಯುತ್ತಿದ್ದ ಅವಧಿಯಲ್ಲಿ ಹಾಗೆಯೇ 1951 ರಲ್ಲಿ ಶ್ರೀ ರಾಜಗೋಪಾಲಚಾರಿಯವರು ಮಾತನಾಡುತ್ತಿದ್ದ ಅವಧಿಯಲ್ಲಿ, ಇದು ಶಾಶ್ವತ ಕಾಯಿದೆ ಆಗುವುದಿಲ್ಲವೆಂದು ನೀಡಲಾದ ನಿರ್ಧಿಷ್ಟ ಆಶ್ವಾಸನೆಯನ್ನು ತಾವು ನೆನಪಿಸಿಕೊಳ್ಳಬೇಕು. ಅದರ ದಾಖಲೆ ಪ್ರತಿ ನನ್ನ ಬಳಿಯಿದೆ. ಆದರೆ, ಇದು ಒಂದು ಶಾಶ್ವತ ಕಾಯಿದೆಯಾಗಿ ಪರಿಣಮಿಸುತ್ತಿರುವುದನ್ನು ವಿಷಾದದಿಂದ ಹೇಳಬೇಕಾಗಿದೆ. ಇದಕ್ಕಾಗಿ ಎರಡು ವರ್ಷಗಳು ಬೇಕಾಗಿರಲಿಲ್ಲ. ನನ್ನ ಗೌರವಾನ್ವಿತ ಸ್ನೇಹಿತರಾದ ಗೃಹ ಸಚಿವರು ಇದನ್ನು ನಂಬುತ್ತಿಲ್ಲ ಅಥವಾ ಈ ಭರವಸೆಗಳ ಬಗ್ಗೆ ಅವರಿಗೆ ನೆನಪಾಗುತ್ತಿಲ್ಲವೆಂಬುದೂ ವಿಷಾದದ ಸಂಗತಿ. ಅವರ ಸ್ಥಾನದಲ್ಲಿ ಹಿಂದೆ ಇದ್ದವರು ನೀಡಿದ ಭರವಸೆಗಳನ್ನು ಅವರು ಗೌರವಿಸಲು ಸಿದ್ಧರಿಲ್ಲದಿದ್ದರೆ, ಈ ರಾಷ್ಟ್ರವನ್ನು ದೇವರೇ ಕಾಪಾಡಬೇಕು, ಇಷ್ಟನ್ನು ಹೇಳುತ್ತಾ, ಈ

* ಪತ್ರಿಕಾ (ಆಕ್ಷೇಪಾರ್ಹ ವಿಷಯ) ತಿದ್ದುಪಡಿ ಮಸೂದೆಯ ಮೇಲಿನ ಚರ್ಚೆಯಿಂದ: ಲೋಕಸಭಾ ಚರ್ಚೆ 13ನೇ 1954 ಸಿಸಿ:2125-2129.

ವಿಧೇಯಕದ ಬಗ್ಗೆ ನನಗಿರುವ ಆಕ್ಷೇಪಣೆಗಳನ್ನು ಸಾಧ್ಯವಾದಷ್ಟೂ ಸಂಕ್ಷಿಪ್ತವಾಗಿ ಪಟ್ಟಿ ಮಾಡಲು ಪ್ರಾರಂಭಿಸುತ್ತೇನೆ. ಈ ವಿಧೇಯಕ ಶಿಕ್ಷೆಯ ಕಾಯಿದೆಯೆಂದೇ ನಾನು ಭಾವಿಸಿದ್ದೇನೆ. ಇದರಿಂದ ಪತ್ರಿಕಾ ರಂಗಕ್ಕೆ ದಿಗ್ಬಂಧನವನ್ನು ಹೇರಿದಂತಾಗುತ್ತದೆ. ಯಾವುದೇ ಕಾರಣವನ್ನು ಬಹಿರಂಗಗೊಳಿಸದೆ, ಹಿಂದಿನಿಂದ ಬಂದು, ಕಾನೂನಿನ ತೋಳ್‌ತೆಕ್ಕೆಗೆ ನೂಕುವಂಥ ಒಂದು ನಿರಂತರ ಸನ್ನಾಹವಿದು ಎಂದು ಹೇಳಲು ನಾನು ಇಚ್ಛಿಪಡುತ್ತೇನೆ. ಒಬ್ಬ ರಾಜಕೀಯ ವ್ಯಕ್ತಿಯಾಗಲ್ಲದೆ, ಒಬ್ಬ ಪತ್ರ ಕರ್ತನಾಗಿ ನನ್ನ 25 ವರ್ಷಗಳ ಅನುಭವದ ಆಧಾರದ ಮೇಲೆ ನಾನು ಮಾತನಾಡುತ್ತಿದ್ದೇನೆ. ಚಾರಿತ್ರ್ಯ ವಧೆಯಲ್ಲಿ ನಿರತವಾಗುವ ಅಥವಾ ಅಶ್ಲೀಲವಾಗಿ ಬರೆಯುವಂಥ ಪತ್ರಿಕೆಗಳನ್ನು ಹತೋಟಿಯಲ್ಲಿಟ್ಟುಕೊಳ್ಳುವಲ್ಲಿ ನಿಮ್ಮನ್ನು ಯಾರೂ ಆಕ್ಷೇಪಿಸುವುದಿಲ್ಲ. ಇವುಗಳ ವಿರುದ್ಧ ನನ್ನ ಸನ್ಮಾನ್ಯ ಸ್ನೇಹಿತರಾದ ಗೃಹ ಸಚಿವರು ತಮ್ಮ ಇಚ್ಛೆಯಾನುಸಾರ ಮುಂದುವರೆಯಬಹುದಾದ ಕ್ರಮಗಳಿಗೆ ನನ್ನ ಸಂಪೂರ್ಣ ಒಪ್ಪಿಗೆ ಇದೆ. ಆದರೆ, ಇಂಥ ವಿಷಯಗಳನ್ನು ವಿಚಾರಿಸಲು ಒಂದು ಸಾಮಾನ್ಯ ಕಾನೂನು "ಭಾರತೀಯ ದಂಡ ಸಂಹಿತೆ" ಚಾಲ್ತಿಯಲ್ಲಿದೆ.

ಹೀಗೆ ವಿರುದ್ಧವಾಗಿ ನಡೆದುಕೊಂಡಂಥ ಕೆಲವು ಪತ್ರಿಕೆಗಳನ್ನು ಪಟ್ಟಿ ಮಾಡುವ ಪ್ರಯತ್ನ ಮಾಡಿದ್ದೇನೆ. ಅವುಗಳು ಹಿಂದಿ ಭಾಷೆಯಲ್ಲಿಯ "ಉಜಾಲ" ಮರಾಠಿಯ "ಉನ್ಮಾದ ಮತ್ತು ಮಸ್ತಿ" ತಮಿಳಿನ "ಕಲೈ-ನಸನ್" ಹಾಗೂ ತೆಲಗು ಬಾಷೆಯ ಮುಳು ಕೊಳ. ಹೀಗೆ ನಾನು ಇನ್ನೂ ಪಟ್ಟಿ ಮಾಡಬಹುದಾಗಿದೆ. ಚಾರಿತ್ರ್ಯ ವಧೆಯನ್ನು ಮಾಡುವಲ್ಲಿ ನಿರತವಾಗಿರುವ ಅಥವಾ ಅಶ್ಲೀಲವಾಗಿ ವೈಯಕ್ತಿಕ ನಿಂದನೆ ಮಾಡುವಂಥ ಪತ್ರಿಕೆಗಳ ವಿರುದ್ಧ ಸರ್ಕಾರ ಕ್ರಮ ಕೈಗೊಳ್ಳುವಲ್ಲಿ ನನ್ನ ಅಭ್ಯಂತರವಿಲ್ಲ. ಆದರೆ, ಇಡೀ ಪತ್ರಿಕಾ ರಂಗವನ್ನು ಹಾಗೂ ಪತ್ರಿಕಾ ವೃತ್ತಿಯನ್ನು ಈ ವಿಧೇಯಕದ ಮೂಲಕ ಶಿಕ್ಷಿಸಬೇಕೆಂಬ ಉದ್ದೇಶದಿಂದ ವಿಧೇಯಕವನ್ನು ಮಂಡಿಸುತ್ತಿರುವುದಕ್ಕೆ ಕಾರಣ ಅದಲ್ಲ. ಸಾರ್ವಜನಿಕ ಸೇವೆಯಲ್ಲಿ ಅತ್ಯಂತ ಗೌರವಯುತ ಸ್ಥಾನಮಾನವನ್ನು ಈ ರಾಷ್ಟ್ರದಲ್ಲಿ ಪತ್ರಿಕಾ ವೃತ್ತಿ ಹೊಂದಿದೆ ಎಂದು ನಾನು ಪರಿಗಣಿಸುತ್ತೇನೆ. ಸುಮಾರು 10 ವರ್ಷಗಳ ಕಾಲ ವಿದೇಶದಲ್ಲಿ ನೆಲಸಬೇಕಾಗಿ ಬಂದಿದ್ದರಿಂದ, ಇತರೆ ದೇಶಗಳಲ್ಲಿನ ಪತ್ರಿಕೆಗಳ ಕಾರ್ಯ ನಿರ್ವಹಣೆಯ ಬಗ್ಗೆ ಅಲ್ಪಸ್ವಲ್ಪ ನನಗೆ ಗೊತ್ತಿದೆ. ನಮ್ಮ ರಾಷ್ಟ್ರದಲ್ಲಿ ಇನ್ನೂ ಪತ್ರಿಕೆಯನ್ನು ನಂಬಬಹುದಾಗಿದೆ. ಪತ್ರಿಕೆಗಳಿಂದಾಗಿ ಮತ್ತು ಪ್ರಕಟಣೆಗಳಿಂದಾಗಿ ವಿವಿಧ ವೃತ್ತಿ ಪರ ಸಂಸ್ಥೆಗಳು ತಮ್ಮ ನೈತಿಕತೆ ಮತ್ತು ನಡವಳಿಕೆಗಳ ನೀತಿ ಸಂಹಿತೆಯನ್ನು ರೂಪಿಸಿಕೊಳ್ಳುತ್ತಿವೆ ಎಂಬುದನ್ನು ಹೆಮ್ಮೆಯಿಂದ ಹೇಳಬೇಕಾಗಿದೆ.

ಈ ವಿಧೇಯಕ ಕುರಿತು ನನ್ನ ಆಕ್ಷೇಪಣೆಗಳನ್ನು ಈಗ ವಿವರಿಸುತ್ತೇನೆ. ಜಿಲ್ಲಾ ನ್ಯಾಯಾಧೀಶ ಮತ್ತು ಜ್ಯೂರಿಯವರು ಸಕ್ಷಮ ಅಧಿಕಾರಿಯಾಗುತ್ತಾರೆಂಬುದು ವಿಷಾದನೀಯ. ಇದು ಅದೇ ತಂತ್ರೋಪಾಯ ಕ್ರಮದ ಒಂದು ಬಾಗ ಇದನ್ನೇ ಫ್ರೆಂಚರು droit administratif ಎಂದರೆ ಆಡಳಿತಾತ್ಮಕ ನ್ಯಾಯ ಎಂದು ಹೇಳುತ್ತಾರೆ. ಆ ರೀತಿಯಲ್ಲಿ ಸರ್ಕಾರ ಇದನ್ನು ಜಾರಿಗೊಳಿಸಲು ಪ್ರಯತ್ನಿಸುತ್ತಿದೆ. ಪ್ರತಿಬಂಧಕ ಸ್ಥಾನಬದ್ಧತೆ ಪ್ರಕರಣಗಳ ಸಲಹಾ

ಪರಿಷತ್ತುಗಳನ್ನು ಹಾಗೆಯೇ ಕಾರ್ಮಿಕ ಮತ್ತು ಭ್ರಷ್ಟಾಚಾರ ಪ್ರಕರಣಗಳ ಆಡ್‌ಹಾಕ್ ನ್ಯಾಯಾಧಿಕರಣಗಳನ್ನು ಹೇಗೆ ನಡೆಸಿಕೊಂಡು ಬರಲಾಗುತ್ತಿದೆ ಎನ್ನುವುದನ್ನು ನಾನು ಕಣ್ಣಾರೆ ಕಂಡಿದ್ದೇನೆ. ಈ ನೆಲದ ಕಾನೂನನ್ನು ಸ್ವಲ್ಪಸ್ವಲ್ಪವೇ ಕಚ್ಚಿ ತಿನ್ನಲಾಗುತ್ತಿದೆ ಹಾಗೂ ವಿಶೇಷ ಕಾರ್ಯವಿಧಾನಗಳನ್ನು ಮತ್ತು ನ್ಯಾಯಾಧೀಕರಣಗಳನ್ನು ಸೃಷ್ಟಿಸಲಾಗುತ್ತಿದೆ. ನ್ಯಾಯಾಧೀಶ ಮತ್ತು ಜ್ಯೂರಿಯವರಿಗೆ ಸಂಬಂಧಿಸಿದ ಉಪಬಂಧಗಳನ್ನು ಕುರಿತಂತೆ ನನ್ನ ಗೌರವಾನ್ವಿತ ಸ್ನೇಹಿತರಾದ ಪಂಡಿತ್ ಠಾಕೂರ್‌ದಾಸ್ ಭಾರ್ಗವರವರು ಅಷ್ಟೊಂದು ಭಾವಾವೇಶದಿಂದ ಮಾತನಾಡುವ ಅವಶ್ಯಕತೆ ಇರಲಿಲ್ಲ.

ನನ್ನ ಎರಡನೇ ಆಕ್ಷೇಪಣೆ ಬಗ್ಗೆ ಹೇಳುತ್ತೇನೆ. ಈ ಸದನ ಕೆಲವು ಸೆಕೆಂಡುಗಳಷ್ಟು ತಾಳ್ಮೆ ತೋರಿಸಬೇಕೆಂದು ಕೋರುತ್ತೇನೆ. ನಮ್ಮನ್ನು ಕಲ್ಯಾಣ ರಾಷ್ಟ್ರವನ್ನಾಗಿ ಘೋಷಿಸಿಕೊಂಡಿದ್ದೇನೆ. ದುರಾದೃಷ್ಟದಿಂದ ಇದು ಅತಿ ವೇಗದಿಂದ ಅಧಿಕಾರಿಶಾಹೀ ರಾಷ್ಟ್ರವಾಗಿ ಪರಿಣಮಿಸುತ್ತಲಿದೆ. ಸಂಸತ್ತಾಗಲೀ ಅಥವಾ ರಾಜ್ಯ ಶಾಸಕಾಂಗಗಳಾಗಲೀ ಅಥವಾ ಕೇಂದ್ರದ ಸಚಿವರಾಗಲೀ ಅಥವಾ ರಾಜ್ಯ ಸಚಿವರಾಗಲೀ ಇವರ್‍ಯಾರಿಗೂ ಆಡಳಿತ ನಡೆಸಲು ಸಾಧ್ಯವಾಗುತ್ತಿಲ್ಲ. ಹಂತ ಹಂತವಾಗಿ ಆಡಳಿತದ ಪ್ರತಿಯೊಂದು ಭಾಗವೂ ಅಧಿಕಾರಿಶಾಹಿಗಳ ಕೈವಶವಾಗುತ್ತಿದೆ. ಈ ವೃತ್ತಪತ್ರಿಕೆಗಳ ಪ್ರಾಸಿಕ್ಯೂಷನ್ ಬಗ್ಗೆ ಅಲ್ಪಸ್ವಲ್ಪ ಜ್ಞಾನ ನನಗಿದೆ. ನಾನದನ್ನು ತಪ್ಪಾಗಿ ಗ್ರಹಿಸದಿದ್ದಲ್ಲಿ ಹೇಳುವುದೇನೆಂದರೆ ಸಚಿವಾಲಯದ ಯಾವುದೋ ಒಂದು ಮೂಲೆಯಲ್ಲಿ, ಕೆಲವು ಸಣ್ಣ ನೌಕರರು ಕುಳಿತು ಇಂಥ ಇಂಥ ಪತ್ರಿಕೆಗಳ ವಿರುದ್ಧ ಕ್ರಮಗಳನ್ನು ತೆಗೆದುಕೊಳ್ಳಬೇಕೆಂದು ನಿಶ್ಚಯಿಸಿದ ನಂತರವೇ ಇಡೀ ಆಡಳಿತ ಯಂತ್ರ ಚುರುಕಾಗುತ್ತದೆ. ಅಂತಿಮವಾಗಿ ಪ್ರಾಸಿಕ್ಯೂಷನ್ ಪ್ರಾರಂಭಿಸಲಾಗುತ್ತದೆ. ಕೇವಲ ಮೂರು ಸಾವಿರ ರೂಪಾಯಿಗಳಿಗಾಗಿ 30 ಸಾವಿರ ರೂಪಾಯಿಗಳ ದಂಡ ಅಥವಾ ಭದ್ರತೆ ಯಾವುದೋ ಒಂದನ್ನು, ವಿಧಿಸಿದಂಥ ದೆಹಲಿಯ ಒಂದು ಪ್ರಕರಣದ ಬಗ್ಗೆ ನನ್ನ ಗೌರವಾನ್ವಿತ ಸ್ನೇಹಿತರಾದ ಶ್ರೀ ಚಟರ್ಜಿಯವರು ಉಲ್ಲೇಖಿಸಿದರು. ಸುಮಾರು 20 ವರ್ಷಗಳಿಂದ ನಾನು ದೆಹಲಿ ನಿವಾಸಿಯಾಗಿರುವುದರಿಂದ ನನಗೂ ಸಹ ಈ ಪ್ರಕರಣದ ಬಗ್ಗೆ ಸ್ವಲ್ಪ ಮಟ್ಟಿನ ಮಾಹಿತಿ ಇದೆ. ಕಚೇರಿಯ ಒಬ್ಬ ಸಣ್ಣ ನೌಕರನ ತಪ್ಪು ಈ ಒಂದು ಅವನತಿಗೆ ಕಾರಣವಾಯಿತು. ನನ್ನ ಮೂರನೇ ಆಕ್ಷೇಪಣೆ ಏನೆಂದರೆ ಈ ರಾಷ್ಟ್ರದ ವೃತ್ತಪತ್ರಿಕೆಗಳ ನಿರ್ವಹಣೆಯನ್ನು ಹೊತ್ತಿರುವಂಥ ಪತ್ರಿಕೆಗಳ ಭಾರೀ ಕುಳಗಳ ಮತ್ತು ಅಧಿಕಾರಿಗಳ ವಿರುದ್ಧ ನನ್ನ ಗೌರವಾನ್ವಿತ ಸದಸ್ಯರು ತಮ್ಮ ಶಕ್ತಿಮೀರಿ ಕ್ರಮಗಳನ್ನು ತೆಗೆದುಕೊಳ್ಳಬಹುದಿತ್ತೆಂದು ನಾನು ಊಹಿಸಿದ್ದೆ. ಆದರೆ, ಈ ಪತ್ರಿಕೆಗಳ ಭಾರೀ ಕುಳಗಳ ಕಾರ್ಯ ಚಟುವಟಿಕೆಗಳಿಗೆ ರಕ್ಷಣೆ ನೀಡಲು ಉನ್ನತ ಸ್ಥಾನದಲ್ಲಿರುವವರ ಮಕ್ಕಳು ಅಥವಾ ಅಳಿಯಂದಿರನ್ನು ನೇಮಕ ಮಾಡಿಕೊಳ್ಳಲಾಗುತ್ತಿರುವುದನ್ನು ನಾನಷ್ಟೇ ಅಲ್ಲದೆ ನನ್ನ ಸ್ನೇಹಿತರೂ ಬಲ್ಲವರಾಗಿದ್ದಾರೆ. ಸ್ವಾತಂತ್ರ್ಯದ ಬಗ್ಗೆ ನಿಜವಾದ ಮಾರ್ಗದರ್ಶನ ಹಾಗೂ ಬೆಳಕನ್ನು ಈ ರಾಷ್ಟ್ರದ ಸಾವಿರ ಸಾವಿರ ಸಂಖ್ಯೆಯ ಸಣ್ಣ ಪತ್ರಿಕೆಗಳು ತೋರುತ್ತಿವೆ. ಈ ವಿಧೇಯಕವನ್ನು ಸ್ವತಂತ್ರ ಮತ್ತು

ಸಣ್ಣ ಪತ್ರಿಕೆಗಳ ಮೇಲೆ ಪ್ರಯೋಗಿಸಲಾಗುವುದೆಂದು ಹೇಳಲಾಗುತ್ತಿದ್ದು, ಅವುಗಳನ್ನು ಹಾದಿ ತಪ್ಪಿಸುವಂಥ ಪ್ರಯತ್ನ ಇದಾಗಿದೆ ಮಾನ್ಯ ಉಪಾಧ್ಯಕ್ಷರೇ ತಾವು ಹಳೆಯ ಕೇಂದ್ರ ಶಾಸನ ಸಭೆಯಲ್ಲಿ ಅತ್ಯಂತ ಪ್ರಾಮುಖ್ಯರಾಗಿದ್ದಂಥ ಸದಸ್ಯರು ಅಧಿಕಾರಶಾಹಿ ಮತ್ತು ಕೆಲವು ರಾಜಕೀಯ ಪಕ್ಷಗಳನ್ನು ರಕ್ಷಿಸಲು ಹೊರಟಿರುವ ಈ ಒಂದು ವಿಧೇಯಕ, ಒಂದು ರೀತಿಯ ಎಂದು ನನಗನಿಸುತ್ತದೆ.

ನನ್ನ ನಾಲ್ಕನೇ ಆಕ್ಷೇಪಣೆಯನ್ನು ಹೇಳುತ್ತೇನೆ. ಈ ಸದನವನ್ನು ಈ ವಾದವನ್ನು ಕೇಳುವಂಥ ಸಹನೆಯನ್ನು ತೋರಿಸಬೇಕೆಂದು ನಾನು ಕೋರುತ್ತೇನೆ. ಬಹುತೇಕ ಎಲ್ಲಾ ಸಾಪ್ತಾಹಿಕಪತ್ರಿಕೆಗಳನ್ನು ಇತರೆ ಪ್ರಿಂಟಿಂಗ್ ಪ್ರೆಸ್‌ಗಳಲ್ಲಿ ಹಣ ನೀಡಿ ಪ್ರಿಂಟ್ ಮಾಡಿಸಿಕೊಳ್ಳಲಾಗುತ್ತಿದೆ. ನನ್ನ ಗೌರವಾನ್ವಿತ ಸ್ನೇಹಿತರಾದ ಪಂಡಿತ್ ಠಾಕೂರ್‌ದಾಸ್ ಭಾರ್ಗವ ಹಾಗೂ ಶ್ರೀ ವಲ್ಲಾರಸ್ ರವರು ಸ್ವಲ್ಪ ಹೊತ್ತಿನ ಮುಂಚೆ ಹೇಳಿದಂತೆ, ಮುದ್ರಣಕಾರರಿಗೆ ಅಥವಾ ವೃತ್ತಪತ್ರಿಕೆಗಳ ಮುದ್ರಕರಿಗೆ ನೀಡಿದಂಥ ಸಾಮಾನ್ಯ ಚಿಲ್ಲರೆ ಕೆಲಸಗಳು ಇವು. ಇತರರಿಗೆ ಮಾಡಿಕೊಟ್ಟ ಕಾರ್ಯಕ್ಕಾಗಿ ಅವರನ್ನು ಶಿಕ್ಷಿಸಲು ಈಗ ಉದ್ದೇಶಿಸಲಾಗಿದೆ. ಇಂಥ ಅನೇಕ ಪ್ರಕರಣಗಳು ನನಗೆ ತಿಳಿದಿದೆ. ಸ್ವತಃ ನಾನೇ ವೃತ್ತಪತ್ರಿಕೆಗಳ ಹಾಗೂ ಪುಸ್ತಕಗಳ ಪ್ರಕಾಶಕನಾಗಿರುವುದರಿಂದ ಇದನ್ನು ಹೇಳಬಲ್ಲೆ. ಮುದ್ರಣಕ್ಕಾಗಿ ಕೊಡುವ ವಿಷಯಗಳು ಮುದ್ರಕರಿಗೆ ಅರ್ಥವಾಗಲಾರವು. ಆ ವಿಷಯಗಳ ಬಗ್ಗೆ ಅವರಿಗೆ ಏನನ್ನೂ ಮಾಡಲು ಸಾಧ್ಯವಾಗುವುದಿಲ್ಲ. ಆದಾಗ್ಯೂ ಆ ವಿಷಯಗಳಿಗಾಗಿ ಮುದ್ರಕರನ್ನು ಹೊಣೆಗಾರರನ್ನಾಗಿ ಮಾಡುತ್ತಿದ್ದೀರಿ. ಇದು ಅತ್ಯಂತ ಆಕ್ಷೇಪಣಾರ್ಹವೆಂದು ನಾನು ಭಾವಿಸುತ್ತೇನೆ. ಈ ಕಾನೂನಿನ ಅಡಿಯಲ್ಲಿ ಮುದ್ರಕರನ್ನು ಶಿಕ್ಷಿಸಲು ಹೊರಟಿರುವುದು ಅತ್ಯಂತ ವಿಷಾದನೀಯ.

ನಾನು ಪ್ರಸ್ತಾಪಿಸುತ್ತಿರುವ ಕೊನೆಯ ಅಂಶವೇನೆಂದರೆ ಸ್ನೇಹಿತ ರಾಷ್ಟ್ರಗಳ ಮುಖ್ಯಸ್ಥರನ್ನು ಟೀಕಿಸುವಂಥ ಯಾವುದೇ ಪತ್ರಿಕೆಗೆ ಛೀಮಾರಿ ಹಾಕುವಂಥ ಉಪಬಂಧವು ಇಂಗ್ಲೇಂಡ್, ಅಮೇರಿಕಾ ಸಂಯುಕ್ತ ಸಂಸ್ಥಾನಗಳು, ಇರಾನ್, ದಕ್ಷಿಣ ಆಫ್ರಿಕಾ, ಜೋರ್ಡಾನ್ ಹಾಗೂ ವಿಶ್ವದ ಇತರೆ ಯಾವುದೇ ಭಾಗಗಳಲ್ಲಿ ಇರುವುದಿಲ್ಲ. ಆ ನೆಲದ ಸಾಮಾನ್ಯ ನಿಯಮದ ಅಡಿಯಲ್ಲಿಯೇ ಕ್ರಮಗಳನ್ನು ತೆಗೆದುಕೊಳ್ಳಲಾಗುತ್ತಿದೆ. ನಾವು ಏಕೆ ಈ ಕಾನೂನನ್ನು ಹೊಂದಿರಬೇಕು ಹಾಗೂ ಈ ಸಮಸ್ಯೆಯನ್ನು ಈ ಕಾನೂನಿನಡಿಯಲ್ಲಿಯೇ ಏಕೆ ತರಬೇಕು ಎನ್ನುವುದಕ್ಕೆ ನನಗೆ ಕಾರಣಗಳೇ ತಿಳಿಯುತ್ತಿಲ್ಲ.

ಕೀಳುಮಟ್ಟದ ಸಾಹಿತ್ಯವನ್ನು ಹೋಗಲಾಡಿಸುವ ನಿಟ್ಟಿನಲ್ಲಿ ಸರ್ಕಾರ ತೆಗೆದುಕೊಳ್ಳುವ ಕ್ರಮಕ್ಕೆ ಈ ರಾಷ್ಟ್ರ ಸಂಪೂರ್ಣವಾಗಿ ಸರ್ಕಾರದೊಂದಿಗೆ ಇದೆಯಾದರೂ ಇತರ ಉಪಬಂಧಗಳಿಗೆ ಅದರ ಸಹಾನುಭೂತಿಯಿಲ್ಲದವೆಂಬುದನ್ನು ಪುನಃ ನಾನಿಲ್ಲಿ ಉಚ್ಚರಿಸುತ್ತೇನೆ. ಆಯೋಗವು, ಕೆಲವು ಅಂಶಗಳ ಮೇಲೆ ಸಕಾರಾತ್ಮಕವಾಗಿ ಶಿಫಾರಸು ಮಾಡಿರುವಾಗ,

ಪ್ರತ್ಯಾರೋಪ ಮಾಡುವುದಾದರೂ ಏಕೆ? ಆದರೆ, ತೆರಿಗೆದಾರರ ಹಣದಿಂದ ಪೋಷಿಸಿಕೊಂಡು ಬರುತ್ತಿರುವ ರಿಜಿಸ್ಟ್ರಾರ್‌ರವರ ಕೆಲವು ಕರ್ತವ್ಯಗಳನ್ನಾದರೂ ನಿರ್ದಿಷ್ಟಪಡಿಸುವಲ್ಲಿ ನನ್ನ ಗೌರವಾನ್ವಿತ ಸ್ನೇಹಿತರಾದ ಮಾನ್ಯ ವಾರ್ತಾ ಮತ್ತು ಪ್ರಚಾರ ಸಚಿವರು ಮರೆತಿದ್ದಾರೆಂದು ಹೇಳಲು ನನಗೆ ವಿಷಾದವಾಗುತ್ತದೆ.

ಆಯೋಗವು ಮಾಡಿರುವ ಶಿಫಾರಸುಗಳಿಗೆ ಸಂಬಂಧಪಟ್ಟಂತೆ ಮತ್ತು ದುರಾದೃಷ್ಟವಾಶಾತ್ ಈ ವಿಧೇಯಕದಲ್ಲಿ ಯಾವುದೇ ರೀತಿಯಲ್ಲೂ ಪ್ರಸ್ತಾಪಿಸದಿರುವಂಥ ನಾನು ಹೇಳುವ ಮುಖ್ಯವಾದ ಒಂದು ಅಂಶವೇನೆಂದರೆ ಈ ವಿಧೇಯಕವನ್ನು ವಾರ್ತಾ ಸಂಸ್ಥೆಗಳಿಗೂ ಅನ್ವಯಿಸಿರುವುದು. ಎಲ್ಲಿಯವರೆಗೆ ಈ ವಿಧೇಯಕದಡಿಯಲ್ಲಿ ಭಾರತೀಯ ವಾರ್ತಾ ಸಂಸ್ಥೆಗಳನ್ನು ತರುವುದಿಲ್ಲವೋ ಅಲ್ಲಿಯವರೆಗೆ ಈ ವಿಧೇಯಕ ಒಂದು ನಿಷ್ಕ್ರಿಯ ದಾಖಲೆಯಾಗಲಿದೆ, ಅರ್ಥಾತ್ ಈ ರಾಷ್ಟ್ರದ ವಾರ್ತಾ ಚಟುವಟಿಕೆಗಳ ಒಂದು ವಿಸ್ತಾರವಾದ ವಲಯವನ್ನು ಕೈಬಿಟ್ಟಂತಾಗುತ್ತದೆ ಎಂದು ನಾನು ವಿಷಾದದಿಂದ ಹೇಳಬೇಕಾಗಿದೆ. ಈ ವಿಧೇಯಕದ ಸೀಮಾ ವಲಯದೊಳಗೆ ವಾರ್ತಾ ಸಂಸ್ಥೆಗಳನ್ನು ತರುವುದರ ಸಲುವಾಗಿ ವಿಧೇಯಕ್ಕೆ ತರಲಾದ ತಿದ್ದುಪಡಿಗಳೆಂದು ಕರೆದಾಗ್ಯೂ ಸಹಾ, ಮಾನ್ಯ ಸಚಿವರು ಕೊನೆಯ ಈ ಹಂತದಲ್ಲೂ ಅದರ ಸಾಧ್ಯಾಸಾಧ್ಯತೆಗಳನ್ನು ಪರಿಗಣಿಸುವರೆಂದು ನಾನು ದೃಢವಾಗಿ ನಂಬುತ್ತೇನೆ. ಈ ನನ್ನ ಒಂದು ನಿರ್ದಿಷ್ಟ ಸೂಚನೆಗೆ ಇಡೀ ರಾಷ್ಟ್ರ ಹಾಗೂ ಪತ್ರಿಕಾ ರಂಗವು ಬೆಂಬಲ ನೀಡುವುದೆಂದು ನಾನು ನಂಬುತ್ತೇನೆ. ಏಕೆಂದರೆ ಮಾನ್ಯ ಗೌರವಾನ್ವಿತ ಮಂತ್ರಿಗಳಿಂದಾಗುವ ಈ ಲೋಪದೋಷಅಥವಾ ನ್ಯೂನತೆಯನ್ನು ಯಾರೂ ಪ್ರೋತ್ಸಾಹಿಸುವುದಿಲ್ಲವೆಂದು ನನಗೆ ತಿಳಿದಿದೆ. ವಾಸ್ತವವಾಗಿ, ಈ ವಾರ್ತಾ ಸಂಸ್ಥೆಗಳ ಕಾರ್ಯ ಚಟುವಟಿಕೆಗಳನ್ನು ಈ ವಿಧೇಯಕದ ವ್ಯಾಪ್ತಿಯಿಂದ ಹೊರಗಿಟ್ಟ ಪರಿಣಾಮವಾಗಿ ತೀವ್ರತರವಾದ ಪ್ರತಿಭಟನೆಯೇ ನಡೆಯಿತು. ಭಾರತೀಯ ಮತ್ತು ಪೂರ್ವ ಪ್ರಾಂತ್ಯದ ವೃತ್ತಪತ್ರಿಕೆಗಳ ಸಂಘದ ಅಧ್ಯಕ್ಷರಾದ ಶ್ರೀ ನಿರ್ಮಲ ಘೋಷ್‌ರವರು ಮಾನ್ಯ ಸಚಿವರಿಗೆ ಬರೆದ ಪತ್ರದ ಕಡೆಗೆ ತಮ್ಮ ಗಮನ ಸೆಳೆಯುತ್ತಾ, ಸರ್ಕಾರದ ಜೊತೆಗೆ ಸಹಕರಿಸಲಾಗುವುದೆಂದು ಜೋರಾಗಿ ಘೋಷಿಸಿದ್ದ ಘೋಷಣೆಗೆ ವಿರುದ್ಧವಾಗಿ ಕೆಲವಾರು ಅಡಚಣೆ, ತೊಂದರೆ ಹಾಗೂ ಸಂಶಯಗಳಿಂದಾಗಿ ಸಚಿವರನ್ನೇ ದೂಷಿಸಿರುವುದನ್ನು ತಮ್ಮ ಮತ್ತು ಈ ಸದನದ ಅನುಮತಿಯ ಮೇರೆಗೆ ಇಲ್ಲಿ ಹೇಳಲು ಇಚ್ಛಿಸುತ್ತೇನೆ. ಆ ಪತ್ರದಲ್ಲಿ ಪ್ರಸ್ತಾಪಿಸಲಾದ ಎಲ್ಲಾ ಅಂಶಗಳನ್ನು ಪ್ರಸ್ತಾಪಿಸಲು ನನಗೆ ಸಮಯಾವಕಾಶವಿದೆ ಎಂದು ನಂಬುತ್ತೇನೆ ಹಾಗೂ ಸದರಿ ಪತ್ರದಲ್ಲಿ ಬರೆದಿರುವ ಅಂಶಗಳನ್ನು ಮಾನ್ಯ ಸಚಿವರು ನಿರಾಕರಿಸುವುದಿಲ್ಲವೆಂದು ಭಾವಿಸುತ್ತೇನೆ. ಅದು ಹೇಳುತ್ತದೆ:- “ಕಾರ್ಯನಿರತ ಪತ್ರಕರ್ತ ಪರಿಭಾಷೆಯನ್ನು ಜಾಳು ಜಾಳು ಶಬ್ದಗಳಲ್ಲಿ ವಿವರಿಸಲಾಗಿದೆ ಹಾಗೂ ಅದು ಆಡಳಿತಾತ್ಮಕ ತೊಂದರೆಯನ್ನುಂಟು ಮಾಡುತ್ತದೆ...... ಅತ್ಯಂತ ಸುವ್ಯವಸ್ಥಿತವಾದ ಯಾವುದೇ ಶಿಷ್ಟಾಚಾರ ಇರಬೇಕೆಂಬ ಕೋರಿಕೆಗಳನ್ನು ಇಲ್ಲಿಯೂ ಅಳವಡಿಸಬೇಕು”. 5 ಲಕ್ಷ ಹಾಗೂ ಅದಕ್ಕಿಂತಲೂ ಹೆಚ್ಚು

ಮಾರಾಟವಿರುವ ವೃತ್ತಪತ್ರಿಕೆಗಳನ್ನಷ್ಟೇ ಈ ವಿಧೇಯಕದ ವ್ಯಾಪ್ತಿಯಡಿಯಲ್ಲಿ ತರಲು ಅಗತ್ಯವಿರುವ ಎಲ್ಲಾ ಕ್ರಮಗಳನ್ನು ತೆಗೆದುಕೊಳ್ಳಬೇಕೆಂದು ಅದು ಹೇಳುತ್ತದೆ. ಈ ನಿಟ್ಟಿನಲ್ಲಿ ಸರ್ಕಾರ ತೆಗೆದುಕೊಳ್ಳುವ ಯಾವುದೇ ಕ್ರಮದ ಬಗ್ಗೆ ವೃತ್ತಪತ್ರಿಕಾ ಪ್ರಪಂಚ ಅದರಲ್ಲಿಯೂ ವಿಶೇಷವಾಗಿ ಏಕಸ್ವಾಮ್ಯವಾದಿ ವಿಭಾಗಗಳು ಪ್ರತಿಭಟಿಸುತ್ತವೆ ಎನ್ನುವುದನ್ನು ತಿಳಿಸುವುದಷ್ಟೇ ನನ್ನ ಉದ್ದೇಶವಾಗಿದೆ. ಪತ್ರಿಕಾ ಪ್ರಪಂಚದ ಈ ವಿರೋಧದಿಂದಾಗಿ ನನ್ನ ಗೌರವಾನ್ವಿತ ಸ್ನೇಹಿತರಾದ ಮಾನ್ಯ ಸಚಿವರು ಪ್ರಾಯಶಃ ವಾರ್ತೆಗಳ ಈ ಒಂದು ವರ್ಗವನ್ನು ಅಂದರೆ ನಾನಾಗಲೇ ಹೇಳಿದಂತೆ ಪತ್ರಿಕಾ ಆಯೋಗದ ಶಿಫಾರಸುಗಳನ್ನು ಈ ವಿಧೇಯಕದಡಿ ತರಲು ಹಿಂದುಮುಂದೆ ನೋಡುತ್ತಿದ್ದಾರೆಂದು ಗಂಭೀರವಾಗಿ ಆರೋಪಿಸಲು ಸಿದ್ಧನಿದ್ದೇನೆ.

ಈಗಿರುವ ರಿಜಿಸ್ಟ್ರಾರ್‌ರವರಲ್ಲದೆ, ಪ್ರೆಸ್ ಕೌನ್ಸಿಲ್ ಎಂದು ಏನು ಕರೆಯಲಾಗುತ್ತದೆಯೋ ಅದೂ ಸಹ ಅಸ್ತಿತ್ವದಲ್ಲಿದ್ದು ಅದು ನಿರ್ವಹಿಸುವ ಕರ್ತವ್ಯವನ್ನು ತಿಳಿದುಕೊಳ್ಳುವ ಹಕ್ಕು ಈ ಸದನಕ್ಕಿದೆ. ಪ್ರೆಸ್ ಕೌನ್ಸಿಲ್‌ಗೆ ಸಾಕಷ್ಟು ಮಾಹಿತಿಯನ್ನು ಒದಗಿಸದಿದ್ದಲ್ಲಿ ಅದು ಕರ್ತವ್ಯ ನಿರ್ವಹಿಸಲಾರದು ಹಾಗೂ ಆ ರೀತಿಯ ಮಾಹಿತಿಗಳನ್ನು ಅಂದರೆ ಈ ವಿಧೇಯಕದ ಅಡಿಯಲ್ಲಿ ತರಲೇಬೇಕೆಂದು ಪ್ರೆಸ್ ಆಯೋಗವು ಆಗ್ರಹ ಪಡಿಸಿದ್ದಂಥ ಹಾಗೂ ನಾನೀಗಾಗಲೇ ಉಲ್ಲೇಖಿಸಲಾಗಿದ್ದಂಥ ಮಾದರಿ ಮಾಹಿತಿಗಳನ್ನು ಅವರಿಗೆ ಒದಗಿಸದಿದ್ದಲ್ಲಿ ಸಮರ್ಪಕವಾಗಿ ಅವರು ಕಾರ್ಯ ನಿರ್ವಹಿಸಲು ಸಾಧ್ಯವಾಗುವುದಿಲ್ಲ.

ಮಾನ್ಯ ಸಚಿವರು ವಿಧೇಯಕದ ಉಪಬಂಧಗಳ ವ್ಯಾಪ್ತಿಯಲ್ಲಿ ಈ ಹಂತದಲ್ಲಿ ಸಹ ಏನನ್ನು ಸೇರಿಸಿಕೊಳ್ಳಬೇಕು ಎನ್ನುವುದನ್ನು, ಅಂದರೆ ವಿಶೇಷವಾಗಿ ನಾನೀಗಾಗಲೇ ಪ್ರಸ್ತಾಪಿಸಿದ ಪ್ರೆಸ್ ಆಯೋಗದ ಶಿಫಾರಸುಗಳನ್ನು ಇದರಡಿಯಲ್ಲಿ ಸೇರಿಸಿಕೊಳ್ಳಲು ಒಪ್ಪಬೇಕೆಂದು ನಾನು ಒತ್ತಾಯಿಸುವುದಕ್ಕೆ ಇದೂ ಒಂದು ಹೆಚ್ಚಿನ ಕಾರಣವಾಗಿದೆ. ಇದರಿಂದಾಗಿ ಮಾಹಿತಿಯ ದಾಖಲೆ ಒಂದು ವಿಸ್ತೃತ ಮತ್ತು ವ್ಯಾಪಕ ದಾಖಲೆಯಾಗಿ ಪ್ರೆಸ್ ಕೌನ್ಸಿಲ್‌ಗೆ ಪ್ರಯೋಜನಕಾರಿಯಾಗುತ್ತದೆ. ಪ್ರೆಸ್ ಕೌನ್ಸಿಲ್ ಸಮರ್ಪಕವಾಗಿ ಕರ್ತವ್ಯ ನಿರ್ವಹಿಸಲು ಅಗತ್ಯವಾದ ಯಾವುದೇ ಸೌಲಭ್ಯಗಳನ್ನು ಮಾನ್ಯ ಸಚಿವರು ವಂಚಿಸುವುದಿಲ್ಲವೆಂದೂ ಹಾಗೂ ಅದಕ್ಕೆ ಮಾಹಿತಿಯನ್ನು ಪಡೆಯುವ ಮುಕ್ತ ಅವಕಾಶವಿರುವುದೆಂದೂ ನಾನು ಭಾವಿಸುತ್ತೇನೆ.

ಉದಾಹರಣೆಗಾಗಿ ನಾನು ಕೆಲವು ಸೂಚನೆಗಳನ್ನು ನೀಡಲು ತಯಾರಿದ್ದು, ಮಾನ್ಯ ಸಚಿವರು ಈ ಕೊನೆಯ ಕ್ಷಣದಲ್ಲೂ ಅವುಗಳನ್ನು ಒಪ್ಪುತ್ತಾರೆಂದು ನಂಬುತ್ತೇನೆ. ಈ ಕೆಳಗೆ ನಮೂದಿಸಿದಂಥ ಕೆಲವು ಅಂಶಗಳ ಮೇಲಾದರೂ ಮಾಹಿತಿಯನ್ನು ಸಂಗ್ರಹಿಸುವ ಜವಾಬ್ದಾರಿಯನ್ನು ರಿಜಿಸ್ಟ್ರಾರ್‌ರವರಿಗೆ ವಹಿಸಬೇಕು:

(ಎ) ಸರ್ಕಾರವು ನಿಗದಿಪಡಿಸಬಹುದಾದಂಥ ನಮೂನೆಯಲ್ಲಿ ಹಾಗೂ ಅಂಥ ವಿವರಗಳೊಂದಿಗೆ ಪರಿಶೋಧಿತ ಲಾಭ ಮತ್ತು ನಷ್ಟ ಲೆಕ್ಕಪತ್ರ ಹಾಗೂ ಆಯವ್ಯಯ ಪಟ್ಟಿಗಳ ಪ್ರತಿಗಳು (ಇವುಗಳನ್ನು ಯಾವ ರೀತಿಯಲ್ಲಿ ಪಡೆಯಬಹುದೆಂಬುದನ್ನು ಸರ್ಕಾರ ನಿರ್ಧರಿಸುವುದಕ್ಕೆ ನನ್ನ ಒಪ್ಪಿಗೆಯಿದೆ);

(ಬಿ) ಸರ್ಕಾರವು ಆಗಾಗ ನಿಗದಿಪಡಿಸಬಹುದಾದ ನಮೂನೆಯಲ್ಲಿ ವಂತಿಗೆದಾರರ ಪಟ್ಟಿ;

(ಸಿ) ಪ್ರತಿ ವರ್ಷದ ಕೊನೆಯ ದಿನದಲ್ಲಿದ್ದಂತೆ ನೌಕರರ ಪಟ್ಟಿ, ಅವರ ವರ್ಗೀಕರಣ, ಅವರ ವೇತನ ಶ್ರೇಣಿಗಳು, ರಜಾ ನಿಯಮಗಳು ಇತ್ಯಾದಿ;

(ಡಿ) ವಜಾ ಮಾಡಲಾದ, ರಾಜೀನಾಮೆ ನೀಡಿದ ಅಥವಾ ಸೇವೆಯನ್ನು ಬಿಟ್ಟಂಥ ನೌಕರರ ಸಂಖ್ಯೆ; ಪಾವತಿಸಲಾದ ಮೊತ್ತ ಇತ್ಯಾದಿ.,

ಆಯೋಗದ ಇತರ ಶಿಫಾರಸುಗಳನ್ನು ಅನುಷ್ಠಾನಗೊಳಿಸಿದಂಥ ಸಂದರ್ಭದಲ್ಲಿ ಪತ್ರಿಕಾ ವೃತ್ತಿಯಲ್ಲಿರುವ ನೌಕರನನ್ನು ಸಮರ್ಪಕ ರೀತಿಯಲ್ಲಿ ನೋಡಿಕೊಳ್ಳಲು ಈ ಮಾಹಿತಿಗಳು ಬಹು ಮುಖ್ಯ ಮಾಹಿತಿಗಳಾಗುತ್ತವೆ. ಈಗಾಗಲೇ ರೂಪುಗೊಂಡಿರುವ ಪತ್ರಿಕಾ ಏಕಸ್ವಾಮ್ಯದ ವರ್ಗ, ಈ ದೇಶದ, ಕೇವಲ ಪತ್ರಿಕಾ ವೃತ್ತಿಗೆ ಮಾತ್ರವಲ್ಲದೆ, ಸಮಸ್ತ ಸಾರ್ವಜನಿಕರಿಗೂ ಅಪಾಯವನ್ನುಂಟು ಮಾಡುವುದೆಂಬ ಅಂಶವನ್ನು ನಾನು ಒತ್ತಿ ಹೇಳಬೇಕಾಗಿದೆ. ನನ್ನನ್ನೂ ಒಳಗೊಂಡಂತೆ ಯಾರೂ ಕೂಡ ಚಿನ್ನದ ಮೊಟ್ಟೆಯನ್ನಿಡುವ ಕೋಳಿಯನ್ನು ಕೊಲ್ಲಲು ಆಸೆಪಡುವುದಿಲ್ಲ. ಇಂದು, ಈ ರಾಷ್ಟ್ರದಲ್ಲಿ ಪತ್ರಿಕೋದ್ಯಮವು, ವಿಶೇಷವಾಗಿ ಅವರ ಪ್ರಮುಖ ವಿಭಾಗವು ಏಕಸ್ವಾಮ್ಯದ ಸರಣಿ ಆಧಾರದ ಮೇಲೆ ಕಾರ್ಯ ನಿರ್ವಹಿಸುತ್ತಿದೆ. ಪತ್ರಿಕೋದ್ಯಮದ ಅವನತಿಯ ಪರವಾಗಿ ನಾನಿಲ್ಲಿ ನಿಂತಿಲ್ಲ. ಅದರ ಸುಧಾರಣೆಗಾಗಿ ನಾನಿಲ್ಲಿದ್ದೇನೆ. ಈ ನನ್ನ ಅನಿಸಿಕೆಯನ್ನು ಮಾನ್ಯ ಸಚಿವರು ಒಪ್ಪುವರೆಂದು ನಂಬುತ್ತೇನೆ. ಯಾವುದೇ ರೀತಿಯಿಂದಾದರೂ ಸರಿಯೇ ಅದನ್ನು ಸುಧಾರಿಸಬೇಕು. ಆದಕ್ಕಾಗಿ, ನಾನು ಈಗಷ್ಟೇ ಪ್ರಸ್ತಾಪಿಸಿದಂಥ ಮಾಹಿತಿಯ ಅವಶ್ಯವಿದ್ದು ಅದನ್ನು ಒದಗಿಸಿಕೊಡಬೇಕಾದಲ್ಲಿ ಈ ವಿಧೇಯಕದ ವ್ಯಾಪ್ತಿಯಲ್ಲಿ ಆಗತ್ಯ ತಿದ್ದುಪಡಿಗಳನ್ನು ಮಾಡಲು ಈ ಕೊನೆಯ ಕ್ಷಣಗಳಲ್ಲಾದರೂ ಒಪ್ಪಿಕೊಂಡು, ಮಾನ್ಯ ಸಚಿವರು ಅವರ ಅಪಹಾಸ್ಯಕ್ಕೆ ಮಂಗಳ ಹಾಡುವರೆಂಬ ದೃಢ ವಿಶ್ವಾಸವನ್ನು ನಾನು ಹೊಂದಿದ್ದೇನೆ.

*****

ಮುದ್ರಕರು: ನಿರ್ದೇಶಕರು, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ, ಸರ್ಕಾರಿ ಮುದ್ರಣಾಲಯ, ಬೆಂಗಳೂರು-1. ಕಾಸೂ-5577 ಎಲ್.ಎ. ಪಿ-8

## ಪ್ರತಿಭಾವಂತ ಸಂಸದೀಯ ಪಟುಗಳು ಇತರೆ

| ರಚಿತ ಪುಸ್ತಕಗಳು | ದರ<br>ರೂ. |
|---|---|
| 1. ಕೆ. ಹನುಮಂತಯ್ಯ | 20-00 |
| 2. ಎಸ್. ನಿಜಲಿಂಗಪ್ಪ | 15-00 |
| 3. ಶಾಂತವೇರಿ ಗೋಪಾಲಗೌಡ | 15-00 |
| 4. ವೈಕುಂಠ ಬಾಳಿಗಾ | 20-00 |
| 5. ವೀರೇಂದ್ರ ಪಾಟೀಲ್ | 20-00 |
| 6. ಕಡಿದಾಳ್ ಮಂಜಪ್ಪ | 15-00 |
| 7. ಜಿ.ವಿ. ಹಳ್ಳಿಕೇರಿ | 15-00 |
| 8. ಶ್ರೀಮತಿ ಕೆ.ಎಸ್. ನಾಗರತ್ನಮ್ಮ | 15-00 |
| 9. ಡಿ. ದೇವರಾಜ ಅರಸು | 15-00 |
| 10. ಕೆ.ಟಿ. ಭಾಷ್ಯಂ | 15-00 |
| 11. ಟಿ.ಸಿದ್ದಲಿಂಗಯ್ಯ | 20-00 |
| 12. ಕೆ. ಪುಟ್ಟಸ್ವಾಮಿ | 15-00 |
| 13. ಜಗಳೂರು ಇಮಾಂ | 15-00 |
| 14. ಕೆ.ಸಿ. ರೆಡ್ಡಿ | 20-00 |
| 15. ಬಿ.ವಿ. ಕಕ್ಕಿಲ್ಲಾಯ | 20-00 |
| 16. ಜೆ.ಬಿ. ಮಲ್ಲಾರಾಧ್ಯ | 15.00 |
| 17. ಹೆಚ್.ಎಂ. ಚನ್ನ ಬಸಪ್ಪ | 20.00 |
| 18. ಎಂ. ನಾಗಪ್ಪ | 15.00 |
| 19. ಬಿ. ರಾಚಯ್ಯ | 20.00 |
| 20. ಗಂಗಾಧರ ನಮೋಶಿ | 15.00 |
| 21. ಬಿ.ಡಿ. ಜತ್ತಿ | 15.00 |
| 22. ಆರ್. ಗುಂಡೂರಾವ್ | 20.00 |
| 23. ಕೆ.ಎಚ್. ಪಾಟೀಲ್ | 15.00 |
| 24. ಅಜೀಜ್ ಸೇಠ್ | 15.00 |
| 25. ಸಿ.ಎಂ. ಆರ್ಮುಗಂ | 15.00 |

## ವಿಧಾನ ಮಂಡಲದ ಗ್ರಂಥಾಲಯ ಉಪ ಸಮಿತಿ
## (2002-2003)

ಶ್ರೀಯುತರುಗಳಾದ :

| | | |
|---|---|---|
| 1. | ಬಿ.ಬಿ. ಶಿವಪ್ಪ<br>ವಿಧಾನ ಸಭಾ ಸದಸ್ಯರು | ಅಧ್ಯಕ್ಷರು |
| 2. | ಪಿ. ರಮೇಶ್ | ಸದಸ್ಯರು |
| 3. | ಬೆಲ್ಲದ ಚಂದ್ರಕಾಂತ ಗುರಪ್ಪ<br>ವಿಧಾನ ಸಭಾ ಸದಸ್ಯರು | ” |
| 4. | ಕೆ.ಬಿ. ಚಂದ್ರಶೇಖರ್<br>ವಿಧಾನ ಸಭಾ ಸದಸ್ಯರು | ” |
| 5. | ಡಿ.ಆರ್. ಪಾಟೀಲ್<br>ವಿಧಾನ ಸಭಾ ಸದಸ್ಯರು | ” |
| 6. | ಡಾ.ಎಂ.ಪಿ. ನಾಡಗೌಡ<br>ವಿಧಾನ ಪರಿಷತ್ತಿನ ಸದಸ್ಯರು | ” |
| 7. | ರಾಮಚಂದ್ರಗೌಡ<br>ವಿಧಾನ ಪರಿಷತ್ತಿನ ಸದಸ್ಯರು | ” |

(2003 - 2004)

ಶ್ರೀಯುತರುಗಳಾದ

| | | |
|---|---|---|
| 1. | ಬಿ.ಬಿ. ಶಿವಪ್ಪ<br>ವಿಧಾನಸಭಾ ಸದಸ್ಯರು | ಅಧ್ಯಕ್ಷರು |
| 2. | ಎಸ್. ಕೆ. ಬೆಳ್ಳುಬ್ಬಿ<br>ವಿಧಾನಸಭಾ ಸದಸ್ಯರು | ಸದಸ್ಯರು |
| 3. | ಬಿ.ಜಿ. ಗೋವಿಂದಪ್ಪ<br>ವಿಧಾನಸಭಾ ಸದಸ್ಯರು | ” |
| 4. | ಕೆ. ಷಡಾಕ್ಷರಿ<br>ವಿಧಾನಸಭಾ ಸದಸ್ಯರು | ” |
| 5. | ಎನ್. ವೈ. ಗೋಪಾಲ ಕೃಷ್ಣ<br>ವಿಧಾನಸಭಾ ಸದಸ್ಯರು | ಸದಸ್ಯರು |
| 6. | ಬಿ.ಎಸ್. ಯಡಿಯೂರಪ್ಪ<br>ವಿಧಾನಸಭಾ ಸದಸ್ಯರು | ಸದಸ್ಯರು |
| 7. | ಡಾ. ಎಂ.ಪಿ. ನಾಡಗೌಡ<br>ವಿಧಾನಸಭಾ ಸದಸ್ಯರು | ” |
| 8. | ಖೊತ ಸಚ್ಚಿದಾನಂದ<br>ವಿಧಾನಸಭಾ ಸದಸ್ಯರು | ” |

| ಭಾಷಾಂತರ ಪುಸ್ತಕಗಳು | | ದರ<br>ರೂ. |
|---|---|---|
| 1. | ಡಾ : ಬಿ.ಆರ್. ಅಂಬೇಡ್ಕರ್ | 20-00 |
| 2. | ಡಾ : ರಾಮಮನೋಹರ ಲೋಹಿಯಾ | 15-00 |
| 3. | ವಿ.ಕೆ. ಕೃಷ್ಣಮೆನನ್ | 20-00 |
| 4. | ಡಾ : ಶ್ಯಾಂಪ್ರಸಾದ್ ಮುಖರ್ಜಿ | 20-00 |
| 5. | ಶೇಖ್ ಮಹಮದ್ ಅಬ್ದುಲ್ಲಾ | 15-00 |
| 6. | ಡಾ : ರಾಜೇಂದ್ರ ಪ್ರಸಾದ್ | 20-00 |
| 7. | ಭೂಪೇಶ್ ಗುಪ್ತ | 20-00 |
| 8. | ಅನಂತಶಯನಂ ಅಯ್ಯಂಗಾರ್ | 20-00 |
| 9. | ಶ್ರೀಮತಿ ರಾಜಕುಮಾರಿ ಅಮೃತಕೌರ್ | 20-00 |
| 10. | ಡಾ : ಚಿಂತಾಮನ್ ಡಿ. ದೇಶ್‌ಮುಖ್ | 20-00 |
| 11. | ಪನಂಪಿಲ್ಲಿ ಗೋವಿಂದ ಮೆನನ್ | 15-00 |
| 12. | ಜೈ ಸುಖಲಾಲ್ ಹಾಥಿ | 15.00 |
| 13. | ಎಸ್.ಎಂ. ಜೋಷಿ | 15.00 |

## ಪ್ರತಿಭಾವಂತ ಸಂಸದೀಯ ಪಟುಗಳ ಬದುಕು-ಬರಹ ಮಾಲಿಕೆ

### ಸಂಪಾದಕ ವರ್ಗ

ಶ್ರೀಯುತರುಗಳಾದ :

1. ಟಿ. ರಾಜಣ್ಣ
   ಕಾರ್ಯದರ್ಶಿ

2. ಎಸ್.ಬಿ. ಪಾಟೀಲ್
   ಅಪರ ಕಾರ್ಯದರ್ಶಿ

3. ಟಿ.ಎನ್. ಧ್ರುವ ಕುಮಾರ್
   ಜಂಟಿ ಕಾರ್ಯದರ್ಶಿ

4. ಕೆ. ಚನ್ನಸ್ವಾಮಿ
   ಉಪಕಾರ್ಯದರ್ಶಿ

5. ಹೆಚ್.ಎಸ್. ಜಗನ್ನಾಥ್
   ಅಧೀನ ಕಾರ್ಯದರ್ಶಿ

6. ಶ್ರೀಮತಿ. ಅನಸೂಯ ಎಸ್. ದೇವಗಿರಿ
   ಹಿರಿಯ ಗ್ರಂಥಪಾಲಕಿ